# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...


ಭಾಷಿಕ ಮೂಲಭೂತವಾದಿಗಳ ಬೋನಿನಲ್ಲಿ ಕನ್ನಡ — *ಪ್ರೊ|| ಬರಗೂರು ರಾಮಚಂದ್ರಪ್ಪ* ... ೮

ಉನ್ನತ ಶಿಕ್ಷಣದ ವಿಭಿನ್ನ ಸವಾಲುಗಳು — *ಡಾ|| ಜಯಪ್ರಕಾಶ ಮಾವಿನಕುಳಿ* ... ೪೧

---

ಸ್ಥಿತ್ಯಂತರ — *ಸಿ. ಎನ್. ಮುಕ್ತಾ* ... ೧೬

ಗಣಪ ಮತ್ತು ಗಾಂಪ — *ಪಿ. ಬಿ. ಪ್ರಸನ್ನ* ... ೨೩

ಅಂದಿನ ಸಿನಿಮಾ — *ಬಿಂಡಿಗನವಿಲೆ ಭಗವಾನ್* ... ೫೭

ಉಗುರಿನ ಮೇಲೊಂದು ಸುತ್ತು — *ಸುಬ್ರಹ್ಮಣ್ಯ ಎಸ್. ಆರ್.* ... ೩೫

ಕಾವ್ಯಧಾರೆ — *೧೨, ೨೬, ೪೨, ೪೯, ೫೫, ೬೦*

---

ಮಾಧ್ಯಮ ಮತ್ತು ಮಾರುಕಟ್ಟೆ ಧರ್ಮಯುದ್ಧ — *ನಾ. ದಿವಾಕರ* ... ೪೮

---

ಗೊರೂರರ ಪ್ರಬಂಧಗಳು — *ರಾಮಲಿಂಗಪ್ಪ ಟಿ. ಬೇಗೂರು* ... ೧೩

ನಾನು ಬಡವನಯ್ಯ ಮತ್ತು ನಾನೇಕೆ ಬಡವ? ಒಂದು ಚಿಂತನೆ — *ಮೃತ್ಯುಂಜಯ ರುಮಾಲೆ* ... ೨೦

ರಾಮಾಯಣ ವಿಷವೃಕ್ಷಂ — *ನಗರಗೆರೆ ರಮೇಶ್* ... ೨೧

ವೈಜ್ಞಾನಿಕ ಸಮಾಜವಾದ — *ಆರ್. ಡಿ. ಹಳಿಂಗಳಿ* ... ೪೫

---

ಸರ್ಕಾರಿ ಉದ್ಯಮಗಳ ನಷ್ಟಕ್ಕೆ ಕಾರಣಗಳನ್ನು ಹುಡುಕುತ್ತಾ ... — *ಅಯ್ಯಪ್ಪ ಹೂಗಾರ್* ... ೨೯

ಈಶಾನ್ಯ ರಾಜ್ಯಗಳು : ಸೆರಗಿನ ಕೆಂಡ — *ಪ್ರೊ|| ಶಿವರಾಮಯ್ಯ* ... ೩೭

ಪ್ಲಾಸ್ಟಿಕ್ : ಆಕರ್ಷಣೆ ಜೊತೆಗೆ ಅಪಾಯ — *ಸುನಂದಾ ಸೋರಗಾಂವಿ* ... ೬೧

---

ಶಾಲೆಗಳು ರಾಜಕೀಯ ಪಕ್ಷಗಳ ಶಾಖಾ ಕಚೇರಿಗಳಾಗಬೇಕೆ? — *ಡಾ|| ನಿರಂಜನಾರಾಧ್ಯ ವಿ. ಪಿ.* ... ೩೯

ಬದುಕಿನಲ್ಲಿ ಧರ್ಮದ ಪಾತ್ರ - ಪ್ರತಿಕ್ರಿಯೆ — *ಎಂ. ಸಿ. ಡೋಂಗ್ರೆ* ... ೪೬

ಮನುಷ್ಯನೇ ನಿನ್ನ ಬೆಲೆಯೆಷ್ಟು! — *ಬಿ. ಆರ್. ಪೋಲೀಸ್ ಪಾಟೀಲ* ... ೫೨

ರಾಜೇಂದ್ರ ಚೆನ್ನಿಯವರ 'ಅಮೂರ್ತತೆ ಮತ್ತು ಪರಿಸರ' — *ಡಾ|| ಕೇಶವ ಶರ್ಮ ಕೆ.* ... ೫೯

---

ಸ್ವತಂತ್ರ ಪ್ಯಾಲಸ್ತೈನ್ ರಾಷ್ಟ್ರದ ಪ್ರತೀಕ - ಯಾಸರ್ ಅರಾಫತ್ — *ಸೀಯಾರ್ಕೆ* ... ೫೪

ಮೂಡಣದ ಚಿತ್ತಾರಗಳು — *ಡಾ|| ಬಿ. ಎಸ್. ಶೈಲಜಾ* ... ೫೬

ಹೊಸ ಓದು — *ಇಂದಿರಾಕುಮಾರಿ* ... ೫೮

ಎಲೆಲೆ, ಎಲೆ!! — *ವಿಜಯಾ ಶ್ರೀಧರ್* ... ೬೨



ಚಿತ್ರಗಳು : ಸೃಜನ್, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಎನ್. ಆರ್. ಬೊಮ್ನಳ್ಳಿ
ಆದರ್ಶ ಪೈ, ರಾಂಚಂದ್ರ ಕೊಪ್ಪಲು

ಬದುಕು ಅರಸುತ್ತ ಶಿಲ್ಪ : ಎಚ್. ಎನ್. ಕೃಷ್ಣಮೂರ್ತಿ

ಮುಖಚಿತ್ರ : ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಚ**ಳಿಗಾಲ ಆರಂಭವಾಗುವುದಕ್ಕೂ ಮೊದಲೇ ನಡುಕ ಶುರುವಾಗಿರುವ ಸಂದರ್ಭ ಈ ತಿಂಗಳಿನದು. ಜಯೇಂದ್ರ ಹೋದರೆ ವಿಜಯೇಂದ್ರ ಬರಬಹುದೆಂದು ನಿಸೂರಾಗಿರುವ ಸಮಯ ಇದಲ್ಲ. ಎಲ್ಲರಿಗೂ ಒಂದೇ ಕಾನೂನೆಂದು ಹೆಮ್ಮೆಯಿಂದ ಹೇಳುವ ಜಯಲಲಿತಾ ಎಂದೂ ವೆಲ್ಲೂರು ಜೈಲಿಗೆ ಹೋಗಲಿಲ್ಲ. ಹೋಗಲು ಆಕೆಗೆ ಅರ್ಹತೆ ಇರಲಿಲ್ಲವೆಂದಲ್ಲ. ಉಮಾ ಭಾರತಿಯ ದಸ್ತಗಿರಿಯಾದರೆ ಸುಸಜ್ಜಿತ ಅತಿಥಿ ಗೃಹವೊಂದು ಹಂಗಾಮಿಯಾಗಿ ಕಾರಾಗೃಹದ ಹಣೆಪಟ್ಟಿ ಧರಿಸುತ್ತದೆ. ಕಂಚಿ ಸ್ವಾಮಿಗಳಿಗೆ ಇಷ್ಟು ಸೌಜನ್ಯ ತೋರಿಸಿದ್ದರೆ ಕಾನೂನು ಕಡಿದುಬೀಳುತ್ತಿರಲಿಲ್ಲ. ಅವರ ಮಠದ ಒಂದು ಭಾಗವನ್ನು ಸದ್ಯಕ್ಕೆ 'ಕಾರಾಗೃಹ'ವೆಂದು ಕರೆದು ಅವರನ್ನಲ್ಲಿ ಇರಿಸಬಹುದಿತ್ತು. ಪೊಲೀಸ್ ಪಹರೆ ಹಾಕಿ ಅದು ಸಾರ್ವಜನಿಕ ಸ್ಥಳವಲ್ಲವೆಂದು ಜನರಿಗೆ ಮನವರಿಕೆ ಮಾಡಿಕೊಡಬಹುದಿತ್ತು. ಆಪಾದನೆ ಸ್ಥಿರವಾಗುವುದಕ್ಕೆ ಮುಂಚೆಯೇ ಸ್ವಾಮಿಗಳನ್ನು ಹೀಗೆ ನಡೆಸಿಕೊಂಡದ್ದು ತಾನು 'ಬ್ರಹ್ಮದ್ವೇಷಿ' ಎಂಬುದನ್ನು ಡಂಗೂರ ಹೊಡೆಯಲೆಂದೇ ಎಂಬುದನ್ನು ಜಯಲಲಿತಾ ಸ್ಪಷ್ಟಪಡಿಸಬೇಕು. ಬರಲಿರುವ ಚುನಾವಣೆಯಲ್ಲಿ ಅದ್ವಾನಿ ಸಖ್ಯ ಬೇಡವೆಂದು ಸಾರಿ ಹೇಳಲು ಮತ್ತು ಜಾತಿಗಣನೆಯಲ್ಲಿ ಕರುಣಾನಿಧಿಗಿಂತಲೂ ತಾನು ಕಡಿಮೆ ವಿಚಕ್ಷಣೆಯಲ್ಲ ಎಂಬುದನ್ನು ಶ್ರುತಪಡಿಸಲು ಸ್ವಾಮಿಗಳನ್ನು ಹೀನಾಯವಾಗಿ ನಡೆಸಿಕೊಳ್ಳಬೇಕಿರಲಿಲ್ಲ. ತಪ್ಪಿತಸ್ಥರೆಂದು ತೀರ್ಮಾನವಾದರೆ ಹೇಗೂ ಕಾರಾಗೃಹಕ್ಕೆ ಹೋಗುತ್ತಾರೆ; ಅದಕ್ಕೆ ಮೊದಲೇ ಅವರನ್ನು ಹೀಗೇಕೆ ಹಿಂಸಿಸಬೇಕಾಗಿತ್ತು ? ನ್ಯಾಯಾಲಯದ ವಿಚಾರಣೆ ನಡೆದ ನಂತರ ಅವರ ಕೀರ್ತಿಪತಾಕೆಯನ್ನು ಇನ್ನೂ ಎತ್ತರಕ್ಕೆ ಹಾರಿಸಲು ತಮಿಳುನಾಡು ಮುಖ್ಯಮಂತ್ರಿಯ ಪೂರ್ವಪೀಠಿಕೆ ಇದೆಂದು ಭಾವಿಸಬಹುದೇನೋ, ತಿಳಿಯದು. ದೀಪಾವಳಿಯಂದು ಸ್ವಾಮಿಗಳನ್ನು ಬಂಧಿಸಿದಂತೆ ಇಸ್ಲಾಂ ಅಥವಾ ಕ್ರೈಸ್ತ ಧಾರ್ಮಿಕ ಮುಖಂಡರನ್ನು ಅವರ ಹಬ್ಬದ ದಿನಗಳಂದು ಬಂಧಿಸಲಾಗುತ್ತಿತ್ತೆ ಎಂದು ಪ್ರವೀಣ ತೋಗಡಿಯಾ ಕೇಳಿರುವುದು ಅಸಂಬದ್ಧವಾದ ಪ್ರಶ್ನೆಯೇನಲ್ಲ. ಸ್ವಾಮಿಗಳ ಚಲನವಲನಗಳನ್ನು ಗಮನಿಸುತ್ತಿದ್ದು ನಂತರ ಅನಿವಾರ್ಯವೆನಿಸಿದಾಗ ಅವರ ಮೇಲೆ ಕ್ರಮ ಕೈಗೊಂಡಿದ್ದರೆ ಆಕಾಶವೇನೂ ಕಳಚಿ ಬೀಳುತ್ತಿರಲಿಲ್ಲ.

ಸ್ವಾಮಿಗಳ ಬಂಧನಕ್ಕೆ ಬಂದಿರುವ ಹಲವು ಪ್ರತಿಕ್ರಿಯೆಗಳು ಒಂದೆರಡು ಮುಖ್ಯ ಪ್ರಶ್ನೆಗಳಿಗೆ ಅವಕಾಶ ಮಾಡಿಕೊಟ್ಟಿವೆ. ಅವರ ಮೇಲಿನ ಆಪಾದನೆ ಸಾಬೀತಾಗುವವರೆಗೆ ಈ ರೀತಿಯ ಕಾರಾಗೃಹ ವಾಸ ಅವರಿಗೆ ಬೇಡವೋ ಅಥವಾ ಏನೇ ಆದರೂ ಅವರಂಥ ಧರ್ಮಗುರುಗಳಿಗೆ ಶಿಕ್ಷೆ ಬೇಡವೋ ? ಎರಡನೆಯ ಪ್ರಶ್ನೆಗೆ 'ಖಂಡಿತ ಬೇಡ' ಎನ್ನುವ ಧ್ವನಿಗಳು ವಿಪುಲವಾಗಿ ಕೇಳಿಬಂದಿವೆ. ಅದು ಸರಿ ಎನ್ನುವುದಾದರೆ, ಅಂತಹವರ ಪಟ್ಟಿಗೆ ಇನ್ನೂ ಯಾರಾರನ್ನು ಸೇರಿಸಬೇಕು ? ವಿಶ್ವ ಹಿಂದು ಪರಿಷತ್ತಿನ ವಕ್ತಾರರ ಪ್ರಕಾರ ದೇಶದ ಎಲ್ಲ ಸಾಧುಗಳಿಗೂ ಈ ಸೌಲಭ್ಯವಿರಬೇಕು. ಏಕೆಂದರೆ ಅವರು 'ಸಾಧು'ಗಳು ! ಹಾಗೆ ಸೌಲಭ್ಯ ಕಲ್ಪಿಸಿಕೊಟ್ಟರೆ ದರೋಡೆಕೋರರು ಮತ್ತು ಹಂತಕರು ತಮ್ಮ ಕ್ರಿಯೆಯ ನಂತರ ಕಮಂಡಲು ಹಿಡಿಯ ಹೊರಟರೆ ಆಶ್ಚರ್ಯವಿಲ್ಲ. ಸ್ವಾಮಿಗಳ ಬಂಧನವು ಇಡೀ ಹಿಂದು ಸಮುದಾಯದ ಮೇಲೆಳೆದಿರುವ ಬರೆ ಎಂದು ಕೆಲವರು ಹೇಳಿದ್ದಾರೆ. ಅದಂತೂ ಅರ್ಥರಹಿತ. ಒಬ್ಬ ವ್ಯಕ್ತಿಯ ಮೇಲಿನ ಕ್ರಮವು ಆ ವ್ಯಕ್ತಿಯ ಘನತೆಗೊಂದು ಬರೆ, ಅಷ್ಟೆ. ಆತ ಸಾಂಸ್ಕೃತಿಕ ವ್ಯಕ್ತಿಯಾದ್ದರಿಂದ ಹೀಗೆ ಬಂಧಿಸಬಾರದಿತ್ತೆಂದು ಹೇಳುವಾಗ, ಆಪಾದನೆ ನಿಜವಾದರೆ ಆತನು ಸಾಂಸ್ಕೃತಿಕ ವ್ಯಕ್ತಿಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆಯೆಂಬುದನ್ನು ಮರೆಯಬಾರದು. ಸಾಯಿಬಾಬಾ ಆಶ್ರಮದಲ್ಲಿ ಕೊಲೆಗಳಾದಾಗಲೂ ಈ ಪ್ರಶ್ನೆ ಬಂದಿತ್ತು. ಆಗ ಕೇಂದ್ರ ಮಂತ್ರಿಯಾಗಿದ್ದ ಎಸ್. ಬಿ. ಚವಾಣ್ ಧಾವಿಸಿಬಂದು ಸಾಯಿಬಾಬಾಗೆ ರಕ್ಷಣೆ ನೀಡಿದರೆಂಬ ವದಂತಿಯಿತ್ತು. ಹೀಗೆ ರಕ್ಷಣೆ ಪಡೆಯುವುದು ಸಂಸ್ಕೃತಿಯಲ್ಲ. ಕಂಚಿ ಸ್ವಾಮಿಗಳು ಇನ್ನೂ ಅಂತಹ ರಕ್ಷಣೆ ಪಡೆದಿಲ್ಲದಿರುವುದು ಗಮನಾರ್ಹ. ಆಪಾದನೆಗಳು ಹೊರಬರದೆ ಮರೆಯಲ್ಲೇ ಅಡಗಿರುವ ಬೇರೆ ಹಲವು ಸ್ವಾಮಿಗಳಿದ್ದಾರೆಂಬುದು ನಿತ್ಯಸತ್ಯ. ಕಂಚಿ ಸ್ವಾಮಿಗಳು ಮಾತ್ರ ಈಗ ಬಲೆಗೆ ಬಿದ್ದಿದ್ದಾರೆ. ಇದರ ಬಗ್ಗೆ ಅತಿಹೆಚ್ಚಿನ ಕೋಪ ಪ್ರಕಟವಾಗಿರುವುದು ಹೊರಗಿನ ದೇಶಗಳಲ್ಲಿರುವ ಭಕ್ತರಿಂದ. ಸ್ವದೇಶಿ ಅಭಿಮಾನ ಮೆರೆಯಲು ವಿದೇಶಗಳಲ್ಲಿ ನೆಲೆಸಿರುವ ಈ ಮಹಾತ್ಮರ ಕರುಳು ಕಿತ್ತುಬಂದಿದೆ. ಬೇರೆಯವರಿಗಿಂತ ಅವರದೇ ಮಹತ್ತರ ದುಗುಡ. ತೋಗಡಿಯಾ ಹೇಳುತ್ತಾರೆ, ೮೩ ಕೋಟಿ ಹಿಂದುಗಳು ರಾಜಕೀಯ ಅನಾಥರಾಗಿಬಿಟ್ಟಿದ್ದಾರೆಂದು. ಅವರ ಪ್ರಕಾರ "ಧರ್ಮದ್ರೋಹಿಗಳು, ಶಿವದ್ರೋಹಿಗಳು" ಹಿಂದೂ ಮಠ ಮತ್ತು ಸಮಾಜಗಳನ್ನು

*೧೫ನೇ ಪುಟಕ್ಕೆ*




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ-೫ ಡಿಸೆಂಬರ್ ೨೦೦೪





***ಮುದ್ರಣ***

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

***ಹೊಸತು ಕಚೇರಿಯ ವಿಳಾಸ***






**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


# ಕವಲು ದಾರಿಯಲ್ಲಿ ಬ್ಯಾಂಕಿಂಗ್ ಉದ್ಯಮ

**ಸಂಪಾದಕೀಯ**

**ಜಾ**ಗತೀಕರಣ ಪ್ರಕ್ರಿಯೆಯಿಂದಾಗಿ ಹಣಕಾಸು ವಲಯದಲ್ಲಿ ತೀವ್ರ ಪೈಪೋಟಿಯಿಂದ ತುಂಬಿದ ವಾತಾವರಣ ರೂಪುಗೊಳ್ಳುತ್ತಿದೆ; ಇದರಿಂದಾಗಿ ಬ್ಯಾಂಕುಗಳು ಹೆಚ್ಚು ಸಮರ್ಥವಾಗಿ, ಲಾಭದಾಯಕವಾಗಿ ಕಾರ್ಯ ನಿರ್ವಹಿಸಬೇಕಾಗಿದೆ; ಈ ದೃಷ್ಟಿಯಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ವ್ಯಾಪಕ ಸುಧಾರಣೆಗಳನ್ನು ಜಾರಿಗೆ ತರಲು ಸರಕಾರ ಉದ್ದೇಶಿಸುತ್ತಿದೆ ಎಂದು ಇತ್ತೀಚೆಗೆ ವಿತ್ತ ಸಚಿವ ಚಿದಂಬರಂ ಹೇಳಿದ್ದಾರೆ. ಮೇಲ್ನೋಟಕ್ಕೆ ಸಚಿವರ ಹೇಳಿಕೆಯು ಸ್ವಾಗತಾರ್ಹವೆನಿಸಿದರೂ ರಾಷ್ಟ್ರದ ಆರ್ಥಿಕತೆಯ ಹಿತದೃಷ್ಟಿಯಲ್ಲಿ ಇಂತಹ ಮಹತ್ವದ ಉಪಕ್ರಮಗಳ ಹಿಂದಿರುವ ರಾಜಕೀಯ ಹಾಗೂ ವರ್ಗಾಧಾರಿತ ಒತ್ತಾಸೆಗಳೇ ಅಲ್ಲದೆ ಅದರಿಂದಾಗಿ ಸಂಭವಿಸಬಹುದಾದ ಸಾಮಾಜಿಕ ಪರಿಣಾಮಗಳ ಕುರಿತು ರಾಷ್ಟ್ರಮಟ್ಟದ ಚರ್ಚೆಯಾಗಬೇಕಿದೆ.

ಇದು ಜಾಗತೀಕರಣದ ಪರ್ವಕಾಲ. ಅಂದರೆ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಹಾಗೂ ವಿಶ್ವಬ್ಯಾಂಕುಗಳ ಮೂಲಕ ಮುಂದುವರೆದ ರಾಷ್ಟ್ರಗಳು, ಅದರಲ್ಲೂ ಸಾಮ್ರಾಜ್ಯಶಾಹಿ ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳು ಮತ್ತು ಸಂಸ್ಥೆಗಳು, ಮೂರನೇ ಜಗತ್ತಿನ ರಾಷ್ಟ್ರಗಳ ಆರ್ಥಿಕತೆಯನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳುತ್ತಿರುವ ಸಂದರ್ಭ. ಬಹುತೇಕ ಕೆಲವೇ ಮನೆತನಗಳ ಸ್ವಾಮ್ಯಕ್ಕೆ ಒಳಪಟ್ಟಿದ್ದ ನಮ್ಮ ರಾಷ್ಟ್ರದ ೧೪ ಬ್ಯಾಂಕುಗಳನ್ನು ೧೯೬೯ರಲ್ಲಿ ರಾಷ್ಟ್ರೀಕರಣಗೊಳಿಸಿ ಅಂದಿನ ಸರಕಾರ ಅವುಗಳನ್ನು ತನ್ನ ಹತೋಟಿಗೆ ತೆಗೆದುಕೊಂಡದ್ದು ಒಂದು ಐತಿಹಾಸಿಕ ಹಾಗೂ ಪ್ರಗತಿಪರ ಕ್ರಮ. ಅಂದು ಆ ಬ್ಯಾಂಕುಗಳ ಶಾಖೆಗಳು ಒಟ್ಟು ಇದ್ದದ್ದು ೮೨೬೮ (ಗ್ರಾಮೀಣ ಶಾಖೆಗಳು ೧೫೩೩); ಒಟ್ಟು ಠೇವಣಿ ಮೊತ್ತ ೪೬೬೫ ಕೋಟಿ ರೂ. ಒಟ್ಟು ಸಾಲದ ಮೊತ್ತ ೩೬೯ ಕೋಟಿ ರೂ. (ಕೃಷಿಗೆ ೧೬೨ ಕೋಟಿ). ಈಗಿರುವ ಒಟ್ಟು ಶಾಖೆಗಳು ೬೨೦೦೦ (ಗ್ರಾಮೀಣ ೩೨೩೦೦). ಠೇವಣಿ ೧೫,೮೧,೨೮೮ ಕೋಟಿ ರೂ. ಸಾಲ ೮,೮೪,೧೯೫ ಕೋಟಿ ರೂ. (ಕೃಷಿಗೆ ೮೫೦೦೦ ಕೋಟಿ). ಕಂಡುಕೇಳರಿಯದ ಮೂಲೆಮೂಲೆಯಲ್ಲಿನ ಹಳ್ಳಿಗಳಲ್ಲಿಯೂ ಶಾಖೆಗಳನ್ನು ಪ್ರಾರಂಭಿಸಲಾಗಿದ್ದು ರಾಷ್ಟ್ರೀಕೃತ ಬ್ಯಾಂಕುಗಳ ಒಟ್ಟಾರೆಯ ಕಾರ್ಯಾಚರಣೆಯು ಜನಮನ್ನಣೆ ಗಳಿಸಿದೆ. ಇದೀಗ ಅಂತರರಾಷ್ಟ್ರೀಯ ಬಂಡವಾಳಶಾಹಿಯ ವಕ್ರದೃಷ್ಟಿ ನಮ್ಮ ಬ್ಯಾಂಕುಗಳ ಒಟ್ಟು ಠೇವಣಿ ಹಣ ೧೫,೮೧,೨೮೮ ಕೋಟಿ ರೂ. ಗಳ ಮೇಲೆ ಬಿದ್ದಿದೆ. ಆ ಹಣದ ಮೇಲೆ ತನ್ನ ಹತೋಟಿ ಸಾಧಿಸಲು ಹವಣಿಸುತ್ತಿದೆ. ಇಂತಹ ವಿದೇಶಿ ರಣಹದ್ದುಗಳೊಡನೆ ಶಾಮೀಲಾಗಲು ನಮ್ಮ ವ್ಯವಸ್ಥೆಯಲ್ಲಿಯೇ ಆಂತರಿಕವಾಗಿ ಹಲವಾರು ಶಕ್ತಿಗಳು ತಯಾರಿ ನಡೆಸುತ್ತಲೇ ಇವೆ. ಬ್ಯಾಂಕುಗಳು ೧೯೬೯ರಲ್ಲಿ ರಾಷ್ಟ್ರೀಕರಣಗೊಂಡ ಸಂದರ್ಭದಲ್ಲೇ ಪ್ರತಿರೋಧ ವ್ಯಕ್ತಪಡಿಸಿದ ಇದೇ ಶಕ್ತಿಗಳು ಸಾರ್ವಜನಿಕ ಕ್ಷೇತ್ರವನ್ನು ಬುಡಮೇಲು ಮಾಡುವ ಪ್ರಯತ್ನಗಳನ್ನು ಇಂದಿಗೂ ಮುಂದುವರಿಸಿಕೊಂಡೇ ಬಂದಿವೆ. ಭಾಜಪ ನೇತೃತ್ವದ ಎನ್‌ಡಿಎ ಸರಕಾರ ತನ್ನ ಅಧಿಕಾರಾವಧಿಯಲ್ಲಿ ಬೃಹತ್ ಬ್ಯಾಂಕುಗಳನ್ನು ಖಾಸಗಿಯವರಿಗೆ ಹಸ್ತಾಂತರಿಸುವ ಚಿತಾವಣೆ ನಡೆಸುತ್ತಿತ್ತು ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಇಂತಹ ಜನವಿರೋಧಿ ನೀತಿಗಳನ್ನು ಬ್ಯಾಂಕ್ ನೌಕರರ ಸಂಘಟನೆಗಳು, ಎಡಪಕ್ಷಗಳು, ಮತ್ತಿತರ ಪ್ರಗತಿಪರ ಜನವಿಭಾಗಗಳು ಯಶಸ್ವಿಯಾಗಿ ಹಿಮ್ಮೆಟಿಸಿದ್ದು ಪ್ರಶಂಸನೀಯ. ಕಾಂಗ್ರೆಸ್ ಪಕ್ಷವೂ ಎನ್‌ಡಿಎ ಸರಕಾರದ ನೀತಿಗಳನ್ನು ಅಂದಿನ ಸಂದರ್ಭದಲ್ಲಿ ವಿರೋಧಿಸಿತ್ತು ಎಂಬುದು ಗಮನಾರ್ಹ. ಈಗಿನ ಯುಪಿಎ ಸರಕಾರವೇನೋ ಬ್ಯಾಂಕುಗಳಲ್ಲಿನ ತನ್ನ ಬಂಡವಾಳದ ಪಾಲನ್ನು ಹಿಂತೆಗೆಯುವ ಪ್ರಶ್ನೆಯೇ ಇಲ್ಲ ಎಂದು ಹೇಳಿದೆ. ಇಷ್ಟಾದರೂ ಕೆಲವು ಬ್ಯಾಂಕುಗಳ ಆಡಳಿತ ವರ್ಗಗಳು ತಮ್ಮ ಬಂಡವಾಳದ ಶೇ. ೪೯ರಷ್ಟು ಭಾಗವನ್ನು ಶೇರುಗಳಾಗಿ ಪರಿವರ್ತಿಸಿ ಮಾರುಕಟ್ಟೆಗೆ ಒಪ್ಪಿಸುವ ಸಾಧ್ಯತೆಗಳಿವೆ. ಇದರಿಂದಾಗಿ ಅವುಗಳ ಮೇಲಿನ ಸರಕಾರದ ಒಡೆತನ ಆ ಮಟ್ಟಿಗೆ ಕಡಿಮೆಯಾಗಿ ಖಾಸಗಿ ತಿಮಿಂಗಿಲಗಳು ತಮ್ಮ ಯಾಜಮಾನ್ಯ ಸ್ಥಾಪಿಸುವುದು ದೂರದ ಮಾತೇನಲ್ಲ.

ಈಗಿನ ಕೇಂದ್ರ ಸರಕಾರ ತಾನೇ ಘೋಷಿಸಿರುವ ಸಾಮಾನ್ಯ ಕನಿಷ್ಠ ಕಾರ್ಯಕ್ರಮದನುಸಾರವಾಗಿ ಸರ್ವಾಂಗೀಣ ಆರ್ಥಿಕ ಅಭಿವೃದ್ಧಿ, ಆರ್ಥಿಕ ಪುನಶ್ಚೇತನ, ಗ್ರಾಮೀಣ ಅಭಿವೃದ್ಧಿ, ಹೆಚ್ಚಿನ ಉದ್ಯೋಗಾವಕಾಶಗಳು ಮುಂತಾದವುಗಳಿಗೆ ಆದ್ಯತೆ ನೀಡಬೇಕಾದರೆ ಸಾರ್ವಜನಿಕ ಕ್ಷೇತ್ರದಲ್ಲಿ ಬ್ಯಾಂಕುಗಳ ಕಾರ್ಯವ್ಯಾಪ್ತಿಯನ್ನು ಮತ್ತಷ್ಟು ವಿಸ್ತರಿಸುವುದಲ್ಲದೆ ಅವುಗಳನ್ನು ಇನ್ನೂ ಬಲಗೊಳಿಸುವ ನಿಟ್ಟಿನಲ್ಲಿ ಕ್ರಮಗಳನ್ನು ಕೈಗೊಳ್ಳಬೇಕೆಂಬುದು ನಿರ್ವಿವಾದ. ಗ್ರಾಮೀಣ ಜನತೆಗೆ, ಎಂದರೆ ಕೃಷಿ ವಲಯದಲ್ಲಿ, ನೀಡುವ ಸಾಲದ ಬಡ್ಡಿ ದರದಲ್ಲಿ ರಿಯಾಯಿತಿಯ ಜೊತೆಗೆ ಸಣ್ಣಪುಟ್ಟ ಹೂಡಿಕೆದಾರರ ಠೇವಣಿ ಬಡ್ಡಿದರದ ಹೆಚ್ಚಳದಂತಹ ಅಂಶಗಳತ್ತಲೂ ಸರಕಾರ ಕೂಡಲೆ ಗಮನ ಹರಿಸಬೇಕಾಗಿದೆ. ಆದರೆ, ಈಗಿನ ವಾಸ್ತವ ಪರಿಸ್ಥಿತಿಯಾದರೂ ಏನು ? ೧೯೯೧ರಲ್ಲಿ ಜಾರಿಗೆ ತರಲಾದ ಹೊಸ ಆರ್ಥಿಕ ನೀತಿಯಿಂದಾಗಿ ವಿಶ್ವಬ್ಯಾಂಕ್, ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವ ವ್ಯಾಪಾರ ಸಂಸ್ಥೆಗಳು ನಮ್ಮ ರಾಷ್ಟ್ರದ ಇಡೀ ಆರ್ಥಿಕ ವ್ಯವಸ್ಥೆಯ ಮೇಲೆ ತಮ್ಮ ಸಂಪೂರ್ಣ ಹಿಡಿತ ಸಾಧಿಸುವಂತಾದದ್ದನ್ನು ಮರೆಯಲಾಗದು. ಬ್ಯಾಂಕಿಂಗ್ ವ್ಯವಸ್ಥೆಗೂ ಇದರ ಬಿಸಿ ಸಾಕಷ್ಟು ತಟ್ಟಿದೆ. ಉಳ್ಳವರ ಮತ್ತು ಕೆಳವರ್ಗದವರ ಮಧ್ಯದ ಕಂದರ ಬಹುಮಟ್ಟಿಗೆ ಹೆಚ್ಚಿದೆ. ತಮಗಿರಬೇಕಾದ ಸಾಮಾಜಿಕ ಬದ್ಧತೆಗೆ ತಿಲಾಂಜಲಿಯಿತ್ತಿರುವ ಬ್ಯಾಂಕುಗಳು ಕೇವಲ ವ್ಯಾಪಾರಿ ಮನೋಭಾವದಿಂದ ವ್ಯವಹರಿಸಲು ಪ್ರಾರಂಭಿಸಿವೆ. ಜಾಗತಿಕ ಪೈಪೋಟಿಯ ನೆಪದಲ್ಲಿ ಬೃಹತ್ ಬ್ಯಾಂಕುಗಳನ್ನು ಒಂದರಲ್ಲೊಂದು ವಿಲೀನಗೊಳಿಸಿ ಇಡೀ ಹಣಕಾಸು ವ್ಯವಸ್ಥೆಯನ್ನೇ ವಿರೂಪಗೊಳಿಸುವ ಹವಣಿಕೆಯಲ್ಲಿ ಹಲವು ರಾಜಕೀಯ ಶಕ್ತಿಗಳು ತೊಡಗಿವೆ. ನಮ್ಮ ದೇಶದ ಖಾಸಗೀ ಬ್ಯಾಂಕುಗಳ ಕಪ್ಪು ಇತಿಹಾಸವನ್ನು ಜನರು ಇನ್ನೂ ಮರೆತಿಲ್ಲ. ಗ್ಲೋಬಲ್ ಟ್ರಸ್ಟ್ ಬ್ಯಾಂಕ್ ದಿವಾಳಿಯೆದ್ದ ಪ್ರಕರಣ ಈ ನಿಟ್ಟಿನಲ್ಲಿ ಇತ್ತೀಚಿನ ನಿದರ್ಶನವಾಗಿದೆ. ಈ ಹಿನ್ನೆಲೆಯಲ್ಲಿ ನರಸಿಂಹಂ ಸಮಿತಿಯ ಶಿಫಾರಸುಗಳಿಗನುಸಾರವಾಗಿ ಬ್ಯಾಂಕಿಂಗ್ ವಲಯದ ಪುನಾರಚನೆ ಕುರಿತ ಸರಕಾರದ ಪ್ರಯತ್ನಗಳು ಆರ್ಥಿಕ ತಜ್ಞರ ತೀವ್ರ ಟೀಕೆಗೆ ಗುರಿಯಾಗುತ್ತಿರುವುದು ಆಶ್ಚರ್ಯವೇನಲ್ಲ.

ಇಂದಿನ ಜಾಗತಿಕ ಸಂದರ್ಭದಲ್ಲಿ ಯಾವುದೇ ರಾಷ್ಟ್ರದ ಆರ್ಥಿಕ ಅಭಿವೃದ್ಧಿಗೆ ವಿದೇಶಿ ಬಂಡವಾಳದ ಅವಶ್ಯಕತೆಯಿರುವುದು ಸಹಜವೇ. ಆದರೆ ಬಂಡವಾಳ ಹೂಡಿಕೆಯನ್ನು ಮೂಲಭೂತ ಆರ್ಥಿಕ ಅಭಿವೃದ್ಧಿ ಮತ್ತು ಉದ್ಯೋಗ ಸೃಷ್ಟಿಯಂತಹ ಜನಪರ ಯೋಜನೆಗಳಿಗೆ ಮಾತ್ರ ಸೀಮಿತಗೊಳಿಸುವುದು ರಾಷ್ಟ್ರದ ಒಟ್ಟಾರೆ ಹಿತದೃಷ್ಟಿಯಲ್ಲಿ ಸೂಕ್ತ. ಇದಾವುದನ್ನೂ ಲೆಕ್ಕಿಸದೆ ಬೇಸೆಲ್ ಕಮಿಟಿಯ ಷರತ್ತುಗಳಿಗೆ ತಲೆಬಾಗಿ ಎಗ್ಗುತಗ್ಗಿಲ್ಲದೆ ವಿದೇಶಿ ಬಂಡವಾಳವನ್ನು

ಬರಮಾಡಿಕೊಂಡ ದಕ್ಷಿಣ ಕೊರಿಯ, ತೈವಾನ್,ಇಂಡೋನೇಷಿಯಾ, ಬ್ರೆಜಿಲ್ ಮುಂತಾದ ರಾಷ್ಟ್ರಗಳಿಗೆ ಬಂದೊದಗಿದ ದುರ್ಗತಿಯ ಹಿನ್ನೆಲೆಯಲ್ಲಿ ಈ ಮಾತುಗಳನ್ನು ಹೇಳಲೇಬೇಕಿದೆ. ಏಕೆಂದರೆ ಲಾಭಗಳಿಕೆಯೊಂದೇ ವಿದೇಶಿ ಬಂಡವಳಿಗರ, ವಿದೇಶಿ ಹಣಕಾಸು ಸಂಸ್ಥೆಗಳ ಮೂಲ ಉದ್ದೇಶ. ಹಿಂದುಳಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ಬೆಳವಣಿಗೆಗೆ ನೆರವು ನೀಡುವ ಉದ್ದೇಶ ಎಂದಿಗೂ ಅವರಿಗಿಲ್ಲ. ಇಲ್ಲಿ ಬಂಡವಾಳ ಹೂಡಿ ಅತಿ ಶೀಘ್ರ ಅವಧಿಯಲ್ಲಿ ಲಾಭ ಗಳಿಸಿಕೊಂಡು ಅದೇ ಹಣವನ್ನು ಸ್ವದೇಶಕ್ಕೇ ರವಾನಿಸುವುದು ಅಥವಾ ಅದೇ ಬಂಡವಾಳವನ್ನು ಹಿಂತೆಗೆದು ಬೇರೆಡೆ ಬಳಸಿಕೊಳ್ಳುವುದು ಹಿಂದಿನಿಂದಲೂ ಅವರು ಅನುಸರಿಸಿಕೊಂಡು ಬರುತ್ತಿರುವ ನೀತಿ.

ಇದೇ ವರ್ಷ ಸುಮಾರು ೧೨,೦೦೦ ಕೋಟಿ ರೂ. ವಸೂಲಾಗದ ಸಾಲವೂ ಸೇರಿದಂತೆ ಬ್ಯಾಂಕುಗಳು ಕೈಬಿಟ್ಟಿರುವ ಒಟ್ಟು ಸಾಲದ ಮೊತ್ತ ೧ ಲಕ್ಷ ಕೋಟಿಗೂ ಹೆಚ್ಚಿನಷ್ಟಿದೆ. ಸಾಲಗಾರರಲ್ಲಿ ಹೆಚ್ಚಿನವರು ದೇಶದ ಬಹು ದೊಡ್ಡ 'ಖ್ಯಾತ' ಗುತ್ತೇದಾರಿ ಸಂಸ್ಥೆಗಳು ಮತ್ತು ಉದ್ಯಮಗಳು. ಇಂತಹ ಆತಂಕಕರ ಪರಿಸ್ಥಿತಿಯಲ್ಲಿ ಬ್ಯಾಂಕ್ ವ್ಯವಸ್ಥೆಯೊಂದಿಗೆ ಸುಧಾರಣೆಯ ನೆಪದಲ್ಲಿ ಚೆಲ್ಲಾಟ ಆಡಹೊರಟಿರುವುದು ಖಂಡನೀಯ. ಜನತೆ ಇದನ್ನು ಸಹಿಸಕೂಡದು.

ಆಗಲೇ ಪ್ರಸ್ತಾಪಿಸಿದಂತೆ ಪ್ರಮುಖ ಬ್ಯಾಂಕುಗಳನ್ನು ಒಂದರಲ್ಲೊಂದು ಮಿಲನಗೊಳಿಸಿ ಅವುಗಳನ್ನು ಐದಾರು ಬೃಹತ್ ಸಂಸ್ಥೆಗಳನ್ನಾಗಿ ಪರಿವರ್ತಿಸಿದರೆ ಜಾಗತಿಕ ಮಟ್ಟದಲ್ಲಿ ಸ್ಪರ್ಧಾತ್ಮಕವಾಗಿ ಕಾರ್ಯ ನಿರ್ವಹಿಸಬಲ್ಲವು ಎಂಬ ಚಿಂತನೆ ಸರಕಾರಕ್ಕಿದೆ. ಆಯಾ ಬ್ಯಾಂಕುಗಳು ತಮ್ಮದೇ ಆದ ಸಂಸ್ಕೃತಿ, ಪ್ರಾದೇಶಿಕ ಪ್ರಭಾವಳಿ ಮತ್ತು ಜನಸಂಪರ್ಕ ನೀತಿಗಳನ್ನು ರೂಪಿಸಿಕೊಂಡಿರುತ್ತವೆ. ಅಲ್ಲದೆ, ಇಂತಹ ಪರಿವರ್ತನೆಯಿಂದ ಸಿಬ್ಬಂದಿವರ್ಗ ಅತೀವ ಸಂಕಷ್ಟಗಳಿಗೆ ಸಿಲುಕಿಕೊಳ್ಳುತ್ತದೆ. ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ಅಸ್ತಿತ್ವವನ್ನೇ ಬದಲಾಯಿಸಲು ಯೋಜಿಸುತ್ತಿರುವುದು ಬಹಳ ಅವೈಜ್ಞಾನಿಕ.

ಇತರ ಜನಪರ ಯೋಜನೆಗಳಿಗಾಗಿ ಹಣದ ತುರ್ತು ಅವಶ್ಯಕತೆ ಇದೆ ಎಂಬ ನೆಪದಲ್ಲಿ ಸರಕಾರ ತನ್ನ ಹೂಡಿಕೆಯ ಪಾಲನ್ನು ಹಿಂತೆಗೆದು ಬ್ಯಾಂಕುಗಳ ವಹಿವಾಟನ್ನು ಮುಕ್ತ ಮಾರುಕಟ್ಟೆಯ ಅನಿಶ್ಚತತೆಗಳಿಗೆ, ವಿದೇಶಿ ಬಂಡವಳಿಗ ಸಂಸ್ಥೆಗಳಿಗೆ, ಕಂಪೆನಿಗಳಿಗೆ ಕ್ರಮೇಣ ತೆರೆದಿಡುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದರಿಂದಾಗಿ ಸಹಸ್ರಾರು ನೌಕರರು ಬೀದಿ ಪಾಲಾಗುತ್ತಾರೆ. ಬ್ಯಾಂಕುಗಳು ಜನಸಾಮಾನ್ಯರಿಗಾಗಿ ಕಾರ್ಯ ನಿರ್ವಹಿಸುವ ಸಂಸ್ಥೆಗಳಾಗಿರಬೇಕು. ಇದಕ್ಕೆ ವಿರುದ್ಧವಾಗಿ ಅವುಗಳನ್ನು ವಿದೇಶೀಯರ ಅಥವಾ ಬಹುರಾಷ್ಟ್ರೀಯ ಕಂಪನಿಗಳ ಸ್ವತ್ತಾಗಿ ಪರಿವರ್ತಿಸುವುದು ಸಂವಿಧಾನವಿರೋಧಿ ಕೆಲಸ. ಅಮೆರಿಕಾ, ಕೆನಡಾ, ಫ್ರಾನ್ಸ್‌ನಂತಹ ದೇಶಗಳಲ್ಲೇ ವಿದೇಶಿ ಬಂಡವಾಳ ಹೂಡಿಕೆಯ ಮಿತಿಯು ಶೇ. ೨೦ರಿಂದ ೩೨ರಷ್ಟು ಇರುವಾಗ ಇಲ್ಲಿನ ಖಾಸಗಿ ವಲಯದ ವಕ್ತಾರರು ಈ ನಿಟ್ಟಿನಲ್ಲಿ ತೋರುತ್ತಿರುವ ತರಾತುರಿಗೆ ಕಾರಣವಾದರೂ ಏನು? ಯಾರ ಹಿತಕ್ಕಾಗಿ? ಸಾರ್ವಜನಿಕ ಹಣದ ಲೂಟಿಗೆ ಇದು ಉಪಕ್ರಮ.

೧೯೯೧ರ ನಂತರ ವಿದೇಶಿ ಬ್ಯಾಂಕುಗಳಿಗೆ ಭಾರತದಲ್ಲಿ ವಹಿವಾಟನ್ನು ನಡೆಸಲು ಪರವಾನಗಿ ದೊರೆತದ್ದು ಇಂದಿನ ಪ್ರಧಾನಿ ಮನಮೋಹನ ಸಿಂಗರ ಆಡಳಿತಾವಧಿಯಲ್ಲಿಯೇ. ಕೇವಲ ದೊಡ್ಡ ದೊಡ್ಡ ನಗರಗಳಲ್ಲಿ ಶಾಖೆಗಳನ್ನು ತೆರೆದು ಮೇಲ್ವರ್ಗದ ಜನರ ಅಗತ್ಯಗಳಿಗೆ ಸಾಲವನ್ನು ನೀಡಿ ಇಡೀ ಆರ್ಥಿಕತೆಯನ್ನು ವಿರೂಪಗೊಳಿಸಿದ್ದೇ ಇವುಗಳ 'ಹೆಗ್ಗಳಿಕೆ'. ಮೂಲಭೂತ ಆರ್ಥಿಕ ಚಟುವಟಿಕೆಗಳಲ್ಲಿ ನೆರವಾಗಲು ಯಾವತ್ತಿಗೂ ತಯಾರಿಲ್ಲದ ಈ ಬ್ಯಾಂಕುಗಳ ಗೊಡವೆಯಾದರೂ ಯಾಕೆ ಬೇಕು?

ಹೊಸ ಆರ್ಥಿಕ ನೀತಿಯಿಂದಾಗಿ ಜನತೆ ಬೇಸತ್ತಿದ್ದಾರೆ. ಹೊಸ ಆರ್ಥಿಕ ನೀತಿಗೂ ಕೋಮುವಾದಕ್ಕೂ ಇರುವ ಅಂತರ್‌ಸಂಬಂಧಗಳು ಜನಸಾಮಾನ್ಯರ ಅನುಭವಕ್ಕೆ ಕ್ರಮೇಣ ವೇದ್ಯವಾಗುತ್ತಿದೆ. ರಾಷ್ಟ್ರದ ಬೆನ್ನುಲುಬಾದ ರಾಷ್ಟ್ರೀಕೃತ ಬ್ಯಾಂಕುಗಳನ್ನು ಖಾಸಗಿಯವರಿಂದ, ವಿದೇಶಿ ಬಂಡವಳಿಗರಿಂದ, ಎಂದರೆ ಸಾಮ್ರಾಜ್ಯಶಾಹಿಗಳಿಂದ ರಕ್ಷಿಸುವುದು ರಾಷ್ಟ್ರದ ಎಲ್ಲ ಪ್ರಗತಿಪರ ಜನತೆಯ ಕರ್ತವ್ಯವಾಗಿದೆ.

ಬ್ಯಾಂಕ್ ನೌಕರರ ಸಂಘಟನೆ ಮತ್ತು ಕಾರ್ಮಿಕ ಸಂಘಟನೆಗಳು ಈ ಪಿತೂರಿಗಳ ವಿರುದ್ಧ ನಿರಂತರ ಹೋರಾಟಗಳಲ್ಲಿ ತೊಡಗಿಕೊಂಡಿವೆ. ಆ ಹೋರಾಟಗಳು ರಾಷ್ಟ್ರವ್ಯಾಪಿ ಸ್ವರೂಪವನ್ನು ಪಡೆಯಬೇಕಿದೆ. ಈ ನಿಟ್ಟಿನಲ್ಲಿ ಎಲ್ಲ ಪ್ರಜ್ಞಾವಂತ ಜನವಿಭಾಗಗಳೂ ಈ ಸಂಘರ್ಷಕ್ಕೆ ದನಿಗೂಡಿಸಬೇಕಿದೆ.

## ಬುಷ್ ಸ್ವರ್ಗಕ್ಕೇ ತೊಲಗಬೇಕು

**ನ**ಮ್ಮ ಪ್ರಪಂಚದ ಸೊಗಸನ್ನೆಲ್ಲಾ ಸವಿಯುತ್ತಿದ್ದ ಒಬ್ಬ ಯುವಕ ಇದನ್ನೆಲ್ಲಾ ಬಿಟ್ಟುಹೋಗಬೇಕಾಗುತ್ತದಲ್ಲಾ ಎಂದು ಬಹುವಾಗಿ ಪರಿತಪಿಸುತ್ತಿದ್ದನಂತೆ. ಅವನು ಚೀನಾ ದೇಶದವನು. ಹಾಗೆ ನೋಡಿದರೆ ಅವನು ಯಾವ ದೇಶದ ಯುವಕನಾದರೂ ಆಗಬಹುದು. ಏನೆಲ್ಲಾ ಇದೆ ಇಲ್ಲಿ! ಆಕಾಶ, ಸಮುದ್ರ, ನಕ್ಷತ್ರ, ಬೆಳದಿಂಗಳು, ಹೂವು, ಕಾಡು, ನದಿ, ಬೆಟ್ಟ, ಸ್ನೇಹಿತರು, ಬಂಧುಗಳು, ಶತ್ರುಗಳು, ಇನ್ನೂ ಏನೇನೋ! ಎಲ್ಲಕ್ಕಿಂತ ಮಿಗಿಲಾಗಿ ಪರಸ್ಪರ ಅಯಸ್ಕಾಂತಗಳಂತಿರುವ ಎರಡು ಲಿಂಗಗಳಿಗೆ ಸೇರಿದ ಪುರುಷ-ಸ್ತ್ರೀಯರು. ಸಪ್ಪೆಮೋರೆಯ ಯುವಕ ಒಬ್ಬ ತತ್ವಜ್ಞಾನಿ ಬಳಿ ಹೋಗಿ ತನ್ನ ಅಳಲನ್ನು ತೋಡಿಕೊಂಡ. ದಾರ್ಶನಿಕ ವಿವೇಕದ ಆ ಮುದಿಯ ಹೇಳಿದ: ''ಏನಯ್ಯಾ ಯೋಚನೆ ನಿನಗೆ? ಸತ್ತರೆ ಏನು ಪ್ರಾಣ ಹೋಗುತ್ತದೆಯೇ? ಹೋಗಲಿ ಬಿಡು, ಏನು ನಷ್ಟ! ಇಲ್ಲಾ ಸ್ವರ್ಗಕ್ಕೆ ಹೋಗುತ್ತೀಯೆ, ತಪ್ಪಿದರೆ ಗೊತ್ತೇ ಇದೆ ನರಕದಲ್ಲಿ ವಾಸ. ಸ್ವರ್ಗಕ್ಕೆ ಹೋಗಲು ಏನು ಅಂಜಿಕೆ? ಇಲ್ಲಿರುವುದೆಲ್ಲಾ ಅಲ್ಲೂ ಇದೆ. ಅಪ್ಸರೆಯರೂ ಸೇರಿದಂತೆ ಪ್ರತಿಯೊಂದೂ ಅದ್ಭುತಮಯ. ನರಕಕ್ಕೇ ಹೋದೆ ಎಂದಿಟ್ಟುಕೋ, ಅದಕ್ಕೇಕೆ ಅಷ್ಟೊಂದು ಬೇಸರ? ನಮ್ಮನ್ನೆಲ್ಲಾ ಬಿಟ್ಟುಹೋಗಬೇಕಲ್ಲಾ ಎಂದಲ್ಲವೇ? ಏನೂ ಯೋಚಿಸಬೇಡ, ನಮ್ಮಲ್ಲಿನ ಬಹುಭಾಗದವರು ಅಲ್ಲೇ ಇರುತ್ತೇವಲ್ಲ!''

ಡಾ|| ಎಚ್. ನರಸಿಂಹಯ್ಯನವರಂಥ ಮೇಧಾವಿ ವೈಜ್ಞಾನಿಕ ಮನೋಭಾವದವರಿಗೆ ಈ ರೀತಿಯ ದ್ವಂದ್ವವಿಲ್ಲ. ಏಕೆಂದರೆ ಅವರು ಪುನರ್ಜನ್ಮದಲ್ಲಿ ನಂಬಿಕೆಯಿಟ್ಟು ಹುಟ್ಟಿಹುಟ್ಟಿ ಸಾಯುತ್ತಲೇ ಇರುತ್ತಾರೆ. ಅವರು ನಂಬುತ್ತಾರಾದ್ದರಿಂದ ಮರುಹುಟ್ಟು ಇರಲೇಬೇಕು. ಸಾಯಿಬಾಬಾನಲ್ಲಿ ನಂಬಿಕೆ ಇರುವುದರಿಂದ ಪವಾಡ ನಿಜವೇ ಇರಬೇಕಲ್ಲ, ಹಾಗೆ. ಆದರೆ

*೭ನೇ ಪುಟಕ್ಕೆ*

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಅಕ್ಟೋಬರ್ ಸಂಚಿಕೆ**

**ಪ್ರೊ.**ಬರಗೂರು ರಾಮಚಂದ್ರಪ್ಪ ಅವರ 'ಸ್ವತಂತ್ರ ಭಾರತ ಮತ್ತು ಭೂಮಿತತ್ವ' ಲೇಖನ ತುಂಬಾ ಅರ್ಥಪೂರ್ಣ ಹಾಗೂ ವಿಚಾರಾರ್ಹ. ಜೊತೆಗೆ ವಾಸ್ತವತೆಯ ಪ್ರತಿಬಿಂಬದಂತೆ ಹೊರ ಹೊಮ್ಮಿದೆ. ನಿಜಕ್ಕೂ ಭೂಮಿತತ್ವದ ಕಲ್ಪನೆಯ ವಿಚಾರವನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳಲೇ ಬೇಕಾದದ್ದು ಅತ್ಯವಶ್ಯಕ.

*ಹಿರೇಕೋಗಲೂರು* — ***ಎಚ್. ಆರ್. ತಿಪ್ಪೇಸ್ವಾಮಿ***

ಮಾನ್ಯ ಶ್ರೀ ಬರಗೂರು ರಾಮಚಂದ್ರಪ್ಪನವರಿಗೆ ನನ್ನ ಅಭಿವಂದನೆಗಳು. ಸಂಚಿಕೆಯಲ್ಲಿನ "ಸ್ವತಂತ್ರ ಭಾರತ ಮತ್ತು ಭೂಮಿತತ್ವ"ವು ದುಡಿಯುವ ವರ್ಗದವರು ಅಂದರೆ ಶ್ರಮಿಕರು ಬೆವರಿನಿಂದ ಕಟ್ಟಿದ ಈ ದೇಶ ಶ್ರಮಿಕರ ಕಲ್ಯಾಣಕ್ಕೆ ಕಟ್ಟುಬದ್ಧವಾಗಿರ ಬೇಕೇ ವಿನಾ ಭೂಒಡೆಯರ, ಬಂಡವಾಳಶಾಹಿಗಳ ಮತ್ತು ರಾಜಕೀಯ ದಲ್ಲಾಳಿಗಳ ಬೆನ್ನೆಲುಬಾಗಬಾರದು ಎಂಬುದು ಶ್ರಮಿಕರಲ್ಲಿ ತಮ್ಮ ಅಸ್ತಿತ್ವವನ್ನು ನೆನಪಿಸುತ್ತದೆ.

*ಮೈಸೂರು* — ***ಧರ್ಮೇಶ***

ತಮ್ಮಯ ಪ್ರಭಾವೀ ಗುರು ಮೊಕಾಶಿ ಪುಣೇಕರರ ಬಗ್ಗೆ ರಹಮತ್‌ರವರು ಬರೆದ ಲೇಖನ ಮತ್ತು ಸಂದರ್ಶನ ಮನೋಜ್ಞವಾಗಿ ಮೂಡಿಬಂದಿದೆ.

ನಮ್ಮೆದುರೇ ಪುಣೇಕರ್ ಅವರು ಕುಳಿತು ಮಾತಾಡಿದಂತೆ ಲೇಖಕರು ಚಿತ್ರಿಸಿದ ಈ ಲೇಖನ ಮಾಲೆ ಪುಣೇಕರ್‌ರವರ ಅಂತರಾಳದ ಪೂರ್ಣ ಚಿತ್ರಣ ಕ್ಯಾನ್‌ವಾಸ್ ಮೇಲೆ ಸೃಷ್ಟಿಯಾದಂತಿದೆ.

*ತೀರ್ಥಹಳ್ಳಿ* — ***ರಾಂಕೊಪ್ಪಲು***

**ನವೆಂಬರ್ ಸಂಚಿಕೆ**

ಶ್ರೀ ಕೆ.ಎಸ್. ಪಾರ್ಥಸಾರಥಿಯವರು 'ಕೇವಲ ಪಕ್ಷಪಲ್ಲಟ ಸಾಮಾಜಿಕ ವರ್ತನೆಯಲ್ಲ' ಎಂಬ ತಮ್ಮ ಅಗ್ರಲೇಖನದಲ್ಲಿ ಬಹಳ ಗಹನ ವಿಚಾರಗಳನ್ನು ಮಂಡಿಸಿದ್ದಾರೆ. ಜಾಗತೀಕರಣ ಮತ್ತು ಖಾಸಗೀಕರಣದ ಅಧ್ವರ್ಯು ಮನಮೋಹನ ಸಿಂಗರನ್ನೂ ನಾಚಿಸುವಷ್ಟು ಪರಿಣಾಮಕಾರಿಯಾಗಿ, ಅದೇ ನೀತಿಯನ್ನು ಕಾರ್ಯಗತ ಗೊಳಿಸಿದ ವಾಜಪೇಯಿ ಸರ್ಕಾರದ ಉದಾಹರಣೆ ನೀಡಿ, ಗರಬಡಿದಂತೆ ಕುಳಿತಿರುವ ಪಾರ್ಲಿಮೆಂಟ್ ಸದಸ್ಯರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಶಿಕ್ಷಣ ವ್ಯವಸ್ಥೆಯಲ್ಲಿ ಭಾಜಪ ತಳೆದ ಕೋಮುವಾದಿ

> **ಓದುಗರ ಗಮನಕ್ಕೆ**
>
> 'ಹೊಸತು' ಜನವರಿ ೨೦೦೫ರ ಸಂಚಿಕೆ ಹೆಚ್ಚು ಪುಟಗಳ ವಿಶೇಷ ಸಂಚಿಕೆ. ಸಿದ್ಧಪಡಿಸಿ ರವಾನಿಸಲು ಸ್ವಲ್ಪ ವಿಳಂಬವಾಗಬಹುದು. ಓದುಗರು ಸಹಕರಿಸಬೇಕಾಗಿ ವಿನಂತಿ.
>
> **- ವ್ಯವಸ್ಥಾಪಕ**

ಧೋರಣೆಯನ್ನು ಖಂಡಿಸುತ್ತಾ, ಅರ್ಜುನ ಸಿಂಗರು ಬಿಜೆಪಿ ಬಗೆಗೆ ತಮಗಿರುವ ದ್ವೇಷ ಭಾವನೆಯಿಂದಾಗಿ ಕಟಕಿ ಮಾತುಗಳನ್ನಾಡುವುದರಿಂದ, ರೂಢಮೂಲವಾಗಿ ಕೋಮುವಾದವನ್ನು ಮೂಲೋತ್ಪಾಟನ ಮಾಡುವುದು ಆಗದ ಕೆಲಸ ಎಂಬುದನ್ನು ಪಾರ್ಥಸಾರಥಿ ಹೇಳಿದ್ದಾರೆ. ಅಲ್ಲದೆ ಕೇವಲ ಸರ್ಕಾರದ ಬದಲಾವಣೆಯಿಂದ ಏನೂ ಆಗದು. ಕಮ್ಯುನಿಸ್ಟರು ಕೇಂದ್ರ ಸರ್ಕಾರದೊಡನೆ ಕೂಡಿ ಕೊಂಡಿದ್ದಾರೆ ಎಂಬ ಮಾತ್ರಕ್ಕೆ ಜನ ಕೈಕಟ್ಟಿ ಕೂಡ ಬಾರದು ಎಂದು ಎಚ್ಚರಿಕೆಯ ಮಾತನ್ನಾಡಿದ್ದಾರೆ. ಇಂದಿನ ರಾಜಕೀಯದ ಆಗುಹೋಗುಗಳ ಮೇಲೆ ಒತ್ತಡ ತಂದು ಅವು ಸಾಗುವ ದಿಕ್ಕನ್ನು ಕೂಡಲೇ ಬದಲಾಯಿಸಬೇಕಾದ ಅಗತ್ಯತೆಯ ಬಗ್ಗೆಯೂ ಪ್ರಸ್ತಾಪಿಸಿ ಪ್ರಗತಿಪರ ಶಕ್ತಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ.

ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕವಾಗಿ ಮೂಲಭೂತ ಪರಿವರ್ತನೆ ಆಗಬೇಕಾಗಿದ್ದರೆ ಜನತೆ ಏನು ಮಾಡಬೇಕು? ಜನಪ್ರತಿನಿಧಿಗಳು ಏನು ಮಾಡಬೇಕು? ಸರ್ಕಾರ ಏನು ಮಾಡಬೇಕು? ಈ ಕುರಿತು ಒಂದು ಲೇಖನದಲ್ಲಿ ಈ ಎಲ್ಲ ಆಯಾಮಗಳಲ್ಲಿ ಆಗಬೇಕಾದ ಮೂಲಭೂತ ಬದಲಾವಣೆಗಳೇನು ಎಂಬುದನ್ನೂ ಪೃಥಕ್ಕರಿಸುವುದು ಆಗದ ಮಾತು. ಆದ್ದರಿಂದ 'ಹೊಸತು' ಪತ್ರಿಕೆ ಈ ವಿಷಯದಲ್ಲಿ ತಜ್ಞ ರಿಂದ ಲೇಖನಗಳನ್ನು ಬರಮಾಡಿಕೊಳ್ಳಬೇಕು. ಎಡ ಪಂಥೀಯ ವಿಚಾರಧೋರಣೆಯ ತಜ್ಞರಿಂದ ಮಾತ್ರ ವಲ್ಲದೆ, ಎಲ್ಲ ಧೋರಣೆಯವರ ಹಾಗೂ ಮುಖ್ಯವಾಗಿ ಯಾವ ಇಸಂಗೂ ಅಂಟಿಕೊಂಡಿರದ ತಟಸ್ಥ




ಮನೋವೃತ್ತಿಯ ಪ್ರಾಜ್ಞರಿಂದಲೂ ಲೇಖನಗಳನ್ನು ಆಹ್ವಾನಿಸಬೇಕು. ಈ ಕೆಲಸ ಜರೂರಾಗಿ ಆಗಬೇಕು.

*ಬೆಂಗಳೂರು* — ***ಎಚ್. ಎಸ್. ದೊರೆಸ್ವಾಮಿ***

ನವೆಂಬರ್ 'ಹೊಸತು' ಸಂಪಾದಕೀಯ ಕನ್ನಡ ಸಿನಿಮಾ ತನ್ನ ಕಾಲ ಮೇಲೆ ನಿಲ್ಲದಂತಹ ಪರಿಸ್ಥಿತಿಯ ಗೊಂದಲದಲ್ಲಿ ಇರುವುದನ್ನು ಸಮರ್ಪಕವಾಗಿ ನಿರೂಪಿಸಿದೆ. ಜಾಗತೀಕರಣ ವಾತಾವರಣದಲ್ಲಿ ಮುನ್ನುಗ್ಗುತ್ತಿರುವ ನಾವು ದೇಶೀಯ ಸ್ಪರ್ಧೆ ಎದುರಿಸ ದಿದ್ದರೆ ವಿದೇಶಿ ನುರಿತ ಪೈಪೋಟಿ ಹೇಗೆ ಎದುರಿಸು ವುದು? ಸಿನಿಮಾಕ್ಕೆ ರಕ್ಷಣಾ ವ್ಯವಸ್ಥೆ – ರಕ್ಷಣೆಯ ರಕ್ಷಾ ಕವಚ – ಎಂದಿನವರೆಗೆ? ಕನ್ನಡದ ಉದ್ಧಾರ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ನೆಲೆಗಟ್ಟಿನಲ್ಲಿ ಆಮೂಲಾಗ್ರ ಬದಲಾವಣೆ ಆಗಬೇಕಿದೆ.

ಬಿ. ಎಂ. ಪ್ರದೀಪ್ ಕುಮಾರ್ ಅವರ 'ಕನ್ನಡ ರಾಷ್ಟ್ರೀಯ ಪರಿಕಲ್ಪನೆ ಇಂದಿನ ಅಗತ್ಯವೇ' ಲೇಖನವೂ ಈ ಹಿನ್ನೆಲೆಯಲ್ಲಿ ಇರುವ ಬರಹ. ಕನ್ನಡಿಗರ ಮನಗಳಲ್ಲಿ ಬದಲಾವಣೆ ಆಗದ ಹೊರತು ಬೇರೆ ಯಾವ ಪರಿವರ್ತನೆಯೂ ಸಾಧ್ಯವಿಲ್ಲ. ಶೈಕ್ಷಣಿಕ ಮಟ್ಟದ ಉನ್ನತೀಕರಣದ ಜೊತೆಗೆ ರಾಜಕೀಯ ಇಚ್ಛಾಶಕ್ತಿ ಜರೂರಾಗಿ ಆಗಬೇಕಾದ ಕೆಲಸಗಳು. ಇಲ್ಲದಿದ್ದರೆ ಕನ್ನಡ – ನೆಲ, ಜಲ, ಬಾಯ್ಮಾತಿನ ವಿಷಯಗಳಾಗುತ್ತವೆ.

*ಸೇಡಂ* — ***ಅಣ್ಣಾಸಾಗರ್ ಬಿ. ಆರ್.***

'ಹೊಸತು' ಮಾಸಪತ್ರಿಕೆ, 'ಚಿರನೂತನ– ಚಿರ ಚೇತನ'ವಾಗಿರಲಿ – ವಾಗಿರುತ್ತದೆ ಎಂದು ನಂಬಿರುತ್ತೇನೆ. ನವೆಂಬರ್‌ನ ಸಂಚಿಕೆಯು ಚೆನ್ನಾಗಿ ಮೂಡಿಬಂದಿದೆ. ಡಿ. ಆರ್. ನಾಗರಾಜ್‌ರ – 'ಶಕ್ತಿ ಶಾರದೆಯ ಮೇಳ' – ಒಂದು ಚಿಂತನೆ ಡಿ. ಆರ್. ಎನ್.ರ ಆ 'ಪ್ರಜ್ಞಾ ಪ್ರವಾಹ' ಬಗ್ಗೆ ಹೊಸ ಬೆಳಕು ಮೂಡಿಸುವಂತಿತ್ತು. ಕೂಡ್ಲಿಗೆರೆ ಮಲ್ಲಿಕಾರ್ಜುನರ ಲೇಖನ, 'ಸ್ವಧರ್ಮೇ ನಿಧನಂ ಶ್ರೇಯಃ.... ?' ಎಂಬ ಎ. ಆರ್. ನಾರಾಯಣಘಟ್ಟರ ಲೇಖನ ವೈಚಾರಿಕ ಪ್ರಜ್ಞೆಯ ಬೆಳಕು ತರಿಸುವಂತಿತ್ತು. ಇತ್ತೀಚೆಗೆ ನಿಧನರಾದ 'ಮುಲ್ಕ್‌ರಾಜ್ ಆನಂದ್'ರ 'ಧೂರ್ತ' ಅನುವಾದದ ಕತೆ – ಪ್ರಮೋದ ಮುತಾಲಿಕರಿಂದ ಚೆನ್ನಾಗಿಯೇ ಮೂಡಿಬಂದಿದೆ. ಹಾಗೆಯೆ ಎಚ್. ದಂಡಪ್ಪರ 'ಕನ್ನಡ ದಲಿತ ಆತ್ಮಕಥನಗಳ ಸಾಂಸ್ಕೃತಿಕ ಅನನ್ಯತೆ' ಆತ್ಮಕಥೆಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡುವಂತಿತ್ತು.

ಒಟ್ಟಾರೆ, ಈ ಸಾರಿಯ ಪತ್ರಿಕೆಯು ಪರಿಪೂರ್ಣ ವಾದ 'ಜ್ಞಾನದ ಗರ್ಭಿಣಿ'ಯಂತಾಗಿತ್ತು ಎಂದು ಹೇಳಲು ಸಂತೋಷಿಸುತ್ತೇನೆ.

*ಗುಲ್ಬರ್ಗಾ* — ***ಸಿ. ಮಂಜುನಾಥ ಕೂಡ್ಲಿಗಿ***

ವೈಚಾರಿಕ ಲೇಖನಗಳನ್ನು ಹೊತ್ತು ಓದುಗರಲ್ಲಿ 'ಹೊಸತು' ಹೊಸತನ ಮೂಡಿಸುತ್ತದೆ.

ಎಂ. ಎಸ್. ವೇದಾ ಅವರ "ನಾಯಿಯುಳ್ಳ ಜನರಲ್ಲಿ ಒಂದು ಮನವಿ" ತುಂಬಾ ಚೆನ್ನಾಗಿತ್ತು. ಓದಿಸುತ್ತಾ ಹೋಯ್ತು. 'ಹೊಸತು' ಪರಿವಾರಕ್ಕೆ ಧನ್ಯವಾದಗಳು.

*ಲಕ್ಷ್ಮೇಶ್ವರ* — ***ಬಸವರಾಜ ಬಾಳೇಶ್ವರ ಮಠ***

ಎಂ. ಎಸ್. ವೇದಾ ಅವರ "ನಾಯಿಯುಳ್ಳ ಜನರಲ್ಲೊಂದು ಮನವಿ" ಓದಿ ತುಂಬಾ ನಗು, ಜೊತೆಗೆ ವೇದನೆಯೂ ಉಂಟಾಯಿತು. ಅವರು ತಮ್ಮ ಅನುಭವದ ಮಾತನ್ನು ಚೆನ್ನಾಗಿ ಮನದಟ್ಟಾಗುವಂತೆ ವಿವರಿಸಿದ್ದಾರೆ. ಇಂದು ಸಮಾಜದಲ್ಲಿ ನಾವು ಚೆನ್ನಾಗಿದ್ದರೆ ಸಾಕು, ಬೇರೆಯವರು ಹಾಳಾದರೇನು ಎನ್ನುವ ಜನರಿಗೆ ಈ ಲೇಖನ ಓದಿಯಾದರೂ ಬುದ್ಧಿ ಬರುವುದೆ? 'ನಾಗರಿಕ ಪ್ರಜ್ಞೆ' ಇಲ್ಲಿ ಹುಡುಕಬೇಕಿದೆ. ಒಟ್ಟಿನಲ್ಲಿ ನಾಯಿಯ ಒಂದು ಉದಾಹರಣೆ ಅಷ್ಟೆ. ಬೇರೆ ರೀತಿಯಲ್ಲೂ ಸಹ ಜನರು ತುಂಬಾ ಕೆಟ್ಟಿದ್ದಾರೆ. ಇಂತಹ ಲೇಖನಗಳು ಅಂತಹವರಿಗೆ ರಾಮ ಬಾಣವಾಗಿವೆ. ಇನ್ನು ಡಾ|| ವಸುಂಧರಾ ಭೂಪತಿಯವರ 'ಮಕ್ಕಳಿಗೆ ಪುಷ್ಟಿಕರ ಆಹಾರ' ಸಂಗ್ರಹ ಯೋಗ್ಯವಾಗಿದೆ.

*ಪಾಂಡವಪುರ* — ***ಆ. ಮೃತ್ಯುಂಜಯ***

ಎಂ. ಎಸ್. ವೇದಾ ಅವರ ಬರಹ ಓದಿ 'ನಗು' ಬಂದಿತು. ನಾಯಿಯನ್ನು ಸಾಕುವಾಗ ಪಡುವ ಕಷ್ಟ, ನಾಯಿಗೆ ವಾಕಿಂಗ್ ಮಾಡಿಸುವ ಕಷ್ಟ, ಎರಡು ಹೇಗೆ ಬರುತ್ತದೆ ಎಂದು ಅದ್ಭುತವಾಗಿ ಲೇಖಕರು ತಿಳಿಸಿದ್ದಾರೆ. 'ನಾಯಿ' ನಮ್ಮ ಸಂಸಾರದ ಒಬ್ಬ ಸದಸ್ಯನಂತೆ. ಅದಕ್ಕೆ ನಾವು ಒಂದು ಉನ್ನತ ಸ್ಥಾನ ಕೊಡೋಣ.

ಜಯದೇವಪ್ಪ ಜೈನಕೇರಿ ಅವರ 'ಎಲ್ಲೋ ಜೋಗಪ್ಪ ನಿನ್ನರಮನೆ' ಉತ್ತಮ ಬರಹ. ಮಾನವನು ಕಷ್ಟಪಡದೇ ಸುಖವು ತಾನಾಗೇ ಬರಬೇಕು ಎಂಬ ಕನಸು ಹೊತ್ತು ಜೀವನ ನಡೆಸುತ್ತಿದ್ದಾನೆ. 'ಆನಂದ' ಹೇಗೆ ಪಡೆಯಬೇಕು, ಅದರ ಪರಿಕಲ್ಪನೆ ಹೇಗೆ ಎಂಬುದನ್ನೂ ಉತ್ತಮವಾಗಿ ವರ್ಣಿಸಿದ್ದಾರೆ.

ಮಂಜುನಾಥ ಗೌರಿಬಿದನೂರು ಅವರ "ನನ್ನನ್ನು ಗಾಢವಾಗಿ ತಟ್ಟುವ, ಕಾಡುವ ವಿಷಯದ ಬಗ್ಗೆ ಮಾತ್ರ ಚಿತ್ರ ಮಾಡಲು ಸಾಧ್ಯ, ಎಂಬ ಶಂಕರ್ ಸಂದರ್ಶನದಲ್ಲಿ ಜನ ಮೆಚ್ಚುವಂತಹ 'ಸಿನಿಮಾ' ಮಾತ್ರ ಮಾಡುತ್ತೇನೆ ಎಂದು ಶಂಕರ್ ಅವರ ಮಾತು ಇಷ್ಟವಾಯಿತು.

*ಶಿವಮೊಗ್ಗ* — ***ಪಿ. ಗೋವಿಂದರಾಜ್***

ಪೂ. ಚಂ. ತೇಜಸ್ವಿಯವರ ಛಾಯಾಚಿತ್ರ ಸಂಪುಟ ಪ್ರಕಟಿಸಿದ್ದು ಖುಷಿ ಎನಿಸಿತು. ಇಂದಿನ ಕಂಪ್ಯೂಟರ್ ಯುಗದಲ್ಲಿ ಜೀವಂತವಾಗಿರುವ ಪಕ್ಷಿ-ಪ್ರಾಣಿಗಳನ್ನು ನೋಡುವ ಭಾಗ್ಯ ಅನೇಕರಿಗಿಲ್ಲ. ಕಾಂಕ್ರೀಟ್ ಕಾಡಿನಲ್ಲಿ ಬದುಕುವ ಮಾನವನಿಗೆ ದೇವರ ಪಟ ತೋರಿಸಿದ ಹಾಗೆ ಇದು ಗುಬ್ಬಿ, ಕೋಗಿಲೆ, ನವಿಲು, ಬೆಳುವ, ಪಾರಿವಾಳ ಇತ್ಯಾದಿಯಾಗಿ ಹೇಳುವ ಸ್ಥಿತಿ ನಿರ್ಮಾಣವಾಗಿರುವುದು ದುರದೃಷ್ಟಕರ. ಇನ್ನೊಂದೆಡೆ ರೈತಾಪಿ ವರ್ಗ ತಮ್ಮ ಬೆಳೆ ಉಳಿಸಿಕೊಳ್ಳುವುದಕ್ಕಾಗಿ ದುಬಾರಿ ಬೆಲೆಯ ನಾನಾ ರೀತಿಯ ಔಷಧಿ ಸಿಂಪಡಿಸಿ ಜೀವ ವೈವಿಧ್ಯದ ಅವನತಿಗೆ ಕಾರಣವಾಗುತ್ತಿದೆ. ಇನ್ನಾದರೂ ನಮ್ಮ ರೈತ ಎಚ್ಚತ್ತುಕೊಳ್ಳದಿದ್ದರೆ 'ಧರೆಹೊತ್ತಿ ಉರಿದಾಗ' ಎಚ್ಚರಾಗುವನೇ?

*ರಾಯಚೂರು* — ***ರಾಮರೆಡ್ಡಿ ಜೆ. ಮದರಕಲ್***

### ಕನ್ನಡ ರಾಷ್ಟ್ರೀಯತೆ...

ಪ್ರಸಕ್ತ ಪರಿಸ್ಥಿತಿಯನ್ನು ವಿಶ್ಲೇಷಿಸಿ ಗಂಭೀರ ವಿಚಾರಗಳಿಂದ ತುಂಬಿರುವ ಸಕಾಲಿಕ ಲೇಖನವಿದು (ಶ್ರೀ ಬಿ. ಎಂ. ಪ್ರದೀಪ್ ಕುಮಾರ್). ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಒಂದಾದ ಕನ್ನಡ ತನ್ನ ಆಳ, ವಿಸ್ತಾರ ಹಾಗೂ ಗಟ್ಟಿತನದಿಂದಾಗಿ ಶ್ರೀಮಂತವಾಗಿದೆ. ಈಚೆಗೆ ಭಾರತೀಯ ಭಾಷೆಗಳು ದರ್ಜೆಯನ್ನು ಕಳಕೊಂಡಿದ್ದು ಇಂದು ಇತಿಹಾಸ. ಕ್ರಮೇಣ ಭಾರತೀಯರು ಜೀವನ ಕ್ರಮವನ್ನು ಹಾಗೂ ತಮ್ಮ ಸಂಸ್ಕೃತಿಯನ್ನು ಕೇವಲವಾಗಿಸಿ ಸೂರ್ಯಪ್ರಕಾಶ ಮೂಡುವುದೇ ಪಶ್ಚಿಮದಿಂದ ಎಂದು ಬಗೆದು ದಾಸ್ಯತನದ ಪರಮಾವಧಿಯನ್ನು ತಲುಪಿರುವ ಪರಿಣಾಮವೇ ಇಂತಹ ಚಿಂತನೆಗಳಿಗೆ ಅವಕಾಶ ನೀಡಿದೆ. ಶಿಕ್ಷಣ ಒಂದು ಸರಕಾಗಿ ಉದ್ಯಮವಾಗಿ ಮಾರಾಟವಾಗುತ್ತಿರುವಾಗ ಬೇಡಿಕೆಯಲ್ಲಿರುವ ಭಾಷೆ ಬೆಳೆಯುತ್ತದೆಯೇ ಹೊರತು ಅವರವರ ಭಾಷೆಗಳಲ್ಲ, ಸಾಹಿತ್ಯದ ವಿವಿಧ ಪ್ರಾಕಾರಗಳು ಭಾಷೆಯನ್ನು ಬೆಳೆಸುತ್ತವೆ ಎಂಬುದನ್ನು ಮರೆತ ನಾವು ಕೇವಲ ಅನುಕರಣೆ ಮತ್ತು ಅಳವಡಿಕೆಗಳ ಮೇಲೆ ಅವಲಂಬಿತರಾಗಿರುವುದರಿಂದ ನಮ್ಮ ಭಾಷೆಯ ಬಗ್ಗೆ ಎಚ್ಚರ ತಪ್ಪಿದ್ದೇವೆ. ರಾಜಕಾರಣದ ನೆರಳಿನಲ್ಲಿ ದಾಸರಾಗದೆ ಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುವ ಅವಕಾಶವನ್ನು ಕಂಡುಕೊಂಡಾಗ ಮಾತ್ರ ನಮ್ಮತನದ ಅರಿವು ನಮಗಾದೀತು ಮತ್ತು ಭಾಷೆಯ ಬಗ್ಗೆ ಅರಿವು ಮೂಡಿಬಂದೀತು.

*ಬೆಂಗಳೂರು* — ***ನರೇಂದ್ರ ಸಿರಕಜೆ***

'ಹೊಸತು' ಪತ್ರಿಕೆಯ ಸಮಾಲೋಚಕ ಮಂಡಲಿಯ ಸದಸ್ಯರಾಗಿ ಅಮೂಲ್ಯ ಸಲಹೆ ಮತ್ತು ಸಹಕಾರ ನೀಡುತ್ತಿರುವ ಪ್ರೊ|| ಬಿ. ವಿ. ವೀರಭದ್ರಪ್ಪ ಅವರಿಗೆ ಈ ವರ್ಷ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ. ಅವರಿಗೆ 'ಹೊಸತು' ಬಳಗ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

---

***೩ನೇ ಪುಟದಿಂದ (ಸಂಪಾದಕೀಯ)***

ಜನಸಾಮಾನ್ಯರಿಗೆ ಇಷ್ಟು ಖಚಿತವಾದ ಭವಿಷ್ಯವಿಲ್ಲ. ಈಗಂತೂ ಸ್ವರ್ಗಕ್ಕೆ ಹೋಗಲು ಅವರಿಗೆ ವಿಪರೀತ ಭಯ. ಏಕೆಂದರೆ ಅಗಾಧ ಸತ್ಕರ್ಮಗಳನ್ನು ಮಾಡಿದವರೆಲ್ಲಾ ಅಲ್ಲಿರುತ್ತಾರೆ. ಇಲ್ಲಿ ಅವರೆಲ್ಲರ ಉಪದೇಶ ಕೇಳಿ ಸಾಕಾಯಿತು; ಇನ್ನು ಅಲ್ಲಿಯೂ ಅವರಿಂದ ಅದನ್ನೇ ಕೇಳಬೇಕಲ್ಲಾ, ಎಂದು. ಉದಾಹರಣೆಗೆ, ಜಾರ್ಜ್ ಬುಷ್ ಇದ್ದಾನೆ. ವಿಶ್ವದಲ್ಲಿ ಎಲ್ಲೆಲ್ಲಿ 'ಪ್ರಜಾಪ್ರಭುತ್ವ' ಇಲ್ಲವೋ ಅಲ್ಲೆಲ್ಲಾ ಅದನ್ನು ನೆಡುವ ಮಹತ್ಕಾರ್ಯ ಮಾಡಿದ್ದಾನೆ. ಅದಕ್ಕಾಗಿ ಲೆಕ್ಕಕ್ಕೆ ಬಾರದ ವಿಶ್ವಸಂಸ್ಥೆಯನ್ನು ಕೂಡ ಮೀರಿ ಶ್ರಮಿಸಿದ್ದಾನೆ. ಆತ ಮೊನ್ನೆಯೆಲ್ಲಾ ಚುನಾವಣೆ ಗೆದ್ದಿದ್ದು ಸಹ ದೇವರ ದಯೆಯಿಂದಲೇ ಅಂತೆ. ಇವನಿಲ್ಲದಿದ್ದರೆ ವಿಶ್ವಕ್ಕೆ ಕೇಡು ಎಂಬ ಕಾರಣದಿಂದ ಈ ಧರ್ಮದ ಶ್ರದ್ಧಾಳುವನ್ನು ಸ್ವತಃ ದೇವರೇ ಬೆಂಬಲಿಸಿದನೆಂದು ಚಂಡಾಲಿಸ್ಸಾ ರೈಸ್ ಹೇಳಿಲ್ಲದಿದ್ದರೂ ಬೇರೆಷ್ಟೋ ಸಲಹೆಗಾರರು ಅದನ್ನು ಅಚಲವಾಗಿ ನಂಬಿದ್ದಾರಂತೆ. ಬುಷ್ ಅಂತೂ ಅದನ್ನು ಹೇಳಿಯೇಬಿಟ್ಟಿದ್ದಾನೆ. ಸ್ವರ್ಗಕ್ಕೆ ರಹದಾರಿ ಖಾತ್ರಿ ಮಾಡಿಕೊಳ್ಳಲೆಂದೇ ಇತ್ತೀಚೆಗೆ ಅವನು ಇರಾಕಿನ ಫಲ್ಲೂಜಾ ನಗರವನ್ನು ಧ್ವಂಸಮಾಡಿ ರಾಷ್ಟ್ರಪ್ರೇಮಿ ಬಂಡುಕೋರ ಪಾಪಿಗಳನ್ನು ಅವರಿಗೆಲ್ಲಾ ತಕ್ಕುದಾದ ನರಕಕ್ಕೆ ರವಾನಿಸಿದ್ದಂತೆ. ಅವರಿಗೆಲ್ಲಾ ಇಲ್ಲೇ ನರಕ ಸೃಷ್ಟಿಸಿಕೊಟ್ಟ ಬುಷ್ ಮತ್ತೆ ಅವರನ್ನು ಬೇರೊಂದು ನರಕಕ್ಕೇಕೆ ಕಳಿಸಬೇಕಿತ್ತೆಂಬ ಒಗಟಿಗೆ ಸರಿಯುತ್ತರ ನೀಡುವವರೂ ಸ್ವರ್ಗಕ್ಕೆ ಹೋಗಬಹುದು. ಅಂತಹ ಪ್ರತಿಭಾವಂತ ಬುಷ್-ಕಣ್ಮಣಿಗಳಲ್ಲಿ ಅಗ್ರ ಪಟ್ಟ ಸಹಜವಾಗಿಯೇ ಟೋನಿ ಬ್ಲೇರ್‌ಗೆ. ಮೊನ್ನೆ ತೀರಿಕೊಂಡ ಯಾಸರ್ ಅರಾಫತ್ ಸಹ ನರಕಕ್ಕೇ ಹೋಗಬೇಕು. ಬುಷ್-ಬ್ಲೇರ್ ಇರುವೆಡೆ ಅವನಿಗೆಲ್ಲಿ ಸ್ಥಾನ! ಅಲ್ಲದೆ ಬುಷ್-ಬ್ಲೇರ್‌ಗಳ ಮುತ್ತಾತಂದಿರು ಅರಾಫತ್ ಅಂಥವರಿಗೆ ತಮ್ಮದೆಂಬ ದೇಶವೊಂದು ಇಲ್ಲದಂತೆ ಮಾಡಿದಾಗ ಈ ಯಾಸರ್ ಎಂಬ ಯುವಕ ಒಬ್ಬ ಬಂಡುಕೋರನಾಗಿ ಬೇರೆಯವರನ್ನೂ ತನ್ನೆಡೆ ಸೆಳೆದುಕೊಂಡಿದ್ದ.

ಬುಷ್ ಮತ್ತು ಬ್ಲೇರ್ ಸ್ವರ್ಗಕ್ಕೆ ಹೋದರೂ ಅವರು ಇರುವಲ್ಲಿ ಮಡುಗಟ್ಟಿದ ರಕ್ತದ ಸುಡುನಾತ ಇದ್ದೇ ತೀರುತ್ತದೆಂಬ ಕಾರಣದಿಂದ ನಾವಂತೂ ಸ್ವರ್ಗಕ್ಕೆ ಹೋಗುವಂತಿಲ್ಲ. ಆ ಚೀನಿ ಯುವಕನಿಗೆ ತಿಳಿಯಹೇಳಿದ ಮುದಿಯನ ಕಾಲದಲ್ಲಿ ಈ ವಿವೇಕ ಇನ್ನೂ ಮೂಡಿರಲಿಲ್ಲ. ಈಗಲಾದರೋ ಆ ಮುದಿಯನ ಗಂಭೀರವದನ ತಳಮಳಕ್ಕೆ ತುತ್ತಾಗಿದೆ. ಬುಷ್ ಸಂತತಿಗೆ ಸೇರಿದ ಸಜ್ಜನರು ಸಹಸ್ರ ಸಂಖ್ಯೆಯಲ್ಲಿದ್ದಾರೆ. ಅವರು ಇಲ್ಲಿ ಸಲ್ಲುತ್ತಾರಾದ್ದರಿಂದ ಅಲ್ಲಿಯೂ ಸಲ್ಲುತ್ತಾರೆ! ಆದರೆ ತೊಂದರೆಯೇನೆಂದರೆ ಅವರಿಗೆಲ್ಲಾ ಸ್ವರ್ಗಕ್ಕೆ ಹೋಗಲು ಅವಸರವಿಲ್ಲ. ಸ್ಥಾನ ಹೇಗೂ ಭದ್ರವಾಗಿದೆಯಾದ್ದರಿಂದ ನಿಧಾನವಾಗಿ ಹೋದರಾಯಿತು ಎಂಬ ಲೆಕ್ಕಾಚಾರ. ಅವರಿಗೆ ಅಲ್ಲಿ ಸ್ವರ್ಗ, ನಮಗೆ ಇಲ್ಲಿ ವರ್ಗ. ಇರುವುದೊಂದೇ ಭೂಮಿ ಎನ್ನುವಂತೆ ನಮಗಿರುವುದೊಂದೇ ವರ್ಗ ಎನ್ನುವ ಮಾತು ಚರ್ಚಾಸ್ಪರ್ಧೆಯ ಆಲಂಕಾರಿಕ ವಾಕ್ಯದಂತೆ ರಂಜನೀಯವಾಗಿದೆಯಲ್ಲವೆ? ಬುಷ್‌ನಷ್ಟು ಭೀಕರ ಬುದ್ಧಿವಂತಿಕೆಯಿಲ್ಲದ ನಮಗಿರುವುದೊಂದೇ ಸಮಾಧಾನ: ಅವನು ಸ್ವರ್ಗಕ್ಕೆ ಹೋಗಿ ಅದನ್ನೂ ನರಕವಾಗಿಸುವ ವೀರ. ಆದ್ದರಿಂದ ಅವನ ಗೊಡವೆ ನಮಗೇಕೆ? ಇರಾಕಿನ ಹೋರಾಟಗಾರರಂತೆ, ಅವನು ಮಾಡಿಟ್ಟ ನರಕವನ್ನು ಕಡೆಪಕ್ಷ ಭೂಮಿಯನ್ನಾಗಿಯಾದರೂ ಪರಿವರ್ತಿಸಲು ಸಾಧ್ಯವೇನೋ ನೋಡೋಣ.

ಇರಾಕಿನ ಮೇಲಿನ ಆಕ್ರಮಣಕ್ಕೆ ಮುನ್ನ ಬ್ರಿಟನ್ನಿನ ಸಂಪುಟ ಸಚಿವನಾಗಿದ್ದ ರಾಬಿನ್ ಕುಕ್ ಈಚೆಗೆ ಬುಷ್ ಮರುಚುನಾವಣೆ ಆದನಂತರ ಮರುಗಿದ: ಅಯ್ಯೋ, ನಮ್ಮ ಪ್ರಪಂಚ ಇವನನ್ನು ಇನ್ನೂ ನಾಲ್ಕು ವರ್ಷ ಸಹಿಸಬೇಕಲ್ಲಾ, ಎಂದು. ಸ್ವರ್ಗಕ್ಕೆ ಹೋಗುವ ಮುನ್ನ ಬುಷ್ ಇನ್ನೆಷ್ಟು ಅಫಘಾನಿಸ್ತಾನ-ಇರಾಕ್‌ಗಳಿಗೆ 'ಪ್ರಜಾಪ್ರಭುತ್ವ' ದಯಪಾಲಿಸುತ್ತಾನೋ ತಿಳಿದವರಾರು, ತಡೆಯುವವರಾರು!!

# ಭಾಷಿಕ ಮೂಲಭೂತವಾದಿಗಳ ಬೋನಿನಲ್ಲಿ ಕನ್ನಡ

**ಪ್ರೊ|| ಬರಗೂರು ರಾಮಚಂದ್ರಪ್ಪ**

ಸಾವಿರಾರು ವರ್ಷಗಳಿಂದ ಭಾಷಿಕ ಮೂಲಭೂತವಾದವನ್ನು ವಿರೋಧಿಸಿಕೊಂಡು ಉಳಿದು ಬಂದ ಕನ್ನಡವನ್ನೇ ಭಾಷಿಕ ಮೂಲಭೂತವಾದದ ಭಾಗವಾಗಿಸುವ ಮನೋಧರ್ಮವೊಂದು ಇತ್ತೀಚೆಗೆ ಮೇಲುಗೈ ಪಡೆಯುತ್ತಿದೆ. ಇದರ ಫಲವಾಗಿ ಕನ್ನಡದ ಅಭಿವೃದ್ಧಿಯ ಆದ್ಯತೆಗಳು ಹಿಂದೆಮುಂದಾಗುತ್ತಿವೆ. ಕನ್ನಡ ಕೇಂದ್ರಿತ ಶಿಕ್ಷಣ, ಕನ್ನಡದ ಮೂಲಕ ಆಡಳಿತ, ಕನ್ನಡಿಗರಿಗೆ ಉದ್ಯೋಗದಲ್ಲಿ ಸಂಪೂರ್ಣ ಆದ್ಯತೆ – ಇಂತಹ ವಿಷಯಗಳು ಹಿಂದಕ್ಕೆ ಸರಿದು ಅಷ್ಟೇನೂ ಮಹತ್ವವಲ್ಲದ ಅಂಶಗಳು ಮೊದಲ ಸಾಲಿನಲ್ಲಿ ನಿಂತಿವೆ.

ಹಿಂದೂ, ಮುಸ್ಲಿಂ, ಕ್ರೈಸ್ತ – ಹೀಗೆ ಯಾವುದೇ ಧರ್ಮದವರಾಗಲಿ, ತಮ್ಮ ಧರ್ಮವೊಂದೇ ಶ್ರೇಷ್ಠವೆಂದೂ ಸಾರ್ವಭೌಮವೆಂದೂ ಉಳಿದವರೆಲ್ಲ ಅದಕ್ಕೆ ಅಧೀನರೆಂದೂ ಭಾವಿಸುವ, ಧರ್ಮ-ಧರ್ಮಗಳ ನಡುವೆ ದ್ವೇಷವನ್ನು ಬಿತ್ತಿ ಬೆಳೆಸುವ, ಸಾಮಾಜಿಕ-ಧಾರ್ಮಿಕ ಸಮಾನತೆಯನ್ನು ವಿರೋಧಿಸುವ, ಒಟ್ಟು ಪ್ರತಿಪಾದನೆಯನ್ನು 'ಧಾರ್ಮಿಕ ಮೂಲಭೂತವಾದ' ಎನ್ನಬಹುದು. ಅಂತೆಯೇ ಭಾಷೆಯೊಂದನ್ನು ಸರ್ವಶ್ರೇಷ್ಠವೆಂದೂ, ಉಳಿದ ಭಾಷೆಗಳೆಲ್ಲ ಕನಿಷ್ಠ ಅಥವಾ ಅಧೀನವೆಂದೂ ಭಾವಿಸುವ, ಭಾಷೆ-ಭಾಷೆಗಳ ನಡುವೆ ದ್ವೇಷ ಬಿತ್ತಿ ಭಾಷಾಸಮಾನತೆಯ ಕಲ್ಪನೆಯನ್ನು ವಿರೋಧಿಸುವ, ಒಟ್ಟು ಪ್ರತಿಪಾದನೆಯನ್ನು 'ಭಾಷಿಕ ಮೂಲಭೂತವಾದ' ಎಂದು ಕರೆಯಬಹುದು.

ಭಾಷಾಸಮಾನತೆಯೆಂದರೆ ದೇಶದ ಅಥವಾ ರಾಜ್ಯದ ಎಲ್ಲಾ ಭಾಷೆಗಳಲ್ಲಿ ಸಮಾನವಾಗಿ ಆಡಳಿತ ನಡೆಸಬೇಕೆಂದು ಅರ್ಥವಲ್ಲ; ಶಿಕ್ಷಣದಲ್ಲಿ ಎಲ್ಲ ಭಾಷೆಗಳೂ ಸಮಾನ ಪ್ರಮಾಣದ ಪಠ್ಯಗಳನ್ನು ಹೊಂದಿರಬೇಕೆಂದಲ್ಲ. ಪ್ರತಿರಾಜ್ಯಕ್ಕೆ ಒಂದು ಆಡಳಿತ ಭಾಷೆಯಿರಬೇಕು; ಆದರೆ, ಅಲ್ಪಸಂಖ್ಯಾತರು ತಮ್ಮ ಭಾಷೆಯನ್ನು ಮನೆ ಮಾತಾಗಿ ಉಳಿಸಿಕೊಳ್ಳಲು ಅದು ಅಡ್ಡಿಯಾಗಬಾರದು; ಪ್ರಾಥಮಿಕ ಶಿಕ್ಷಣದಲ್ಲಿ ಆಯಾ ರಾಜ್ಯದ ಭಾಷೆಯೇ ಮಾಧ್ಯಮವಾಗಿದ್ದು, ಅಗತ್ಯವಿದ್ದ ಕಡೆ ಅಲ್ಪ ಸಂಖ್ಯಾತರ ಮಾತೃಭಾಷೆಗಳು ಮಾಧ್ಯಮವಾಗಿರಬೇಕು. ಅಲ್ಪಸಂಖ್ಯಾತರು ಆಡಳಿತಾತ್ಮಕ ಹಾಗೂ ವ್ಯಾವಹಾರಿಕ ಕಾರಣಗಳಿಗಾಗಿ ರಾಜ್ಯದ ಭಾಷೆಯನ್ನು ಓದಲು, ಬರೆಯಲು, ಮಾತನಾಡಲು ಕಲಿಯಬೇಕು. ಆಂತರಿಕ ವ್ಯವಸ್ಥೆಯ ಅನಿವಾರ್ಯತೆಗಾಗಿ ಹೀಗೆ ಭಾಷಾಬಳಕೆಯ ನೆಲೆಗಳನ್ನು ನಿರ್ಣಯಿಸಿದರೂ ಬಹುಸಂಖ್ಯಾತರ ಭಾಷೆ ಮಾತ್ರವೇ ಶ್ರೇಷ್ಠವೆಂದು ಭಾವಿಸಲಾಗದು. ಅವರವರ ಮಾತೃಭಾಷೆ ಅವರವರಿಗೆ ಗೌರವಯುತವಾದುದು. ಆದರೆ ಪ್ರಜಾಸತ್ತಾತ್ಮಕ ಸಮಾಜ ಮತ್ತು ಸರ್ಕಾರದ ಕಾರ್ಯನಿರ್ವಹಣೆಗಾಗಿ ಒಂದು ನಿರ್ದಿಷ್ಟ ಭಾಷಾವ್ಯವಸ್ಥೆಯಿರುತ್ತದೆ. ಇದರಿಂದ ಭಾಷಾದ್ವೇಷಕ್ಕೆ ಅವಕಾಶವಾಗಬಾರದು. ಆಯಾ ಭಾಷೆಯ ಅಗತ್ಯಕ್ಕನುಗುಣವಾಗಿ ಪ್ರೋತ್ಸಾಹ ಕೊಡುವುದು ನೀತಿಯಾಗಬೇಕು. ದೇಶದ ಎಲ್ಲ ಭಾಷೆಗಳೂ ಈ ದೃಷ್ಟಿಯಲ್ಲಿ ಸಮಾನವಾದುವು – ಇದಿಷ್ಟು 'ಭಾಷಾಸಮಾನತೆ'ಯ ಸಾರ.

ಆದರೆ ನಮ್ಮ ದೇಶದಲ್ಲಿ ಆದದ್ದೇನು? ಕೆಲವು ಭಾಷೆಗಳನ್ನು ಅತಿಶ್ರೇಷ್ಠವೆಂದು ಪರಿಗಣಿಸಿ ಸಾಮಾಜಿಕ, ಸಾಂಸ್ಕೃತಿಕ ಪ್ರತಿಷ್ಠೆಯನ್ನು ಕೊಡಲಾಯಿತು. ಅದಕ್ಕನುಗುಣವಾಗಿ ಬೆಳೆಸಲಾಯಿತು. ಜನಸಾಮಾನ್ಯರು ಇಂತಹ ಭಾಷಾ ತಾರತಮ್ಯವನ್ನು ನಂಬಿ ನಡೆದು ಕೊಳ್ಳತೊಡಗಿದರು. ಇಂಥ ಪ್ರವೃತ್ತಿಯ ಫಲವಾಗಿ ರಾಜಶಾಹಿಯ ಕಾಲದಿಂದ ಹಿಡಿದು ಪ್ರಜಾಪ್ರಭುತ್ವದ ಇಂದಿನ ದಿನದವರೆಗೆ 'ಭಾಷಿಕ ಮೂಲಭೂತವಾದವು' ತನ್ನದೇ ರೀತಿಯಲ್ಲಿ ಕೆಲಸ ಮಾಡುತ್ತ ಬಂದಿದೆ. ಆದರೂ ಕನ್ನಡವು ಸೆಡ್ಡುಹೊಡೆದು, ಮುಖಾಮುಖಿ ಮತ್ತು ಅನುಸಂಧಾನ ವಿಧಾನಗಳಿಂದ ಸ್ವಂತಿಕೆಯನ್ನು ಉಳಿಸಿಕೊಂಡು ಬಂದದ್ದೇ ಒಂದು ಇತಿಹಾಸವಾಗಿದೆ.

ಸಂಸ್ಕೃತವನ್ನು ದೇವಭಾಷೆಯೆನ್ನಲಾಯಿತು; ಭೂಮಿಭಾಷೆಗಳ ಗತಿಯೇನು? ಹಿಂದಿಯನ್ನು ರಾಷ್ಟ್ರಭಾಷೆಯೆನ್ನಲಾಯಿತು; ರಾಜ್ಯಭಾಷೆಗಳ ಪಾಡೇನು? ಇಂಗ್ಲಿಷನ್ನು ಅಂತರರಾಷ್ಟ್ರೀಯ ಭಾಷೆಯೆನ್ನಲಾಯಿತು; ರಾಷ್ಟ್ರೀಯ, ಪ್ರಾಂತೀಯ, ಸ್ಥಳೀಯ ಭಾಷೆಗಳ ಸ್ಥಿತಿಯೇನು? ಜನಬಳಕೆಯಿಲ್ಲದ ಭಾಷೆ ದೇವಭಾಷೆಯೆಂಬ ಪ್ರತಿಷ್ಠೆ ಸಂಪತ್ತು, ಸೌಲಭ್ಯ, ಎಲ್ಲವನ್ನೂ ಗಳಿಸುತ್ತದೆ. ಉತ್ತರದ ಕೆಲವೇ ರಾಜ್ಯಗಳ ಭಾಷೆ 'ರಾಷ್ಟ್ರಭಾಷೆ'ಯೆಂಬ ಪ್ರಚಾರ-ಪ್ರತಿಷ್ಠೆ ಹಾಗೂ 'ಧನಕನಕ ವಸ್ತುವಾಹನಾದಿಗಳೆಲ್ಲವನ್ನೂ' ಪಡೆಯುತ್ತದೆ; ಪ್ರಪಂಚದ ಮೂರನೇ ಎರಡುಭಾಗದಲ್ಲಿ ಬಳಕೆಯಲ್ಲಿಲ್ಲದ ಭಾಷೆ ಅಂತರರಾಷ್ಟ್ರೀಯವಾಗುತ್ತದೆ. ಇದು ಭಾಷಿಕ ಮೂಲಭೂತವಾದ.

ಹತ್ತನೇ ಶತಮಾನದಲ್ಲೇ ಭಾಷಿಕ ಮೂಲಭೂತವಾದದ ವಿರುದ್ಧ ಸೃಜನಶೀಲ ಹೋರಾಟವನ್ನು ಮಹಾಕವಿ ಪಂಪ ಪ್ರಾರಂಭಿಸಿದ. ಸಂಸ್ಕೃತದ ಜ್ಞಾನವನ್ನು ವಿರೋಧಿಸದೆ ವಸ್ತುವಿಷಯ ಮತ್ತು ವಿನ್ಯಾಸವನ್ನು ಕನ್ನಡೀಕರಣಗೊಳಿಸಿ ಚಂಪೂ ಎಂಬ ಕಾವ್ಯ ಪ್ರಕಾರಕ್ಕೆ ತಕ್ಕ ಸ್ಥಾನ ಕಲ್ಪಿಸಿದ್ದಲ್ಲದೆ, ಮಾರ್ಗದ ಜೊತೆಗೆ 'ದೇಸಿ'ಯನ್ನು ಪರ್ಯಾಯವಾಗಿ ತೋರಿಸುವ ಅವನ ಪ್ರಯತ್ನವನ್ನು ಗಮನಿಸಬೇಕು. ಇದು 'ದೇವಭಾಷೆ'ಯ ಹಿಡಿತದಿಂದ 'ದೇಸಿಭಾಷೆ'ಯನ್ನು ವಿಮೋಚನೆಗೊಳಿಸುವ ಒಂದು ಪ್ರಕ್ರಿಯೆಯ ಪ್ರಾರಂಭ. ಇದೇ ಪ್ರಕ್ರಿಯೆ, ನಯಸೇನನಲ್ಲಿ 'ಮಿಸುಕದ ಸಕ್ಕದ'ಕ್ಕೆ (ಚಲನಶೀಲವಲ್ಲದ ಸಂಸ್ಕೃತಕ್ಕೆ) ಪರ್ಯಾಯವಾಗಿ ಕನ್ನಡವನ್ನಷ್ಟೇ ಬಳಸುವ ಅಭೀಪ್ಸೆಯಾಗಿ ಪ್ರಕಟವಾಯಿತು. ನಯಸೇನನು "ಕನ್ನಡದಲ್ಲಿ ಬರೆಯುವವರು ಕನ್ನಡದಲ್ಲೇ ಬರೆಯಿರಿ; ಸಂಸ್ಕೃತದಲ್ಲಿ ಬರೆಯುವವರು ಸಂಸ್ಕೃತದಲ್ಲೇ ಬರೆಯಿರಿ; ತುಪ್ಪ ಮತ್ತು ಎಣ್ಣೆಯನ್ನು ಬೆರೆಸುವುದು ತರವೆ?" ಎಂದು ಪ್ರಶ್ನಿಸುವ ಮೂಲಕ ಭಾಷೆಯೊಂದರ ಹೇರಿಕೆಯನ್ನು ವಿರೋಧಿಸಿದ. ಮುಂದೆ ಆಂಡಯ್ಯ ಕವಿಯು ಸಂಸ್ಕೃತ ಪದಗಳನ್ನು ಬಳಸುವುದೇ ಇಲ್ಲವೆಂದು ಸಂಕಲ್ಪಿಸಿ, ಸಂಸ್ಕೃತಕ್ಕೆ ಕನ್ನಡ ತದ್ಭವಗಳನ್ನು ರೂಪಿಸಿದ. ಉದಾಹರಣೆಗೆ-'ಸುಖ' ಎಂಬುದು 'ಸೊಗ' ವಾಯಿತು; 'ಮುಖ' 'ಮೊಗ'ವಾಯಿತು, ಇತ್ಯಾದಿ. ಮುಂದೊಂದು ದಿನ ಮುದ್ದಣಕವಿಯಲ್ಲಿ – ಸಂಸ್ಕೃತದ ಬಳಕೆಯು 'ಕರಿಮಣಿ ಸರದಲ್ಲಿ ಕೆಂಪು ಹವಳವನ್ನು ಪೋಣಿಸಿದಂತೆ ಇರಬೇಕು – ಎಂಬ ಮಾತು ಬಂತು. ಕನ್ನಡ ಕರಿಮಣಿಯ ಸರವಾದರೆ ಸಂಸ್ಕೃತವು ಅದರ ಕಾಂತಿ ಹೆಚ್ಚಿಸುವ ಹವಳವಷ್ಟೇ ಆಗಿರಬೇಕು ಎಂಬ ಆಶಯ ಆತನದು. ಈ ಮಧ್ಯೆ ಅತ್ಯಂತ ಆಧುನಿಕವೆಂಬಂಥ ಕನ್ನಡವನ್ನು ಬಳಸಿ ಹೊಸ ಆಯಾಮವನ್ನೇ ಸೃಷ್ಟಿಸಿದ ವಚನಕಾರರು ಭಾಷಿಕ ಮೂಲಭೂತವಾದಕ್ಕೆ ತಕ್ಕ ಉತ್ತರಕೊಟ್ಟರು; ಸಾಮಾನ್ಯರ ಕನ್ನಡವನ್ನು ಸೃಜನಶೀಲ ಮಾಧ್ಯಮವಾಗಿಸಿದರು. ಮುಂದೆ ಕುಮಾರವ್ಯಾಸನ ಕನ್ನಡವು 'ಭಾಷಿಕ ಮೂಲಭೂತವಾದ'ಕ್ಕೆ ಸಾರ್ಥಕ ಉತ್ತರವಾಯಿತು. ಮಡಿವಂತಿಕೆಯನ್ನು ಮೀರಿದ ಕನ್ನಡ ಬಳಕೆಯಿಂದ ಕುಮಾರವ್ಯಾಸನ 'ದೇಸಿ' ಪ್ರಖ್ಯಾತವಾಯಿತು. ದಾಸಸಾಹಿತ್ಯದ ಕನ್ನಡ ಕೊಡುಗೆಯೂ ಗಣನೀಯವಾಯಿತು. ರತ್ನಾಕರವರ್ಣಿಯ ಸಾಂಗತ್ಯ ಕನ್ನಡದ ವಿಶಿಷ್ಟ ಪ್ರಯೋಗವಾಯಿತು. ಹೀಗೆ ಸಂಸ್ಕೃತ ಮೂಲದಿಂದ ಆವರಿಸಿಕೊಳ್ಳುತ್ತಿದ್ದ ಭಾಷಿಕ ಮೂಲಭೂತವಾದವನ್ನು ಕನ್ನಡದ ಕವಿಗಳು ಎದುರಿಸಿದರು; ಆಕಾಶ ಭಾಷೆಯಿಂದ ಭೂಮಿಭಾಷೆಯನ್ನು ಬಿಡುಗಡೆಗೊಳಿಸಿದರು.

ಮುಂದೆ, ನಮ್ಮ ದೇಶವು ಬ್ರಿಟಿಷ್ ವಸಾಹತುಶಾಹಿಯ ಆಡಳಿತಕ್ಕೆ ಸಿಕ್ಕಿದಾಗ ಇಂಗ್ಲಿಷ್ ಭಾಷೆಯ ಮಹತ್ವ ಹೆಚ್ಚಾಯಿತು. ಇದು ಸ್ವಾತಂತ್ರ್ಯಾನಂತರ ಮತ್ತಷ್ಟು ಹಿಡಿತ ಸಾಧಿಸಿತು. ಜೊತೆಗೆ ಸಂಯುಕ್ತ (ಕೇಂದ್ರ) ಸರ್ಕಾರವು ಹಿಂದಿಗೆ ಇಲ್ಲದ ಹಾಗೂ ಸಲ್ಲದ ಸ್ಥಾನವನ್ನು ಕೊಡಲು ಶಕ್ತಿಮೀರಿ ಪ್ರಯತ್ನಿಸಿತು. ಸಂವಿಧಾನವು ಹಿಂದಿ ಮತ್ತು ಇಂಗ್ಲಿಷ್‌ಗಳನ್ನು ಸಂಯುಕ್ತ ಸರ್ಕಾರದ ಅಧಿಕೃತ ಹಾಗೂ ಸಂಪರ್ಕ ಭಾಷೆಗಳೆಂದು

ಕರೆದಿದ್ದರೂ ಆನಂತರದ ಅನುಷ್ಠಾನ ಕ್ರಮದಲ್ಲಿ ಭಾಷಿಕ ಮೂಲಭೂತವಾದವೇ ವಿಜೃಂಭಿಸಿತು. ಸಂಯುಕ್ತ ಸರ್ಕಾರವು ರೂಪಿಸಿದ ಭಾಷಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹಿಂದಿ ಮತ್ತು ಸಂಸ್ಕೃತಕ್ಕೆ ಸಿಂಹಪಾಲು. ಹಿಂದಿಗೆ ಏನೆಲ್ಲ ಇದೆಯೆಂದು ನೋಡಿ. ಸಂವಿಧಾನದ ೧೭ನೇ ವಿಭಾಗದ ಮೊದಲನೇ ಅಧ್ಯಾಯದಲ್ಲಿ ಸಂಯುಕ್ತ ಸರ್ಕಾರದ ಅಧಿಕೃತ ಭಾಷೆಯ ಅಭಿವೃದ್ಧಿಗಾಗಿ ಸಂಸತ್ ಸಮಿತಿ ಮತ್ತು ಆಯೋಗವನ್ನು ರಚಿಸುವ ಅಧಿಕಾರವನ್ನು ರಾಷ್ಟ್ರಪತಿಗಳಿಗೆ ಕೊಡಲಾಗಿದೆ; ಸಮಿತಿ ಮತ್ತು ಆಯೋಗದ ರಚನೆ ಕಡ್ಡಾಯವಾಗಿದೆ. ಇವುಗಳು ಸಂಯುಕ್ತ ಭಾರತದ ಎಲ್ಲ ಭಾಷೆಗಳ ಅಭಿವೃದ್ಧಿಯನ್ನು ಗುರಿಯಾಗಿಟ್ಟುಕೊಂಡಿಲ್ಲ, ಬದಲಾಗಿ ಹಿಂದಿಕೇಂದ್ರಿತ ಧ್ಯೇಯೋದ್ದೇಶವನ್ನು ಹೊಂದಿವೆ. ಮುಂದೆ ಸಂಯುಕ್ತ ಸರ್ಕಾರವು ಹಿಂದಿಗಾಗಿ ೧೯೬೦ರಲ್ಲಿ ಕೇಂದ್ರ ಹಿಂದಿ ನಿರ್ದೇಶನಾಲಯವನ್ನು ಸ್ಥಾಪಿಸಿತು. ಇದು ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಹಿಂದಿಯ ಸ್ಥಾನವನ್ನು ಭದ್ರಗೊಳಿಸಿತು. ಪ್ರಾದೇಶಿಕ ಭಾಷೆಗಳನ್ನೂ ಒಳಗೊಂಡಂತೆ ಎಲ್ಲ ಭಾರತೀಯ ಭಾಷೆಗಳಿಗಾಗಿ ಕೆಲಸ ಮಾಡಬಹುದಾಗಿದ್ದ 'ವೈಜ್ಞಾನಿಕ ಮತ್ತು ತಾಂತ್ರಿಕ ಪರಿಭಾಷಾ ಆಯೋಗ'ವು ಪ್ರಾದೇಶಿಕ ಭಾಷೆಗಳಲ್ಲಿ ವಿಶ್ವವಿದ್ಯಾಲಯ ಮಟ್ಟದ ಕೆಲವು ಪುಸ್ತಕಗಳ ಪ್ರಕಟಣೆಗೆ ಅವಕಾಶ ಕಲ್ಪಿಸಿದ್ದಂತಹ ಒಂದೆರಡು ಕೆಲಸಗಳನ್ನು ಹೊರತು ಪಡಿಸಿ, ಉಳಿದಂತೆ ಹಿಂದಿಕೇಂದ್ರಿತವಾಗಿ ಕೆಲಸ ಮಾಡುತ್ತಿದೆ; ಹಿಂದಿಯಲ್ಲಿ ವಿಜ್ಞಾನ ಹಾಗೂ ತಾಂತ್ರಿಕ ಪರಿಭಾಷೆಯ ಅಭಿವೃದ್ಧಿಗೆ ಶ್ರಮಿಸುತ್ತಿದೆ. ಈ ದಿಕ್ಕಿನಲ್ಲಿ ಸುಮಾರು ೫೩ ನಿಘಂಟುಗಳನ್ನು ಪ್ರಕಟಿಸಲಾಗಿದೆ. ೧೫೩ಕ್ಕೂ ಹೆಚ್ಚು ಪದಕೋಶಗಳು ಬಂದಿವೆ. ಹಿಂದಿ ಅಕಾಡೆಮಿಗಳು, ವಿಶ್ವವಿದ್ಯಾಲಯಗಳ ಹಿಂದಿ ವಿಭಾಗಗಳು, ವಿವಿಧ ಸ್ವರೂಪದ ಹಿಂದಿ ಸಂಸ್ಥೆಗಳು ಈ ಆಯೋಗದ ಸಹಾಯವನ್ನು ಪಡೆದಿವೆ. ಆಗ್ರಾದಲ್ಲಿ 'ಕೇಂದ್ರೀಯ ಹಿಂದಿ ಶಿಕ್ಷಣ ಮಂಡಲ'ವನ್ನು ಸ್ಥಾಪಿಸಿದ್ದು ಇದರ ಶಾಖೆಗಳು ದೆಹಲಿ, ಹೈದರಾಬಾದ್, ಮೈಸೂರು, ಗೌಹಾಟಿ ಮತ್ತು ಶಿಲ್ಲಾಂಗ್‌ನಲ್ಲಿವೆ. ಈ ಸಂಸ್ಥೆಗಳು ದೇಶ-ವಿದೇಶಗಳಲ್ಲಿ ಹಿಂದಿ ವಿದ್ವಾಂಸರನ್ನು ಪ್ರೋತ್ಸಾಹಿಸುತ್ತದೆ, ಪುಸ್ತಕಗಳನ್ನು ಪ್ರಕಟಿಸುತ್ತದೆ.

ಇಂಗ್ಲಿಷ್ ಮತ್ತು ವಿದೇಶಿ ಭಾಷೆಗಳಿಗಾಗಿ ಹೈದರಾಬಾದ್‌ನಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸಲಾಗಿದ್ದು, ಪ್ರತಿರಾಜ್ಯದ ಒಂದು ಜಿಲ್ಲಾ ಕೇಂದ್ರದಲ್ಲಾದರೂ ಇದರ ಶಾಖೆಗಳಿರ ಬೇಕೆಂದು ಉದ್ದೇಶಿಸಲಾಗಿದೆ. ಮಂಜೂರಾದ ೨೬ ಜಿಲ್ಲಾ ಕೇಂದ್ರಗಳಲ್ಲಿ ೧೧ ಕೇಂದ್ರಗಳು ಕೆಲಸ ಮಾಡುತ್ತಿವೆ. ಪ್ರಾದೇಶಿಕ ಭಾಷೆಗಳಿಗಾಗಿ ಮೈಸೂರಿನಲ್ಲಿ 'ಭಾರತೀಯ ಭಾಷೆಗಳ ಕೇಂದ್ರೀಯ ಸಂಸ್ಥೆ'ಯಿದೆ. ಉರ್ದುವಿನ ಅಭಿವೃದ್ಧಿಗಾಗಿ 'ರಾಷ್ಟ್ರೀಯ ಮಂಡಳಿ'ಯೊಂದು ಕಾರ್ಯನಿರತವಾಗಿದೆ. ಬಹುಶಃ ಎರಡೋ ಮೂರೋ ಉರ್ದು ವಿಶ್ವವಿದ್ಯಾಲಯಗಳಿವೆ. ಉರ್ದು ವಿಶ್ವಕೋಶಗಳ ಪ್ರಕಟಣೆ ಪ್ರಗತಿಯಲ್ಲಿದೆ.

ಇದಿಷ್ಟು ಮಾಹಿತಿಗಳ ಆಧಾರದ ಮೇಲೆ ಸಂಯುಕ್ತ ಸರ್ಕಾರವು ಇತರ ಭಾಷೆಗಳಿಗಿಂತ ಹಿಂದಿಗೆ ಇನ್ನಿಲ್ಲದ ಪ್ರಾಶಸ್ತ್ಯ ನೀಡಿ ಪ್ರಾದೇಶಿಕ ಭಾಷೆಗಳನ್ನು ನಿರ್ಲಕ್ಷ್ಯ ಮಾಡಿರುವುದನ್ನು ಗುರುತಿಸಬಹುದು.

ಸಂಯುಕ್ತ ಸರ್ಕಾರವು ಅರ್ಥಾತ್ ಕೇಂದ್ರ ಸರ್ಕಾರವು ಸಂಸ್ಕೃತಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ನೀಡಿ, ಹಿಂದಿಗೆ ಮಾಡಿದಂತೆಯೇ ವಿಶೇಷ ಸೌಲಭ್ಯಗಳನ್ನು ಒದಗಿಸಿ, 'ಭಾಷೆಗಳ ಸಂಯುಕ್ತ ಅಸ್ತಿತ್ವ'ದ ಬದಲು 'ಕೇಂದ್ರ'ಸ್ಥಾನ ಸ್ಥಾಪನೆಗೆ ಆಸಕ್ತವಾದದ್ದು ಚರ್ಚಾರ್ಹವಾಗಿದೆ. ನಮ್ಮ ಸಂವಿಧಾನದ ೧೭ನೇ ವಿಭಾಗದಲ್ಲಿ ೩೪೩ರಿಂದ ೩೫೧ನೇ ವಿಧಿಯವರೆಗೆ ಪ್ರಸ್ತಾಪಿಸಿರುವ ಭಾಷಾ ವಿಷಯಗಳಲ್ಲಿ 'ಶಾಸ್ತ್ರೀಯ ಭಾಷೆ'ಯ ಉಲ್ಲೇಖವಿಲ್ಲ. ಆನಂತರ, ಸಂಯುಕ್ತ ಸರ್ಕಾರವು ರೂಪಿಸಿದ ಭಾಷಾ ನೀತಿಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಸಂಸ್ಕೃತವನ್ನು ಶಾಸ್ತ್ರೀಯ ಭಾಷೆಯೆಂದು ವರ್ಗೀಕರಿಸಿ ಪ್ರತಿಷ್ಠೆಯ ಜೊತೆಗೆ ಸೌಲಭ್ಯದ ಸಿಂಹಪಾಲನ್ನು ನೀಡಿದೆ. ಇನ್ನೊಂದು ಶಾಸ್ತ್ರೀಯ ಭಾಷೆಯೆಂದು ಪರಿಗಣಿತವಾದ ಅರೇಬಿಕ್ ಭಾಷೆ ಮತ್ತು ಅದು ಅಸ್ತಿತ್ವದಲ್ಲಿರುವ ಮದರಸಗಳಿಗೂ ಅಲ್ಪಸ್ವಲ್ಪ ಗಮನ ಕೊಡಲಾಗಿದೆ. ಆದರೆ ಅದು 'ಸಹಜವಾಗಿಯೇ' ಸಂಸ್ಕೃತದ ಪ್ರಮಾಣದಲ್ಲಿಲ್ಲ. ಈಗ ವಿವರಗಳನ್ನು ನೋಡೋಣ.

ರಾಜ್ಯಗಳಲ್ಲಿ ಸಂಸ್ಕೃತ ಕಲಿಕೆಯನ್ನು ಬಲಪಡಿಸಲು ವಿದ್ಯಾರ್ಥಿಗಳಿಗೆ ಮಾಹೆಯಾನ ೧೦೦ರಿಂದ ೧೨೫ರೂಪಾಯಿಗಳ ವಿದ್ಯಾರ್ಥಿವೇತನ, ೫೫ ವರ್ಷಗಳಿಗೆ ಮೇಲ್ಪಟ್ಟ ಆಯ್ದ ಸಂಸ್ಕೃತ ವಿದ್ವಾಂಸರಿಗೆ ವಿಶೇಷ ಸಹಾಯ-ವಾರ್ಷಿಕ ೧೦,೦೦೦ರೂ.ಗಳು, ರಾಜ್ಯಗಳಲ್ಲಿ ಕೆಲಸ ಮಾಡುವ ಸಂಸ್ಕೃತ ಅಧ್ಯಾಪಕರ ವೇತನಕ್ಕಾಗಿ ಗರಿಷ್ಠ ಅನುದಾನ ನೀಡಿಕೆ, ಸಂಸ್ಕೃತ ಕಲಿಕಾಕೇಂದ್ರಗಳಿಗೆ ಗರಿಷ್ಠ ಪ್ರಮಾಣದ ಧನಸಹಾಯ, ಸಂಸ್ಕೃತ ವಿಶ್ವವಿದ್ಯಾಲಯಗಳ ಸ್ಥಾಪನೆ, ದೆಹಲಿಯ ಲಾಲ್‌ಬಹದ್ದೂರ್ ಶಾಸ್ತ್ರಿ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ, ಮತ್ತು ತಿರುಪತಿಯ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠಕ್ಕೆ ಡೀಮ್ಡ್ ಯೂನಿವರ್ಸಿಟಿ ಸ್ಥಾನಮಾನ, ಉಜ್ಜಯಿನಿಯಲ್ಲಿ ರಾಷ್ಟ್ರೀಯ ವೇದವಿದ್ಯಾಪ್ರತಿಷ್ಠಾನದ ಸ್ಥಾಪನೆ, ಈ ಪ್ರತಿಷ್ಠಾನದ ಮೂಲಕ ಇಲ್ಲೀವರೆಗೆ ೩೫ ವೇದವಿದ್ಯಾಲಯಗಳಿಗೆ ಅನುದಾನ, ೩೨ ಪಂಡಿತರಿಗೆ, ೫೭೮ ವಿದ್ಯಾರ್ಥಿಗಳಿಗೆ ಧನಸಹಾಯ, ಅನೇಕ ಅರೆಕಾಲಿಕ ಅಭ್ಯಾಸಿಗಳಿಗೆ ಧನಸಹಾಯ - ಹೀಗೆ ಹತ್ತು ಹಲವು ವಿಧಾನಗಳಲ್ಲಿ ಸಂಸ್ಕೃತ ಭಾಷೆ - ಸಾಹಿತ್ಯಕ್ಕೆ ಅಧಿಕ ಸಹಾಯ ಒದಗುತ್ತಿದೆ. ೧೯೬೨ರಿಂದಲೇ ಸಂಸ್ಕೃತದ ಅಭಿವೃದ್ಧಿಗಾಗಿ ರಾಜ್ಯಗಳಿಗೆ ಅನುದಾನ ನೀಡುವ ಯೋಜನೆಯಿದ್ದರೂ ಕಳೆದ ಐದಾರು ವರ್ಷಗಳಲ್ಲಿ ಈ 'ಕಾರ್ಯಾಚರಣೆ' ತೀವ್ರಗೊಂಡಿದೆ. ಪತ್ರಿಕೆಗಳಲ್ಲಿ ಬಂದ ಒಂದು ಸುದ್ದಿಯ ಪ್ರಕಾರ ಹಿಂದಿನ 'ಕೇಂದ್ರ' ಸರ್ಕಾರವು ಸಂಸ್ಕೃತಕ್ಕಾಗಿ ೧೦೦ಕೋಟಿ ರೂಪಾಯಿಗಳ ಯೋಜನೆ ರೂಪಿಸಿತ್ತು. ಮದರಸಗಳಿಗೆ ಎಂದಿನ ಮಾದರಿಯಲ್ಲೇ ಮುಂದುವರಿದ ಸಹಕಾರದ ಜೊತೆಗೆ ಆಧುನಿಕ ವಿಷಯಗಳ ಅಳವಡಿಕೆಗೆ ಪ್ರಯತ್ನ ಮಾಡಲಾಯಿತು. ಆದರೆ ದೇವಭಾಷೆ ಮತ್ತು ಶಾಸ್ತ್ರೀಯ ಭಾಷೆಯ ಸ್ಥಾನಮಾನದಲ್ಲಿ ಸಂಸ್ಕೃತ, ರಾಷ್ಟ್ರಭಾಷೆಯ ಗತ್ತಿನಲ್ಲಿ ಹಿಂದಿ ಅತ್ಯಂತ ಹೆಚ್ಚು ಆದರ, ಆರ್ಥಿಕ ಸಹಾಯಗಳನ್ನು ಪಡೆದು ರಾಜ್ಯಭಾಷೆಗಳಿಗಿಂತ 'ಎತ್ತರ'ದ ಸಿಂಹಾಸನದಲ್ಲಿ ಸುಖಾಸೀನ ವಾಗಿರುವುದು ಸ್ಪಷ್ಟ. ಸಂಸ್ಕೃತವನ್ನಾಗಲಿ, ಹಿಂದಿಯನ್ನಾಗಲಿ ಭಾಷೆಗಳಾಗಿ ಯಾರೂ ವಿರೋಧಿಸಬೇಕಿಲ್ಲ. ಆದರೆ ಈ ಭಾಷೆಗಳನ್ನು ಸಾರ್ವಭೌಮ ಸ್ಥಾನಕ್ಕೆ ತರುವ ಪ್ರಜ್ಞಾ ಪೂರ್ವಕ ಪ್ರಯತ್ನದಲ್ಲಿ ಉಳಿದ ಭಾಷೆಗಳನ್ನು 'ಸಾಮಂತ' ಸ್ಥಾನದಲ್ಲೂ ಸ್ಥಾಪಿಸದೆ ಅಗಾಧ ಭಾಷಾ ಅಸಮಾನತೆಯನ್ನು ತೋರಿಸಿದ ಸಂಯುಕ್ತ (ಕೇಂದ್ರ) ಸರ್ಕಾರದ ಧೋರಣೆಯನ್ನು 'ಭಾಷಿಕ ಮೂಲಭೂತವಾದ'ವೆಂದು ಕರೆಯಬೇಕಾಗುತ್ತದೆ; ವಿರೋಧಿಸಬೇಕಾಗುತ್ತದೆ.

ಆದರೆ, ಕನ್ನಡದ ಹಿತಚಿಂತಕರು 'ಕೇಂದ್ರ' ಸರ್ಕಾರದ ಭಾಷಿಕ ಮೂಲಭೂತ ವಾದಕ್ಕೆ ಪರ್ಯಾಯವಾಗಿ ಭಾಷಾಸಮಾನತೆಯ ಹೋರಾಟದ ಯೋಚನೆ ಮಾಡಿದ ಸೂಚನೆಗಳಿಲ್ಲ. ಅದರ ಬದಲು ಈ ಭಾಷಿಕ ಮೂಲಭೂತವಾದದ ಬೋನಿಗೆ ಬೀಳಲು ಹಾತೊರೆಯುತ್ತಿರುವುದು ಕಂಡುಬರುತ್ತಿದೆ. ತಮಿಳರು ತಮ್ಮ ಭಾಷೆಯು 'ಶಾಸ್ತ್ರೀಯ ಭಾಷೆ'ಯಾಗಬೇಕೆಂದು ಒತ್ತಾಯಿಸುವವರೆಗೂ ಆ ಬಗ್ಗೆ ಯೋಚನೆ ಮಾಡದೆ ಇದ್ದ ಕನ್ನಡದ ಚಿಂತನಾವಲಯವೊಂದು ಈಗ ಕನ್ನಡವು ಶಾಸ್ತ್ರೀಯ ಭಾಷೆಯಾಗಬೇಕೆಂದು ಪ್ರತಿದಿನವೂ ಹೇಳುತ್ತಿದೆ. ತಂತಮ್ಮ ಭಾಷೆಗಳನ್ನು 'ಶಾಸ್ತ್ರೀಯ ಭಾಷೆ'ಯ ಪಟ್ಟಿಗೆ ಸೇರಿಸಬೇಕೆಂದು ಕೇಳದೆಯೂ ತೆಲುಗು, ಮಲಯಾಳಂ, ಮರಾಠಿ, ಬೆಂಗಾಳಿ, ಗುಜರಾತಿ ಮುಂತಾದ ಭಾಷೆಗಳು ಸುಖವಾಗಿಯೇ ಇವೆ. ಇದು ಏನನ್ನು ತೋರಿಸುತ್ತದೆಯೆಂದರೆ - ಯಾವುದೇ ಒಂದು ಭಾಷೆ 'ಶಾಸ್ತ್ರೀಯ'ವೆಂಬ ಪಟ್ಟಗಳಿಸುವು ದರಿಂದಲೇ ಆಯಾ ಭಾಷೆಯ ಮತ್ತು ಭಾಷಿಗರ ಉದ್ಧಾರ ಆಗುವುದಿಲ್ಲ ಮತ್ತು ಇದು ಆದ್ಯತೆಯ ವಿಷಯವಲ್ಲ. ಹೀಗಿದ್ದರೂ ಇದು ಆದ್ಯತೆಯನ್ನು ಪಡೆಯುತ್ತಿದೆ. ಶಾಸ್ತ್ರೀಯವೊ ಅಲ್ಲವೊ ಈ ದೇಶದ ಎಲ್ಲ ಭಾಷೆಗಳಿಗೂ ಅಗತ್ಯಕ್ಕನುಗುಣವಾಗಿ ಸಮಾನ ಸೌಲಭ್ಯಗಳನ್ನು ಒದಗಿಸುವುದು ಕೇಂದ್ರ ಸರ್ಕಾರದ ಕರ್ತವ್ಯವೆಂದು ಒತ್ತಾಯಿಸಲು ಹೋರಾಟಗಳೇ ಇಲ್ಲವಾಗುತ್ತಿವೆ. ಪರ್ಯಾಯ ಕ್ರಿಯಾಶೀಲತೆಯ ಮೂಲಕ ನಮ್ಮ ಭಾಷಾ ಹೋರಾಟಕ್ಕೆ ಹೊಸ ಆಯಾಮ ಕೊಡುವ ಪ್ರಯತ್ನಗಳೇ ಕಾಣದಾಗುತ್ತಿವೆ. ಹಾಗೆ ನೋಡಿದರೆ ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡದ ಸಂದರ್ಭವು ಆಧುನಿಕ ಸಂದರ್ಭಕ್ಕಿಂತ ಮಿಗಿಲಾಗಿ ಭಾಷಿಕ ಮೂಲಭೂತವಾದಕ್ಕೆ ಪರ್ಯಾಯ ಉತ್ತರಗಳನ್ನು ಕಂಡುಕೊಂಡಿತ್ತು. ಪಂಪ, ನಯಸೇನ, ಆಂಡಯ್ಯ, ವಚನಕಾರರು, ಕುಮಾರವ್ಯಾಸ, ದಾಸರು - ಹೀಗೆ ಎಲ್ಲರೂ 'ದೇವಭಾಷೆ'ಗೆ ಪರ್ಯಾಯವಾಗಿ ದೇಸಿಭಾಷೆಯ ನೆಲೆಗಳನ್ನು ನಿರ್ಮಿಸಿದ್ದನ್ನು ಈಗಾಗಲೇ ನಿರೂಪಿಸಲಾಗಿದೆ. 'ಸುಲಿದ ಬಾಳೆಯ ಹಣ್ಣಿನಂದದಿ' ಇರುವ 'ಕನ್ನಡ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ? ಸಂಸ್ಕೃತದಲಿನ್ನೇನು' ಎಂದು ಪ್ರಶ್ನಿಸಿದ ಮಹಲಿಂಗರಂಗ ಕವಿಯ ಮಾತು ಇಂದಿಗೂ ಮಹತ್ವದ್ದಾಗಿದೆ. ಸಂಸ್ಕೃತದ ಮೂಲಕ 'ಮೋಕ್ಷ' ಕಂಡುಕೊಳ್ಳುವ ಮನೋಧರ್ಮದ ಬದಲು ಕನ್ನಡದ ನುಡಿಯಲ್ಲಿ ತನ್ನಲ್ಲಿ ತಾನು ಮೋಕ್ಷ ಕಂಡುಕೊಳ್ಳುವ ಪರ್ಯಾಯ ಮಾರ್ಗವನ್ನು ಆತ್ಮವಿಶ್ವಾಸದಿಂದ ಪ್ರತಿಪಾದಿಸುವ ರೀತಿ ಚೇತೋಹಾರಿಯಾಗಿದೆ. ವಿಚಿತ್ರವೆಂದರೆ ಕನ್ನಡದ 'ಆಧುನಿಕ' ಹಿತಚಿಂತಕರು ಸಂಸ್ಕೃತದ ಬಗ್ಗೆ ಈ ರೀತಿಯ ಪರ್ಯಾಯ ಚಿಂತನೆ ನಡೆಸಿದ್ದು ಕಡಿಮೆ. ಉತ್ತಮ ಉದಾಹರಣೆಯೆಂದರೆ ಗೋಕಾಕ್ ವರದಿ. ಪ್ರೌಢಶಾಲೆಯಲ್ಲಿ ಪ್ರಥಮ ಭಾಷೆಗಳ ಪಟ್ಟಿಯಲ್ಲಿದ್ದ ಸಂಸ್ಕೃತವನ್ನೇ ಹೆಚ್ಚು ವಿದ್ಯಾರ್ಥಿಗಳು ತೆಗೆದುಕೊಂಡು ಕನ್ನಡ ಪ್ರಥಮಭಾಷೆಗೆ ವಿದ್ಯಾರ್ಥಿಗಳ ಸಂಖ್ಯೆ ತೀರಾ ಇಳಿಮುಖವಾಗಿತ್ತು. ಮಾತೃಭಾಷೆಗಳನ್ನು ಮಾತ್ರ ಪ್ರಥಮ ಭಾಷೆಯ ಪಟ್ಟಿಯಲ್ಲಿ ಸೇರಿಸುವುದು ಪದ್ಧತಿ. ಯಾರ ಮಾತೃಭಾಷೆಯೂ ಅಲ್ಲದ, ಗ್ರಾಂಥಿಕವಾಗಿ ಮಾತ್ರ ಉಳಿದಿರುವ ಸಂಸ್ಕೃತವನ್ನು ಪ್ರಥಮ ಭಾಷೆಯ ಪಟ್ಟಿಗೆ ಸೇರಿಸಿದ್ದು ಮಾತ್ರವಲ್ಲದೆ, ಪರೀಕ್ಷೆಯಲ್ಲಿ ಸಂಸ್ಕೃತ ಪತ್ರಿಕೆಗೆ ಕನ್ನಡ ಅಥವಾ ಇಂಗ್ಲಿಷಿನಲ್ಲಿ ಉತ್ತರ ಬರೆಯುವ ಅವಕಾಶವನ್ನು ಕಲ್ಪಿಸಲಾಗಿತ್ತು. ಪಠ್ಯಪುಸ್ತಕ ಸಹ ಕನ್ನಡ ಪುಸ್ತಕಗಳ ಪ್ರಮಾಣದಲ್ಲಿರಲಿಲ್ಲ. ಹೀಗಾಗಿ ಸಂಸ್ಕೃತದಲ್ಲಿ ಹೆಚ್ಚು ಅಂಕ ಪಡೆಯಲು ಸಾಧ್ಯವೆಂದು ಅದಕ್ಕೆ ನೂಕುನುಗ್ಗಲು. ಧೀಮಂತ ದೇವರಾಜ ಅರಸು ಅವರು ಈ ಅವೈಜ್ಞಾನಿಕ

ಪದ್ಧತಿಯನ್ನು ಮನಗಂಡು ಕನ್ನಡವನ್ನೂ ಒಳಗೊಂಡಂತೆ ಮಾತೃಭಾಷೆಗಳನ್ನು ಮಾತ್ರ ಪ್ರಥಮ ಭಾಷೆಗಳ ಪಟ್ಟಿಯಲ್ಲಿ ಉಳಿಸಿ ಸಂಸ್ಕೃತವನ್ನು ಮೂರನೇ ಭಾಷೆಯ ಪಟ್ಟಿಗೆ ಸೇರಿಸಿದರು. ಗುಂಡೂರಾವ್ ಅವರು ಮುಖ್ಯ ಮಂತ್ರಿಗಳಾದಾಗ ಸಂಸ್ಕೃತವನ್ನು ಮತ್ತೆ ಪ್ರಥಮಭಾಷೆಯ ಪಟ್ಟಿಗೆ ಸೇರಿಸಿದರು. ಆಗ ಬಂಡಾಯ ಸಾಹಿತ್ಯ ಸಂಘಟನೆಯು ಸಮುದಾಯ, ಚಿತ್ರಾ, ದಲಿತ ಸಂಘರ್ಷ ಸಮಿತಿ, ಕನ್ನಡ ಉಳಿಸಿ ಕ್ರಿಯಾ ಸಮಿತಿಗಳ ಸಹಕಾರ ದೊಂದಿಗೆ ಕನ್ನಡಪರ ಹೋರಾಟ ಆರಂಭಿಸಿತು. ಮುಂದೆ ಗೋಕಾಕ್ ಸಮಿತಿ ರಚನೆಯಾಗಿ ಕನ್ನಡವೊಂದೇ ಪ್ರಥಮ ಭಾಷೆಯ ಪಟ್ಟಿಯಲ್ಲಿರಬೇಕೆಂದು ಶಿಫಾರಸ್ಸು ಮಾಡಿತು. ಸಂಸ್ಕೃತವೊಂದನ್ನೇ ತೆಗೆಯುವ ದಿಟ್ಟ ನಿರ್ಧಾರದ ಬದಲು ಕನ್ನಡವೊಂದನ್ನೇ ಉಳಿಸಿಕೊಳ್ಳುವ ಉಪಾಯದ ಜನಪ್ರಿಯ ಮಾರ್ಗ ಇದಾಗಿತ್ತು. ಸಂವಿಧಾನಾತ್ಮಕ ಅಗತ್ಯಗಳ ಪೂರೈಕೆಗಾಗಿ ಹೆಸರಿಗಾದರೂ ಕನ್ನಡದ ಜೊತೆಗೆ ಅಲ್ಪಸಂಖ್ಯಾತರ ಭಾಷೆಗಳಿರಬೇಕೆಂಬ ಅಂಶವನ್ನು ಇಲ್ಲಿ (ಉದ್ದೇಶಪೂರ್ವಕವಾಗಿ?) ಮರೆಯಲಾಗಿತ್ತು. ಮುಂದೆ ಗೋಕಾಕ್ ಚಳವಳಿ ನಡೆದು ಡಾ. ರಾಜಕುಮಾರ್ ಅವರ ಪ್ರವೇಶದಿಂದಾಗಿ ಜನ ಸಾಮಾನ್ಯರು ತೀವ್ರವಾಗಿ ತೊಡಗಿಸಿಕೊಂಡರು, ನಿಜ. ಆದರೆ ನ್ಯಾಯಾಲಯದ ತೀರ್ಪು ಕನ್ನಡವೊಂದೇ ಪ್ರಥಮ ಭಾಷೆಯಾಗುವುದಕ್ಕೆ ವಿರೋಧವಾಗಿತ್ತು. ಅಲ್ಪ ಸಂಖ್ಯಾತರ ಭಾಷೆಗಳನ್ನು ಪ್ರಥಮ ಭಾಷೆಯ ಪಟ್ಟಿಯಲ್ಲಿ ಸೇರಿಸುವುದು ಅನಿವಾರ್ಯವಾಯಿತು. ಈ ಮಧ್ಯೆ ಅದು ಹೇಗೋ ಮತ್ತೆ ಸಂಸ್ಕೃತವು ಪ್ರಥಮ ಭಾಷೆಯ ಪಟ್ಟಿಗೆ ಸೇರಿತು! ಮತ್ತೆ ಮೊದಲಿನ ಸ್ಥಿತಿ. ಹಾಗಾದರೆ ಇದಕ್ಕೆ ಯಾಕೆ ವಿರೋಧ ಮಾಡಲಿಲ್ಲ ಎಂಬ ಪ್ರಶ್ನೆಗಾಗಿ ಇಷ್ಟೆಲ್ಲ ವಿವರಗಳನ್ನು ಕೊಡಬೇಕಾಯಿತು. ವಾಸ್ತವವಾಗಿ ಹೋರಾಟ ಪ್ರಾರಂಭವಾದದ್ದೇ ಪ್ರೌಢಶಾಲಾ ಪಠ್ಯ ಕ್ರಮದಲ್ಲಿ ಕನ್ನಡದ ಒಳಿತಿಗೆ, ಯಾರ ಮಾತೃಭಾಷೆಯೂ ಅಲ್ಲದ ಸಂಸ್ಕೃತವು ಅಡ್ಡಿಯಾಗಿದೆ ಮತ್ತು ಪ್ರಥಮ ಭಾಷೆಯ ಪಟ್ಟಿಗೆ ಸಂಸ್ಕೃತವನ್ನು ಸೇರಿಸಿರುವುದು ಅವೈಜ್ಞಾನಿಕವಾಗಿದೆ ಎಂಬ ಕಾರಣಕ್ಕಾಗಿ. ಮಾತೃ ಭಾಷೆಗಳಿಗೆ (ಕನ್ನಡವನ್ನೂ ಒಳಗೊಂಡಂತೆ) ೧೨೫ ಅಂಕಗಳನ್ನು ನಿಗದಿಮಾಡಿದ್ದು ಬಿಟ್ಟರೆ ಬೇರೇನೂ ಬದಲಾವಣೆ ಆಗಲಿಲ್ಲ. ಮೊದಲು ಪ್ರೌಢಶಾಲೆಯಲ್ಲಿ ಪ್ರಥಮ ಭಾಷೆಗೆ ೧೦೦, ದ್ವಿತೀಯ ಭಾಷೆಗೆ ೭೫, ತೃತೀಯ ಭಾಷೆಗೆ ೫೦ ಅಂಕಗಳು ಇದ್ದವು. ಗೋಕಾಕ್ ಚಳವಳಿಯ ನಂತರ ಇದು ಕ್ರಮವಾಗಿ ೧೨೫, ೧೦೦, ೧೦೦ ಅಂಕಗಳಿಗೆ ಏರಿಕೆಯಾಯಿತು. ಒಟ್ಟಾರೆ ಹೋರಾಟದ ಫಲವೆಂದರೆ ವಿದ್ಯಾರ್ಥಿಗಳಿಗೆ ಅಂಕದ ಹೊರೆ! ಜೊತೆಗೆ ಕನ್ನಡಪರ ಜಾಗೃತಿ ಮೂಡಿದ್ದು ಮಹತ್ವದ ಅಂಶ. ಮುಂದೆ ಗೋಕಾಕ್ ಚಳವಳಿಯ ಬಗ್ಗೆ ಬರೆದ ಕೆಲವರು – ಕನ್ನಡ ಹಿತಚಿಂತಕರು – ಮರೆತಾದರೂ ಬಂಡಾಯ ಸಾಹಿತ್ಯ ಸಂಘಟನೆಯ ಹೆಸರನ್ನು ಉಲ್ಲೇಖಿಸಲಿಲ್ಲ, ಬೇರೆ ಸಂಘಟನೆಗಳನ್ನೂ ನೆನೆಯಲಿಲ್ಲ, ತಮ್ಮಿಂದ ತಮ್ಮವರಿಂದ ಮಾತ್ರವೇ ಎಲ್ಲ ಕೆಲಸವಾಯಿತೆಂದು ಸ್ವಯಂ ವೈಭವೀಕರಣಕ್ಕೆ ತೊಡಗಿದರು. ಇದು ಸಹ ಭಾಷಿಕ ಮೂಲಭೂತವಾದೀ ಧೋರಣೆಯ ಒಂದು ಅಂಶವೇ ಆಗಿದೆ. ಆಮೇಲೆ ತಪ್ಪುಗಳ ಅರಿವು ಇಂತಹ 'ಚರಿತ್ರೆಕಾರರಿಗೆ' ಆಗಿರ ಬಹುದು. ಆದರೆ ಕನ್ನಡದ ಹಿತವನ್ನು ತಾತ್ವಿಕನೆಲೆಯಲ್ಲಿ ನೋಡಿ ಪರ್ಯಾಯ ಚಿಂತನೆಯ ದಿಟ್ಟತನವನ್ನು ತೋರಿಸಲು ನಮ್ಮ ಪ್ರಾಚೀನ – ಮಧ್ಯಕಾಲೀನ ಕವಿಗಳಿಗೆ ಸಾಧ್ಯವಾದಂತೆ ಈ ಆಧುನಿಕರಿಗೆ ಯಾಕೆ ಸಾಧ್ಯವಾಗುತ್ತಿಲ್ಲ ಎಂಬ ಪ್ರಶ್ನೆ ಮುಖ್ಯ. ಸಂಸ್ಕೃತದ ಪ್ರಾಬಲ್ಯಕ್ಕೆ ಪರ್ಯಾಯವಾಗುವ ಬದಲು 'ಸಂಸ್ಕೃತವೇ ಆಗಲು' ಹಾತೊರೆಯುವುದು ಎಂತಹ ಮನೋಧರ್ಮ? ಅಲ್ಪಸಂಖ್ಯಾತರ ಭಾಷೆಗಳಿಗೆ ಇಷ್ಟು ಸಂಪತ್ತು, ಸೌಲಭ್ಯ, ಮಹತ್ವ, ದೊರಕಿದ್ದರೆ ಈ ಕನ್ನಡಪರ ಹಿತಚಿಂತಕರು ಸುಮ್ಮನಿರುತ್ತಿದ್ದರೆ? ಇಲ್ಲ ಎನ್ನುವುದಕ್ಕೆ ಮುಂದಿನ ಮಾಹಿತಿ ಪುರಾವೆ ಒದಗಿಸುತ್ತದೆ.

ಸಾವಿರಾರು ವರ್ಷಗಳಿಂದ ಭಾಷಿಕ ಮೂಲಭೂತ ವಾದವನ್ನು ವಿರೋಧಿಸಿಕೊಂಡು ಉಳಿದು ಬಂದ ಕನ್ನಡ ವನ್ನೇ ಭಾಷಿಕ ಮೂಲಭೂತವಾದದ ಭಾಗವಾಗಿಸುವ ಮನೋಧರ್ಮವೊಂದು ಇತ್ತೀಚೆಗೆ ಮೇಲುಗೈ ಪಡೆಯುತ್ತಿದೆ. ಇದರ ಫಲವಾಗಿ ಕನ್ನಡದ ಅಭಿವೃದ್ಧಿಯ ಆದ್ಯತೆಗಳು ಹಿಂದೆಮುಂದಾಗುತ್ತಿವೆ. ಕನ್ನಡ ಕೇಂದ್ರಿತ ಶಿಕ್ಷಣ, ಕನ್ನಡದ ಮೂಲಕ ಆಡಳಿತ, ಕನ್ನಡಿಗರಿಗೆ ಉದ್ಯೋಗದಲ್ಲಿ ಸಂಪೂರ್ಣ ಆದ್ಯತೆ – ಇಂತಹ ವಿಷಯಗಳು ಹಿಂದಕ್ಕೆ ಸರಿದು ಅಷ್ಟೇನೂ ಮಹತ್ವವಲ್ಲದ ಅಂಶಗಳು ಮೊದಲ ಸಾಲಿನಲ್ಲಿ ನಿಂತಿವೆ. ಉದಾಹರಣೆಗೆ ಹಿಂದೊಮ್ಮೆ ಉರ್ದು ವಾರ್ತಾ ಪ್ರಸಾರ ಮಾಡಲು ಬೆಂಗಳೂರು ದೂರದರ್ಶನವು ತೀರ್ಮಾನಿಸಿದಾಗ ನಡೆದ ಪ್ರತಿಭಟನೆ ಮತ್ತು ಹಿಂಸಾತ್ಮಕ ಘಟನೆಗಳ ಸ್ವರೂಪವನ್ನು ಗಮನಿಸಬಹುದು. ಉರ್ದು ವಾರ್ತಾ ಪ್ರಸಾರವು ಕನ್ನಡ ಕಾರ್ಯಕ್ರಮಗಳಿಗೆ ನಿಗದಿಯಾದ ಕಾಲಾವಧಿಯನ್ನು ಕಿತ್ತುಕೊಳ್ಳುವುದು ಸರಿಯಲ್ಲ, ಆದರೆ ಉರ್ದು ವಾರ್ತಾ ಪ್ರಸಾರವನ್ನು ವಿರೋಧಿಸುವಾಗ ಕನ್ನಡ ಪ್ರೇಮ ಕೆಲಸ ಮಾಡಿತೆ ಅಥವಾ ಉರ್ದು-ಮುಸ್ಲಿಂ ವಿರೋಧಿ ಮನೋಧರ್ಮ ಕೆಲಸ ಮಾಡಿತೆ ಎಂಬ ಅಂಶ ಬಹು ಮುಖ್ಯ. ಬೆಂಗಳೂರು ಆಕಾಶವಾಣಿಯಲ್ಲಿ ಸಂಸ್ಕೃತ ವಾರ್ತಾ ಪ್ರಸಾರವಿದ್ದರೂ ವಿರೋಧಿಸದವರು ದೂರದರ್ಶನದ ಉರ್ದು ವಾರ್ತಾ ಪ್ರಸಾರವನ್ನು 'ಉಗ್ರವಾಗಿ' ವಿರೋಧಿಸಿದ್ದು ಒಂದು ವಿರೋಧಾಭಾಸ. ಇದೇ ಮನೋಧರ್ಮ, ತೀರಾ ಇತ್ತೀಚೆಗೆ ಅಂದರೆ ದಿನಾಂಕ ೩೧-೩-೨೦೦೪ರಂದು ಹೊರಡಿಸಿದ 'ವಿವಾದಾತ್ಮಕ' ಆದೇಶವನ್ನು ವಿರೋಧಿಸುವುದರ ಮೂಲಕ ಮತ್ತೆ ಪ್ರಕಟಗೊಂಡಿತು. ಕನ್ನಡದ ಮುಖ್ಯ ಆದೇಶಗಳನ್ನು ಅಲ್ಪಸಂಖ್ಯಾತರ ಭಾಷೆಗಳಲ್ಲಿ ಪ್ರಕಟಿಸುವ ಅವಕಾಶವನ್ನು ಸದರಿ ಆದೇಶವು ಒದಗಿಸಿದೆ. (ಆದೇಶ ಸಂಖ್ಯೆ - ಸಿಆಸುಇ೧೪). ಇಲ್ಲಿ 'ಮುಖ್ಯ ಆದೇಶಗಳು' ಎಂಬುದನ್ನು ಗಮನಿಸಬೇಕು ಮತ್ತು ಕನ್ನಡದ ಬದಲಾಗಿ ಅಲ್ಪಸಂಖ್ಯಾತರ ಭಾಷೆಗಳಲ್ಲಿ ಆದೇಶ ಹೊರಡುವುದಿಲ್ಲ ಎಂಬುದನ್ನೂ ಗುರುತಿಸಬೇಕು. ಇಂತಹ ಆದೇಶ ಹೊಸದಲ್ಲ. ಇದೇ ರೀತಿಯ ಆದೇಶಗಳನ್ನು ೫-೧೧-೧೯೬೬, ೨೪-೧೧-೧೯೮೭, ೧೬-೧೧-೧೯೯೦, ೨೦-೫-೧೯೯೯ ಮತ್ತು ೩೦-೭-೨೦೦೧ – ಈ ದಿನಾಂಕಗಳಲ್ಲಿ ಹೊರಡಿಸಲಾಗಿತ್ತು. ಇಂಥದೇ ಆದೇಶ ವನ್ನು ಅಲ್ಪಸಂಖ್ಯಾತರ ಆಯೋಗದ ಅಗತ್ಯಕ್ಕಾಗಿ ಮತ್ತೆ ೩೧-೩-೨೦೦೪ರಂದು ಹೊರಡಿಸಿದ್ದರೂ, ಈ ಆದೇಶಕ್ಕೆ ಲಗತ್ತಿಸಿದ ಅನುಬಂಧ ಮಾತ್ರ ಖಂಡಿತ ಖಂಡನಾರ್ಹ ವಾಗಿದೆ. ಕರ್ನಾಟಕದಲ್ಲಿ ಅಲ್ಪಸಂಖ್ಯಾತ ಭಾಷೆಗಳು ಗಣನೀಯ ಪ್ರಮಾಣದಲ್ಲಿವೆಯೆಂದು ಅನೇಕ ಪ್ರದೇಶ ಗಳನ್ನು ಪಟ್ಟಿಮಾಡಿರುವ ಈ ಅನುಬಂಧ ಅವೈಜ್ಞಾನಿಕ ವಾಗಿದೆ. ವಿಚಿತ್ರವೆಂದರೆ, ಇಡೀ ಆದೇಶದ ಆಶಯವನ್ನು ಸಾರಾಸಗಟಾಗಿ ವಿರೋಧಿಸಿ ಇದು ಕನ್ನಡದ ನಾಶಕ್ಕೆ ಕಾರಣವಾಗುತ್ತದೆಯೆಂಬಂತೆ ಬಿಂಬಿಸಿದ್ದೂ ಅಷ್ಟೇ ಅವೈಜ್ಞಾನಿಕವಾಗಿದೆ. ವಿರೋಧಕ್ಕೆ ಮಣಿದ ಸರ್ಕಾರ ಸದರಿ ಆದೇಶವನ್ನು ಮರು ಪರಿಶೀಲನೆಗಾಗಿ ಹಿಂದಕ್ಕೆ ಪಡೆದಾಗ ಆದೇಶ ವಿರೋಧಿಗಳಿಗೆ ವಿಜಯೋತ್ಸವದ ಆನಂದ. ಆದರೆ ಮತ್ತೊಂದು ವಿಚಿತ್ರವೆಂದರೆ ಸದರಿ ಆದೇಶವನ್ನು (೩೧-೩-೨೦೦೪ ರದು) ಹಿಂತೆಗೆದು ಕೊಂಡ ಮೇಲೂ ಇದಕ್ಕೂ ಹಿಂದಿನ ಐದು ಆದೇಶಗಳು ಹಾಗೇ ಅಸ್ತಿತ್ವದಲ್ಲಿರುತ್ತವೆ ಮತ್ತು ಅವುಗಳ ಹಿಂತೆಗೆತಕ್ಕೆ ವಿರೋಧಿಸುವ ವ್ಯವಧಾನ ಸಂಬಂಧಪಟ್ಟ ಕನ್ನಡದ ಹಿತಚಿಂತಕರಿಗೆ ಇರಲಿಲ್ಲ! ಇದು ಇಂಥವರ ಪ್ರಾಮಾಣಿಕತೆಯ ಪ್ರಶ್ನೆಯೆಂಬುದನ್ನು ಕನ್ನಡಿಗರು ಮರೆಯಬಾರದು. ಈ ಮೂಲಕ ನಾನು ಎಲ್ಲ ಆರು ಆದೇಶಗಳನ್ನೂ ಹಿಂತೆಗೆದುಕೊಳ್ಳುವುದು ನ್ಯಾಯವೆಂದು ವಾದಿಸುತ್ತಿಲ್ಲ. ಅದರ ಬದಲು – ಈ ಆದೇಶಗಳಿಂದ ಕನ್ನಡಕ್ಕೆ ವಿಶೇಷ ಹಾನಿಯಾಗುತ್ತಿಲ್ಲವೆಂದು ಅಂಕಿಸಂಖ್ಯೆ ಹಾಗೂ ದಾಖಲೆಗಳ ಆಧಾರದಿಂದ ಪ್ರತಿಪಾದಿಸಬಯಸುತ್ತೇನೆ.

ಅಲ್ಪಸಂಖ್ಯಾತರ ಭಾಷೆಗಳಲ್ಲಿ ಮುಖ್ಯ ಆದೇಶ ಗಳನ್ನು ಪ್ರಕಟಿಸಬೇಕೆಂಬ ಸರ್ಕಾರಿ ಆದೇಶದ ಫಲವಾಗಿ –

> ಭಾಷಿಕ ಮೂಲಭೂತವಾದಕ್ಕೆ ಪರ್ಯಾಯವಾಗಿ ಕನ್ನಡದ ಆದ್ಯತೆಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಬೇಕು. ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ/ಮಾತೃಭಾಷಾ ಮಾಧ್ಯಮದ ಅನುಷ್ಠಾನಕ್ಕೆ ಇರುವ ಅಡ್ಡಿಗಳನ್ನು ನಿವಾರಿಸುವುದು; ಎಲ್ಲ ಅಲ್ಪಸಂಖ್ಯಾತರು ಕನ್ನಡವನ್ನು ಒಂದು ಭಾಷೆಯಾಗಿ ಕಲಿಯುವುದನ್ನು ಕಡ್ಡಾಯಗೊಳಿಸುವುದು; ಈಗ ತಾಂತ್ರಿಕ ಪದವಿಯಲ್ಲಿ ಒಂದು ವರ್ಷದ ಅವಧಿಗೆ ಕನ್ನಡದ ಕಲಿಕೆ ಕಡ್ಡಾಯವಾಗಿದ್ದು ಅದನ್ನು ಪರೀಕ್ಷೆಗೆ ಕಡ್ಡಾಯಗೊಳಿಸುವುದು; ವೈದ್ಯಕೀಯ ಪದವಿಯ ಮೊದಲ ಒಂದು ವರ್ಷ ಕನ್ನಡ ಬೋಧನೆಗೆ ತೀರ್ಮಾನವಾಗಿದ್ದು ಅದನ್ನು ಅನುಷ್ಠಾನಗೊಳಿಸುವುದು. –ಕೇಂದ್ರೀಯ ಶಾಲೆಗಳಲ್ಲಿ ಕನ್ನಡ ಕಲಿ – ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ಕನ್ನಡದ ಕೆಲಸಗಳನ್ನು ಪಟ್ಟಿ ಮಾಡಬಹುದು.

೧೯೯೯ರಲ್ಲಿ ೨೮, ೨೦೦೦ದಲ್ಲಿ ೧೧, ೩೦೦೧ರಲ್ಲಿ ೧೦, ೨೦೦೨ರಲ್ಲಿ ೨ ಮತ್ತು ೨೦೦೩ರಲ್ಲಿ ೩ ಆದೇಶಗಳು ಉರ್ದು ಭಾಷೆಯಲ್ಲಿ ಪ್ರಕಟಗೊಂಡಿವೆ. ೧೯೯೯ರಲ್ಲಿ ೨೮, ೨೦೦೦ದಲ್ಲಿ ೧೧, ೨೦೦೧ರಲ್ಲಿ ೧೦, ಆದೇಶಗಳು ಮರಾಠಿಯಲ್ಲಿ ಪ್ರಕಟಗೊಂಡಿವೆ. ೨೦೦೨ ಮತ್ತು ೨೦೦೩ರಲ್ಲಿ ಯಾವುದೇ ಆದೇಶವು ಮರಾಠಿಯಲ್ಲಿ ಪ್ರಕಟವಾಗಿಲ್ಲ. ಅಂದರೆ ಇತ್ತೀಚಿನ ಐದು ವರ್ಷಗಳ ಅವಧಿಯಲ್ಲಿ ೫೪ ಉರ್ದು ಮತ್ತು ೪೯ ಮರಾಠಿ ಭಾಷೆಯ ಆದೇಶಗಳು ಕರ್ನಾಟಕ ಸರ್ಕಾರದಿಂದ ಪ್ರಕಟವಾಗಿವೆ. ೩೦-೩-೨೦೦೪ರಂದು ಹೊರಡಿಸಿದ ಆದೇಶದಿಂದ ಆಗುತ್ತಿದ್ದ ಪರಿಣಾಮವೂ ಇದೇ ರೀತಿಯಲ್ಲಿ ಇರುತ್ತಿತ್ತು. ಆದರೆ ಕನ್ನಡ ಕೊನೆಯುಸಿರು ಎಳೆಯುತ್ತದೆಯೆಂಬಂತೆ ಗದ್ದಲ ಮಾಡಲಾಯಿತು.

ಮಾಹಿತಿಗಾಗಿ ಮಹಾರಾಷ್ಟ್ರ ಸರ್ಕಾರದ ದಾಖಲೆಗಳನ್ನು ಗಮನಿಸಿದರೆ, ೧-೭-೨೦೦೦ದಿಂದ ಈಚೆಗಿನ ಮೂರು ವರ್ಷಗಳಲ್ಲಿ ಒಟ್ಟು ೧೭೭೯ ಅಧಿನಿಯಮಗಳು ಮತ್ತು ೬೭೯ ಆದೇಶ/ಸುತ್ತೋಲೆಗಳು ಕನ್ನಡದಲ್ಲಿ ಪ್ರಕಟವಾಗಿವೆ. ಇದೇ ರೀತಿ ಹಿಂದಿಯಲ್ಲಿ ೧೧೬೫ ಅಧಿನಿಯಮ ಮತ್ತು ೧೪೦೦ ಸುತ್ತೋಲೆಗಳನ್ನು ಪ್ರಕಟಿಸಲಾಗಿದೆ. ಉರ್ದುವಿನಲ್ಲಿ ಯಾವ ಅಧಿನಿಯಮವನ್ನೂ ಭಾಷಾಂತರಿಸಿಲ್ಲವಾದರೂ ಒಟ್ಟು ೨೬೫೦ ಸುತ್ತೋಲೆ/ಆದೇಶ/ಪ್ರಮಾಣ ಪತ್ರಗಳು ಉರ್ದುವಿನಲ್ಲಿ ಬಂದಿವೆ. ಇಷ್ಟೆಲ್ಲ ಪ್ರಕಟಣೆಗಳನ್ನು ಅಲ್ಪಸಂಖ್ಯಾತರ ಭಾಷೆಗಳಲ್ಲಿ ತಂದ ಮಹಾರಾಷ್ಟ್ರದಲ್ಲಿ ಆಡಳಿತ ಭಾಷೆಯಾಗಿ ಮರಾಠಿಯನ್ನು ತುಂಬಾ ಸೊಗಸಾಗಿ ಅನುಷ್ಠಾನಗೊಳಿಸಲಾಗಿದೆಯೆಂಬ ಪ್ರಶಂಸೆಯನ್ನು ಕನ್ನಡದ ಹಿತಚಿಂತಕರೇ ಮಾಡುತ್ತಾರೆ. ಪಶ್ಚಿಮ ಬಂಗಾಳ, ತಮಿಳುನಾಡು, ಕೇರಳಗಳ ಬಗ್ಗೆಯೂ ಇಂತಹ ಪ್ರಶಂಸೆಯಿದೆ. ಈ ರಾಜ್ಯಗಳೂ ಅಲ್ಪಸಂಖ್ಯಾತರ ಭಾಷೆಗಳನ್ನು ನಿರ್ಲಕ್ಷಿಸಿಲ್ಲವೆಂಬುದನ್ನು ಗಮನಿಸಬೇಕು. ಭಾಷಾ ಪ್ರೇಮಕ್ಕೆ ಹೆಸರಾದ ಪಶ್ಚಿಮ ಬಂಗಾಳದ ಕಾಲಿಂಪೊಂಗ್, ಕುರ್ಸಿಯೋಂಗ್, ಮತ್ತು ಡಾರ್ಜಿಲಿಂಗ್ ಜಿಲ್ಲೆಗಳಲ್ಲಿ ನೇಪಾಳಿಯು ಎರಡನೇ ಅಧಿಕೃತ ಆಡಳಿತ ಭಾಷೆ. ಜೊತೆಗೆ ಪಶ್ಚಿಮ ಬಂಗಾಳ ಸರ್ಕಾರವು ನೇಪಾಳಿ ಮತ್ತು ಉರ್ದುಭಾಷೆಯ ಸೆಲ್‌ಗಳನ್ನು ಸ್ಥಾಪಿಸಿದೆ. ಒಂದು ವಿಶೇಷವೆಂದರೆ ತಮಿಳುನಾಡು ಸರ್ಕಾರವು ಇಂಗ್ಲಿಷನ್ನು ಅಧಿಕೃತವಾಗಿ ಎರಡನೇ ಆಡಳಿತ ಭಾಷೆಯೆಂದು ಒಪ್ಪಿಕೊಂಡಿತ್ತು. ಇದರ ಫಲವಾಗಿ ೧೯೮೯ರಲ್ಲಿ ತಮಿಳುನಾಡಿನ ಸಚಿವಾಲಯದ ಆಡಳಿತದಲ್ಲಿ ಶೇ. ೭೦ರಷ್ಟು ಇಂಗ್ಲಿಷಿನ ಬಳಕೆಯಿತ್ತು. (ಈ ಮಾಹಿತಿಗೆ ಶ್ರೀ ಪಾಟೀಲ ಪುಟ್ಟಪ್ಪನವರು ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿದ್ದಾಗ ಬರೆದ ಬರಹವು ಆಧಾರ.) ಈಗ ಇದೇ ಸಚಿವಾಲಯದಲ್ಲಿ ಶೇ. ೪೦ರಷ್ಟು ಇಂಗ್ಲಿಷ್ ಇದೆಯೆಂದು ಹೇಳಲಾಗುತ್ತಿದೆ. ತಮಿಳಿನ ಉನ್ನತಿಗಾಗಿ 'ತಮಿಳು ಅಭಿವೃದ್ಧಿ ವಿಭಾಗ'ವನ್ನು ಪ್ರಾರಂಭಿಸಲಾಗಿದೆ. ಹಿಂದಿ ವಿರೋಧಿ ಮತ್ತು ದ್ರಾವಿಡಪರ ಚಳವಳಿಗಳ ಕಾರಣದಿಂದ ಸಾಮಾನ್ಯ ತಮಿಳಿಗರಲ್ಲಿ ಉಗ್ರ ಭಾಷಾಭಿಮಾನವಿದ್ದರೂ ಸಚಿವಾಲಯದ ಸ್ಥಿತಿ ಬೇರೆಯೇ ಆಗಿದೆ. ಅಲ್ಲದೆ ಅಲ್ಪಸಂಖ್ಯಾತರ ಸಂವಿಧಾನಾತ್ಮಕ ಅಗತ್ಯಗಳನ್ನು ತಮಿಳುನಾಡು ಸಹ ನಿರ್ಲಕ್ಷಿಸಿಲ್ಲ. ಹದಿನೈದಕ್ಕಿಂತ ಹೆಚ್ಚು ಕನ್ನಡ ವಿದ್ಯಾರ್ಥಿಗಳಿದ್ದರೆ ಕನ್ನಡ ಮಾಧ್ಯಮ ತರಗತಿ ತೆರೆಯಲು ಅವಕಾಶವಿದೆ. ಮದ್ರಾಸ್ ಮತ್ತು ಮಧುರೆಯಲ್ಲಿ ಕನ್ನಡ ಸ್ನಾತಕೋತ್ತರ ವಿಭಾಗಗಳಿವೆ. (ಕರ್ನಾಟಕದಲ್ಲಿ ತಮಿಳು ಸ್ನಾತಕೋತ್ತರ ವಿಭಾಗ ಇಲ್ಲ). ಧರ್ಮಪುರಿ ಜಿಲ್ಲೆಯಲ್ಲಿ ಅಲ್ಪಸಂಖ್ಯಾತ ಭಾಷೆಯಾದ ಕನ್ನಡದಲ್ಲಿ ಆದೇಶಗಳನ್ನು ಪ್ರಕಟಿಸಲು ಅಧಿಕೃತ ಅವಕಾಶವನ್ನು ಕಲ್ಪಿಸಲಾಗಿದೆ. ಇನ್ನು ಕೇರಳಕ್ಕೆ ಬಂದರೆ, ಕಾಸರಗೋಡನ್ನು ಕನ್ನಡಭಾಷಿಕ ಅಲ್ಪಸಂಖ್ಯಾತರ ಪ್ರದೇಶವೆಂದು ಅಧಿಕೃತವಾಗಿ ಘೋಷಿಸಲಾಗಿದೆ. ಕನ್ನಡಿಗರು ಹೆಚ್ಚಾಗಿ ಇರುವ ಪ್ರದೇಶಗಳಿಗೆ ಕನ್ನಡ ಬಲ್ಲ ಅಧಿಕಾರಿಗಳನ್ನು ಹಾಕಬೇಕೆಂದು ೧೯೫೮ರಲ್ಲೇ ತೀರ್ಮಾನಿಸಿ, ಆದೇಶಿಸಿ, ಅನುಷ್ಠಾನಗೊಳಿಸಲಾಗಿದೆ. ಕನ್ನಡ ಬಲ್ಲ ಕೆಳನೌಕರರಿಗೆ ಪದೋನ್ನತಿ ಕೊಟ್ಟಾದರೂ ಈ ಅಗತ್ಯವನ್ನು ಪೂರೈಸಬೇಕೆಂದು ಆದೇಶಿಸಲಾಗಿದೆ. (ಆದೇಶ ಸಂಖ್ಯೆ-ಎಂ.ಎಸ್.೫೭೨, ಜೂನ್ ೧೯೫೮). ಕಾಸರಗೋಡು ಜಿಲ್ಲೆಯಲ್ಲಿ ಅಸಂಖ್ಯಾತ ಕನ್ನಡ ಆದೇಶಗಳು ಪ್ರಕಟಗೊಂಡಿವೆ. ಕೇರಳದಲ್ಲಿ ಸುಮಾರು ೧೬೪೩ ಕನ್ನಡ ಪ್ರಾಥಮಿಕ ಶಿಕ್ಷಕರಿದ್ದಾರೆ. ಕಾಸರಗೋಡಿನಲ್ಲಿ ಕನ್ನಡ ಸ್ನಾತಕೋತ್ತರ ವಿಭಾಗವಿದೆ. ಇತರ ಕೆಲವು ರಾಜ್ಯಗಳಂತೆ ಕೇರಳದಲ್ಲೂ ಇಂಗ್ಲಿಷನ್ನು ಎರಡನೇ ಆಡಳಿತ ಭಾಷೆಯೆಂದು ಒಪ್ಪಲಾಗಿತ್ತು.

ಆಂಧ್ರ ಪ್ರದೇಶದಲ್ಲಿ ತೆಲುಗಿನ ಜೊತೆಗೆ ಉರ್ದುವನ್ನು ಅಧಿಕೃತವಾಗಿ ಎರಡನೇ ಆಡಳಿತ ಭಾಷೆಯೆಂದು ಹದಿಮೂರು ಜಿಲ್ಲೆಗಳಲ್ಲಿ ಜಾರಿಮಾಡಲಾಗಿದೆ. ಉಸ್ಮಾನಿಯ ಮತ್ತು ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಸ್ನಾತಕೋತ್ತರ ವಿಭಾಗಗಳನ್ನು ಸ್ಥಾಪಿಸಲಾಗಿದ್ದು ಕನ್ನಡಿಗರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಅಲ್ಪಸಂಖ್ಯಾತರ ಭಾಷೆ ಎಂದು ಪರಿಗಣಿಸಿ ಆದೇಶಗಳನ್ನು ಕನ್ನಡದಲ್ಲಿ ನೀಡಲು ಅವಕಾಶವಿದೆ. ಮಧ್ಯಪ್ರದೇಶ ಸರ್ಕಾರವು ಪ್ರೌಢಶಾಲಾ ಪಠ್ಯದಲ್ಲಿ ಕನ್ನಡವನ್ನು ಮೂರನೇ ಭಾಷೆಯೆಂದು ಪರಿಗಣಿಸಿದೆ. (ಓದುವ ವಿದ್ಯಾರ್ಥಿಗಳಿದ್ದರೆ ಈ ಅವಕಾಶ.) ಬಿಹಾರದಲ್ಲಿ ಬಿಹಾರಿ ಭಾಷೆಯನ್ನು ಹಿಂದಕ್ಕೆ ತಳ್ಳಿ ಹಿಂದಿ ಆಡಳಿತ ಭಾಷೆಯಾಗಿದೆ. ಉರ್ದು ಎರಡನೇ ಆಡಳಿತ ಭಾಷೆಯಾಗಿದೆ. ಉತ್ತರ ಪ್ರದೇಶದಲ್ಲೂ ಅಷ್ಟೆ. ಹಿಂದಿ ಅಧಿಕೃತ ಆಡಳಿತ ಭಾಷೆ; ಉರ್ದು ಎರಡನೇ ಆಡಳಿತ ಭಾಷೆ. ಜೊತೆಗೆ ಸಿಂಧಿ, ಪಂಜಾಬಿ, ಉರ್ದು ಅಕಾಡೆಮಿಗಳಿವೆ. ನಮ್ಮಲ್ಲಿ ಉರ್ದು ಅಕಾಡೆಮಿಯ ಬಗ್ಗೆ ಅಸಹನೆಯನ್ನು ಬೆಳೆಸಲಾಗಿದೆ. ಉರ್ದು ಅಕಾಡೆಮಿಯ ಕಾರ್ಯ ವಿಧಾನದಲ್ಲಿ ಬದಲಾವಣೆಗಳ ಅಗತ್ಯ ಇರುವುದನ್ನು ನಾನು ಒಪ್ಪುತ್ತೇನೆ. ಆದರೆ ಅದಕ್ಕಾಗಿ ಅಕಾಡೆಮಿಯ ಅಸ್ತಿತ್ವವನ್ನೇ ಪ್ರಶ್ನಿಸಿ ಅಸಹನೆಯನ್ನು ಬಿತ್ತಬೇಕಾಗಿಲ್ಲ. ಉರ್ದುವಷ್ಟೇ ಅಲ್ಲ, ತುಳು, ಕೊಡವ, ಕೊಂಕಣಿ ಅಕಾಡೆಮಿಗಳನ್ನು ಸಹಿಸಿಕೊಳ್ಳಲು ಕೆಲವು ಚಿಂತಕರು ಸಿದ್ಧರಿಲ್ಲ. ಇವುಗಳಿಂದ ಕನ್ನಡಕ್ಕೆ ಧಕ್ಕೆಯೆಂದೂ ಕರ್ನಾಟಕದಲ್ಲಿ ಇವುಗಳಿಗೆ ಸ್ಥಾನವಿರಬಾರದೆಂದೂ ವಾದಿಸುವವರು ಇಲ್ಲಿವರೆಗೆ ನಾನು ಕೊಟ್ಟ ಅನ್ಯ ರಾಜ್ಯಗಳ ಮಾಹಿತಿಯನ್ನು ನೋಡಬೇಕು. ಅಲ್ಪಸಂಖ್ಯಾತ ಭಾಷೆಗಳಿಗೆ ಅಗತ್ಯಕ್ಕೆ ತಕ್ಕಷ್ಟು ಸ್ಥಾನವನ್ನು ನೀಡಿಯೂ ರಾಜ್ಯ ಭಾಷೆಯನ್ನು ಉಳಿಸಿ ಬೆಳೆಸಬಹುದೆಂಬ ಸತ್ಯವನ್ನು ಯಾರಾದರೂ ಮನಗಾಣಬಹುದು.

ಅಂದರೆ ಸಮಸ್ಯೆ ಇರುವುದು ಎಲ್ಲಿ? ಕನ್ನಡದ ಹಿತಚಿಂತಕರೆನ್ನಿಸಿಕೊಂಡ ಕೆಲವರು ಅನಗತ್ಯ ಅಂಶಗಳಿಗೆ ಆದ್ಯತೆ ನೀಡಿ ಹಾದಿ ತಪ್ಪಿಸುತ್ತಿದ್ದಾರೆಂದು ನೋವಿನಿಂದ ಹೇಳಬೇಕಾಗಿದೆ. ಸಣ್ಣಪುಟ್ಟ ವಿಷಯಗಳನ್ನು ಬೃಹದಾಕಾರದಲ್ಲಿ ಬಿಂಬಿಸಿ, ನಿಜಕ್ಕೂ ಆಗಬೇಕಾದ ಕನ್ನಡದ ಕೆಲಸಗಳಿಗೆ ಧಕ್ಕೆಯುಂಟುಮಾಡುತ್ತಿರುವ ಸನ್ನಿವೇಶವನ್ನು ಕಾಣಬಹುದಾಗಿದೆ. ಯಾವುದೇ ಮೂಲಭೂತವಾದವು ಆದ್ಯತೆಗಳನ್ನು ಪಲ್ಲಟಗೊಳಿಸುತ್ತದೆ. ಧಾರ್ಮಿಕ ಮೂಲಭೂತವಾದವು ಜನ ಸಮುದಾಯವನ್ನು ಭಾವೋದ್ರೇಕಗೊಳಿಸಿ ಅವರ ಬದುಕಿನ ಆದ್ಯತೆಗಳಿಗೆ ಹಿನ್ನಡೆಯುಂಟುಮಾಡುವಂತೆ ಭಾಷಿಕ ಮೂಲಭೂತವಾದವು ನಮ್ಮ ಭಾಷೆ ಮತ್ತು ಭಾಷೆಯನ್ನಾಡುವ ಜನರ ಉಳಿವಿನ ಆದ್ಯತೆಗಳನ್ನು ಹಿಂದಕ್ಕೆ ಸರಿಸಿ ಅನ್ಯದ್ವೇಷದ ಭಾವೋದ್ರೇಕವನ್ನು ಮುಂಚೂಣಿಗೆ ತರುತ್ತದೆ. ನಮ್ಮಲ್ಲಿಯೂ ಇಂತಹ ಪ್ರವೃತ್ತಿ ಬೆಳೆಯುತ್ತ ಬಂದಿದೆ. ಧಾರ್ಮಿಕ ಮೂಲಭೂತವಾದ ಮತ್ತು ಭಾಷಿಕ ಮೂಲಭೂತವಾದಗಳು ಒಂದಾಗುತ್ತಿರುವ ಅಪಾಯಕಾರಿ ಲಕ್ಷಣ ನಿಚ್ಚಳವಾಗತೊಡಗಿದೆ.

ಭಾಷಿಕ ಮೂಲಭೂತವಾದಕ್ಕೆ ಪರ್ಯಾಯವಾಗಿ ಕನ್ನಡದ ಆದ್ಯತೆಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಬೇಕು.




ನವೆಂಬರ್ ಒಂದರಂದು ಕನ್ನಡ ರಾಜ್ಯೋತ್ಸವವನ್ನು 'ಅನನ್ಯ' ಸಂಸ್ಥೆ ಡಾ|| ವಸುಂಧರಾ ಭೂಪತಿಯವರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ಆಚರಿಸಿತು. ವೇದಿಕೆಯ ಮೇಲೆ 'ಅನನ್ಯ' ಸಂಚಾಲಕ ನಾಗರಾಜ್, ಡಾ|| ವಸುಂಧರಾ ಭೂಪತಿ, ಪ್ರೊ|| ಚಿ. ಶ್ರೀನಿವಾಸರಾಜು, ಆರ್. ಎಸ್. ರಾಜಾರಾಮ್ ಇದ್ದಾರೆ, ಇದೇ ಸಂದರ್ಭದಲ್ಲಿ 'ಹೊಸತು' ಸಹಸಂಪಾದಕ ಪ್ರೊ|| ಚಿ. ಶ್ರೀನಿವಾಸರಾಜು ಅವರನ್ನು 'ಅನನ್ಯ'ದ ಶ್ರೀ ಗುಂಡುರಾವ್ ಸನ್ಮಾನಿಸಿದರು.

ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ/ಮಾತೃಭಾಷಾ ಮಾಧ್ಯಮದ ಅನುಷ್ಠಾನಕ್ಕೆ ಇರುವ ಅಡ್ಡಿಗಳನ್ನು ನಿವಾರಿಸುವುದು; ಎಲ್ಲ ಅಲ್ಪಸಂಖ್ಯಾತರು ಕನ್ನಡವನ್ನು ಒಂದು ಭಾಷೆಯಾಗಿ ಕಲಿಯುವುದನ್ನು ಕಡ್ಡಾಯಗೊಳಿಸುವುದು; ಈಗ ತಾಂತ್ರಿಕ ಪದವಿಯಲ್ಲಿ ಒಂದು ವರ್ಷದ ಅವಧಿಗೆ ಕನ್ನಡದ ಕಲಿಕೆ ಕಡ್ಡಾಯವಾಗಿದ್ದು ಅದನ್ನು ಪರೀಕ್ಷೆಗೆ ಕಡ್ಡಾಯಗೊಳಿಸುವುದು; ವೈದ್ಯಕೀಯ ಪದವಿಯ ಮೊದಲ ಒಂದು ವರ್ಷ ಕನ್ನಡ ಬೋಧನೆಗೆ ತೀರ್ಮಾನವಾಗಿದ್ದು ಅದನ್ನು ಅನುಷ್ಠಾನಗೊಳಿಸುವುದು, – ಕೇಂದ್ರೀಯ ಶಾಲೆಗಳಲ್ಲಿ ಕನ್ನಡ ಕಲಿ – ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ಕನ್ನಡದ ಕೆಲಸಗಳನ್ನು ಪಟ್ಟಿ ಮಾಡಬಹುದು. ಶಿಕ್ಷಣದಲ್ಲಿ ಕನ್ನಡ ಕಡ್ಡಾಯವಾಗದಿದ್ದರೆ ಮುಂದಿನ ಪೀಳಿಗೆಯಲ್ಲಿ ಕನ್ನಡ ಕಳೆದುಹೋಗುವ ಅಪಾಯವಿದೆ. ಬಹುಮುಖ್ಯವಾಗಿ ಉದ್ಯೋಗದಲ್ಲಿ ಕನ್ನಡಿಗರಿಗೆ ಆದ್ಯತೆಯಿರುವ ನೀತಿಗಾಗಿ ಹೋರಾಡಬೇಕಾಗಿದೆ. ಬಹುರಾಷ್ಟ್ರೀಯ ಕಂಪನಿಗಳನ್ನು ಒಳಗೊಂಡಂತೆ ಎಲ್ಲ ಖಾಸಗಿ ಉದ್ಯಮಗಳು ಮತ್ತು ಕೇಂದ್ರ ಸರ್ಕಾರದ ಉದ್ಯಮ ಹಾಗೂ ಸ್ಥಳೀಯ ಕಚೇರಿಗಳಲ್ಲಿ ಕನ್ನಡಿಗರಿಗೆ ಕಡ್ಡಾಯವಾಗಿ ಆದ್ಯತೆ ಕೊಡುವ ನೀತಿ ನಿರೂಪಣೆಗಾಗಿ ಒತ್ತಾಯಿಸಿ ಹೋರಾಟ ಕಟ್ಟುವುದು ನಮ್ಮ ಆದ್ಯತೆಯಾಗಬೇಕಾಗಿದೆ. ರಾಜ್ಯ ಸರ್ಕಾರ ಮತ್ತು ರಾಜ್ಯ ಖಾಸಗಿ ಉದ್ಯಮಗಳಿಗೂ ಇದು ಅನ್ವಯಿಸುತ್ತದೆ. ಒಟ್ಟಿನಲ್ಲಿ ಶಿಕ್ಷಣ, ಉದ್ಯೋಗ ಮತ್ತು ಆಡಳಿತ ಕ್ಷೇತ್ರಗಳು ಕನ್ನಡ ಕೇಂದ್ರಿತವಾಗಬೇಕು; ಕನ್ನಡೀಕರಣಗೊಳ್ಳಬೇಕು. ಹೀಗೆ ಆಗಬೇಕಾದರೆ, ಕನ್ನಡ ಪ್ರೀತಿಯ ಪರಿಕಲ್ಪನೆಗೆ ಹೊಸ ಆಯಾಮ ಲಭ್ಯವಾಗಬೇಕು.

ನನ್ನ ದೃಷ್ಟಿಯಲ್ಲಿ ಕನ್ನಡವನ್ನು ಕೇವಲ ಅಭಿಮಾನದ ಪ್ರಶ್ನೆಯನ್ನಾಗಿ ನೋಡಬಾರದು, ಅನ್ನದ ಪ್ರಶ್ನೆಯನ್ನಾಗಿ ಪರಿಭಾವಿಸಬೇಕು. ಕನ್ನಡದ ಮೂಲಕ 'ಅನ್ನ' ಸಿಗುತ್ತದೆ ಎಂದಾದರೆ ಅಭಿಮಾನ ತಾನಾಗಿಯೇ ಬೆಳೆಯುತ್ತದೆ. ಆದ್ದರಿಂದ ಅನ್ನದ ಅನಿವಾರ್ಯತೆಯಲ್ಲಿ ಕನ್ನಡ ಪರ ಪರಿಕಲ್ಪನೆಯನ್ನು ಬೆಳೆಸುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ಯಾಕೆಂದರೆ ಇದು ಮೂಲಭೂತವಾದಿಗಳ ಕಾಲ. ಕೇಂದ್ರ ಮತ್ತು ರಾಜ್ಯದ ಪರಿಸರದಲ್ಲಿ ಪ್ರಬಲವಾಗುತ್ತಿರುವ ಭಾಷಿಕ ಮೂಲಭೂತವಾದದ ಬೋನಿನಲ್ಲಿ ಕನ್ನಡವನ್ನು ಕೂಡಿ ಹಾಕಲಾಗಿದೆ. ಭಾಷಿಕ ಮೂಲಭೂತವಾದದ ಬೋನಿನಿಂದ ಕನ್ನಡವನ್ನು ಬಿಡುಗಡೆ ಗೊಳಿಸಿದರೆ ಭಾಷಾ ಹೋರಾಟಕ್ಕೆ ಆದ್ಯತೆಗಳ ಹೊಸ ಆಯಾಮ ಲಭ್ಯವಾಗಲಿದೆ.

**ಪ್ರೊ. ಬರಗೂರು ರಾಮಚಂದ್ರಪ್ಪ**
'ಸಂವೇದನೆ', ೨೭೫, ೧೧ನೇ 'ಬಿ' ಅಡ್ಡರಸ್ತೆ, ಜೆ. ಪಿ. ನಗರ ೨ನೇ ಹಂತ, ಬೆಂಗಳೂರು-೫೬೦೦೭೮

# ಯಾಕೆ ವಿಚಲಿತರಾಗುತ್ತೀರಿ



ಹೊಸದಲ್ಲ ಬಿಡಿ ನಮಗಿದು
ಯಾಕೆ ವಿಚಲಿತರಾಗುತ್ತೀರಿ
ಗುಡಿಸಲಲ್ಲಿ ಮಲಗಿದ ದಲಿತರನ್ನು
ಕಂಬಾಲಪಲ್ಲಿಯಲ್ಲಿ ಸುಟ್ಟಿದ್ದಕ್ಕೆ
ಅಂದು ಅರಗಿನ ಅರಮನೆಯಲ್ಲಿ
ಮಲಗಿದ್ದ ಬೇಡತಿಯ ಮಕ್ಕಳ
ಸುಟ್ಟ ದುರ್ಯೋಧನನ ಸಂತತಿ
ಇಂದಿಗೂ ಪುಣ್ಯ ಭೂಮಿ ಭಾರತದಲ್ಲಿ ಉಳಿದಿದ್ದಕ್ಕೆ!

ಹೊಸದಲ್ಲ ಬಿಡಿ ನಮಗಿದು
ಯಾಕೆ ವಿಚಲಿತರಾಗುತ್ತೀರಿ
ಕುದುರೆಮೋತಿ ವಣೇನೂರು
ನೆನಪಿಸಿಕೊಂಡು.
ಗಂಡರೈವರ ಎದುರಿನಲ್ಲಿಯೇ
ದ್ರೌಪದಿಯ ಸೀರೆ ಸೆಳೆದ
ಧೃತರಾಷ್ಟ್ರನ ಸಂತತಿ
ಕರುನಾಡ ನೆಲದಲ್ಲಿ
ಮತ್ತೆ ಮತ್ತೆ ಹುಟ್ಟುತ್ತಿರುವುದಕ್ಕೆ!

ಹೊಸದಲ್ಲ ಬಿಡಿ ನಮಗಿದು
ಯಾಕೆ ವಿಚಲಿತರಾಗುತ್ತೀರಿ
ಚಿಂಚೋಳಿಯ ತಾಂಡದಲ್ಲಿ
ಮಕ್ಕಳ ಮಾರಿಕೊಂಡಿದ್ದಕ್ಕೆ
ರಾಮಾಯಣ ಮಹಾಭಾರತಗಳಲ್ಲಿ
ಚಿನ್ನದ ಪೆಟ್ಟಿಗೆಯಲ್ಲಿ ರನ್ನದಂಥ ಮಕ್ಕಳನಿಟ್ಟು
ಹೂತಿಟ್ಟ ಸೀತೆ ಶಕುಂತಲೆಯರ ಕಥೆಯ
ಕೇಳಲು ಕಿವಿ ನಿಮಿರಿ ನಿಂತಿರುವುದಕ್ಕೆ!

ಹೊಸದಲ್ಲ ಬಿಡಿ ನಮಗಿದು
ಯಾಕೆ ವಿಚಲಿತರಾಗುತ್ತೀರಿ
ಕೈಕಾಲಿಗೆ ಬೇಡಿ ಹಾಕಿಸಿಕೊಂಡು
ಹಂಗರ ಹಳ್ಳಿಯಲ್ಲಿ ಜೀತ ಮಾಡಿದ್ದಕ್ಕೆ
ರಾಜ ಮಹಾರಾಜರು ಸೆರೆಹಿಡಿದು
ತಂದ ಆಳುಗಳು ಓಡಿ ಹೋಗದಂತೆ
ಕೊರಳಲ್ಲಿ ಗುದ್ದಿಕಟ್ಟಿ ದುಡಿಸಿಕೊಂಡ
ನೆನಪು ಮರುಕಳಿಸಿದ್ದಕ್ಕೆ!

ವಿಚಲಿತರಾಗಬೇಕಾಗಿದೆ
ಪ್ರಭುತ್ವದಿಂದ
ಪ್ರಜಾಪ್ರಭುತ್ವದವರೆಗೂ
ನಿನ್ನೆ ದಿನ ನನ್ನ ಜನ ಸಾಗರದಂತೆ
ಹರಿದು ಬಂದು ಕುರ್ಚಿಯ ಕೆಳಗೆ
ನಿದ್ದೆ ಹೋಗಿರುವುದಕ್ಕೆ!

ವಿಚಲಿತರಾಗಬೇಕಾಗಿದೆ
ಕಿತ್ತೂರು ಚೆನ್ನಮ್ಮ ಬೆಳವಡಿ ಮಲ್ಲಮ್ಮ
ಮತ್ತೆ ದುರ್ಗದ ಹುಲಿ ಒಬವ್ವಳ ನೆನೆದು
ನನ್ನಂಥವರು ನಿಮ್ಮಂಥವರು
ಮರ್ಯಾದೆಯ ಮುಸುಕಿನಲ್ಲಿ
ಕಣ್ಣೀರಿಡುತ್ತಿರುವುದಕ್ಕೆ!

**ಡಾ|| ಮಲ್ಲಿಕಾ ಘಂಟಿ**, ಮುಖ್ಯಸ್ಥರು, ಕನ್ನಡ ಅಧ್ಯಯನ ಕೇಂದ್ರ, ಪಿ.ಜಿ. ಸೆಂಟರ್, ನಂದಿಹಳ್ಳಿ, ಸಂಡೂರು – ೫೮೩೧೧೯

# ಗೊರೂರರ ಪ್ರಬಂಧಗಳು

ಮಾನ್ಯ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಈಗ್ಗೆ ನೂರು ವರ್ಷಗಳ ಹಿಂದೆ ಜನಿಸಿ ಅಪಾರ ಕೀರ್ತಿ ಗಳಿಸಿದ ಸ್ವಾತಂತ್ರ್ಯ ಹೋರಾಟಗಾರರು, ಸಾಹಿತಿಗಳು, ಸಜ್ಜನರೆಂದು ಖ್ಯಾತಿ ಗಳಿಸಿದ ಅಪೂರ್ವ ವ್ಯಕ್ತಿ.



ಗೊರೂರರು ತಮ್ಮ ಮೊದಲ ಸಂಕಲನಕ್ಕೆ 'ಹಳ್ಳಿಯ ಚಿತ್ರಗಳು' (೧೯೩೦) ಎಂದು ಹೆಸರಿಟ್ಟಿದ್ದಾರೆ. ಹಾಗೆ ನೋಡಿದರೆ ಇವರ ಎಲ್ಲ ಪ್ರಬಂಧಗಳೂ ಹಳ್ಳಿಯ ಚಿತ್ರಗಳೇ. ಇವರ ಪ್ರಬಂಧಗಳು ಗ್ರಾಮೀಣ ಸಂಸ್ಕೃತಿಯ ಸ್ಥಿತ್ಯಂತರ ಬದುಕಿನ ನುಡಿಚಿತ್ರಗಳಾಗಿವೆ. ಭೌತಿಕ- ಆರ್ಥಿಕ ವೃದ್ಧಿಯೆಡೆಗೆ ಮತ್ತು ನೈತಿಕ ಸಾಂಸ್ಕೃತಿಕ ಅವನತಿಯೆಡೆಗೆ ಚಲಿಸುತ್ತಿರುವ ಸಮಾಜವನ್ನು ಕುರಿತ ಗಾಢ ವಿಷಾದ ಇವರ ಪ್ರಬಂಧಗಳಲ್ಲಿ ತುಂಬಿದೆ. ಇವರು ವರ್ಣಿಸುವ ಮಲ್ಲಿಗೆ ಹಳ್ಳಿಯ ಬಯಲಾಟ, ಸಂಕ್ರಾಂತಿ ಹಬ್ಬ, ಕಾಮನ ಹಬ್ಬ, ನರಸಿಂಹಸ್ವಾಮಿಯ ಜಾತ್ರೆ, ಬಿಂದಿಗಮ್ಮನ ಜಾತ್ರೆ, ಸಂಚಾರಿ ಚಲನಚಿತ್ರಗಳು, ಇವರು ಹೇಳುವ ೫೦ ವರ್ಷಗಳ ಹಿಂದಿನ ನಾಟಕಗಳ ಮಾತನ್ನೆಲ್ಲ ನೋಡಿದರೆ ನಾವು ಎಷ್ಟೋ ಸುಮಾರು ಕಳೆದುಕೊಂಡಿದ್ದೇವೆ ಎಂಬ ಅನುಭವವಾಗುತ್ತದೆ. ಇಲ್ಲವಾಗುತ್ತಿರುವ ಇಂಥ ಸಾಂಸ್ಕೃತಿಕ-ನೈತಿಕ ಸಮೃದ್ಧಿಯ ನೆಲೆಗಳನ್ನು ಶೋಧಿಸುವ ಇವರ ನುಡಿಚಿತ್ರಗಳನ್ನು ಓದುವುದೆಂದರೆ ಒಂದು ತೆರನ ವಿಷಾದ ಮತ್ತು ಆನಂದಾನುಭವಗಳೆರಡೂ ಉಂಟಾಗುತ್ತವೆ. ಹೀಗಾಗಿ ಗೊರೂರರ ಪ್ರಬಂಧಗಳ ಸ್ಥಾಯಿ ಬರೀ ಹಾಸ್ಯವಲ್ಲ, ವಿಷಾದ ಕೂಡ.

ಗೊರೂರರ ಪ್ರಬಂಧಗಳು ನಮ್ಮ ಶ್ರೀಮಂತಿಕೆಯ ಮತ್ತು ಅಭಿವೃದ್ಧಿಯ ಪರಿಕಲ್ಪನೆಗಳನ್ನು ಅಣಕಿಸುತ್ತವೆ. ಆರ್ಥಿಕ - ತಾಂತ್ರಿಕ - ಮಟೀರಿಯಲಿಸ್ಟ್ ಶ್ರೀಮಂತಿಕೆ ಮಾತ್ರವೇ ನಿಜವಾದ ಶ್ರೀಮಂತಿಕೆ, ಸಾಂಸ್ಕೃತಿಕ ಶ್ರೀಮಂತಿಕೆಯು ನಗಣ್ಯ ಎಂಬಂತಹ ನಾಗರಿಕ ಪರಿಭಾವನೆಯನ್ನು ಮರುಚಿಂತಿಸುವಂತೆ ಇವರ ಪ್ರಬಂಧಗಳು ಪ್ರಚೋದಿಸುತ್ತವೆ. ಇವರ ಪ್ರಬಂಧಗಳ ಗ್ರಾಮೀಣರು ಆರ್ಥಿಕವಾಗಿ ಬಡವರಿರಬಹುದು ಆದರೆ ಸಾಂಸ್ಕೃತಿಕವಾಗಿ ತುಂಬಾ ಶ್ರೀಮಂತರು. ಇವರ ಸಂತೋಷ ನೆಮ್ಮದಿಗಳು ಐಷಾರಾಮತನದಲ್ಲಿಲ್ಲ, ಕಲಾವಂತಿಕೆಯಲ್ಲಿವೆ. ಧನಿಕತನದ ಕಡೆಗೆ ಇವರು ಆಕರ್ಷಿತರಲ್ಲ, ಜಾತ್ರೆ, ಹಬ್ಬ, ನಾಟಕ, ನಿಸರ್ಗಸಾಹಸ ಇವೆಲ್ಲ ಬೆರೆತ ಬದುಕಿನ ಬೇಸಾಯದ ಕಡೆಗೆ ಇವರು ಆಕರ್ಷಿತರು.

ಇವರ ಪ್ರಬಂಧಗಳ ಜನಸಂಸ್ಕೃತಿಯ ಬಹುಭಾಗ ರೂಪುಗೊಳ್ಳುವುದು ಸಾಂದರ್ಭಿಕ ಅರ್ಥಶಾಸ್ತ್ರದಿಂದ. ಇವರಲ್ಲಿನ ಗತಿಶೀಲತೆಯು ನಿರ್ಧರಿತವಾಗುವುದು ಮತ್ತು ನಿರ್ದೇಶಿತವಾಗುವುದು ಕೂಡ ಸಾಂದರ್ಭಿಕ ಅರ್ಥಶಾಸ್ತ್ರದಿಂದಲೇ ಎಂದು ತೋರುತ್ತದೆ. ಬಹುಶಃ ಯಾವತ್ತೂ ಸಾಂದರ್ಭಿಕ ಅರ್ಥಶಾಸ್ತ್ರವೇ ಸಂಸ್ಕೃತಿ ಸೃಷ್ಟಿ ಮತ್ತು ಪಲ್ಲಟಗಳ ಸಿಂಹಪಾಲನ್ನು ನಿರ್ದೇಶಿಸುತ್ತವೆ ಎನ್ನಿಸುತ್ತದೆ. ಆದಾಗ್ಯೂ ಇದನ್ನು ಮೀರುವ ಹಲ ಹೊರದಾರಿಗಳಾದ ಆಧ್ಯಾತ್ಮಿಕ, ಶ್ರಮಶೀಲ, ಕಲಾಮೂಲ ನೆಲೆಗಳು ಸದಾ ಜೀವನದಲ್ಲಿ ಸಮೃದ್ಧವಾಗಿರುತ್ತವೆ ಎಂಬುದು ಇವರ ಪ್ರಬಂಧಗಳ ಪ್ರತಿಪಾದನೆಯಾಗಿದೆ.

ಆರ್ಥಿಕ ವಿಧಿವಾದ ಇವರ ಗ್ರಾಮೀಣರಲ್ಲಿ ಕೆಲಸ ಮಾಡುವುದು ಅತ್ಯಲ್ಪ. ಆರ್ಥಿಕತೆ ಇವರ ಪ್ರಬಂಧ ಪ್ರಜೆಗಳ ನೈತಿಕತೆಯ ಮೇಲೆ ಬಡಪಟ್ಟಿಗೆ ದಾಳಿಮಾಡಲಾರದು. ಬಿಂದಿಗಮ್ಮನ ಜಾತ್ರೆ, ಬೆಟ್ಟದ ಮನೆಯಲ್ಲಿ, ಮಲ್ಲಿಗೆ ಹಳ್ಳಿಯಲ್ಲಿ ಬಯಲಾಟ, ಅಂತಾರಾಷ್ಟ್ರೀಯ ಮಹಿಳಾವರ್ಷ ಮೊದಲಾದ ಪ್ರಬಂಧಗಳು ಇಂಥ ಸೂಚನೆ ನೀಡುತ್ತವೆ. (ಇದಕ್ಕೆ ಅಪವಾದವೆಂಬಂತಹ ಪ್ರಬಂಧ 'ಅನ್ನದಾನಿ'). ಅಷ್ಟೇ ಅಲ್ಲ, ಸಂಸ್ಕೃತಿ ಎಂಬುದು ಸುಖೀ ಬದುಕಿನ ಅಭಿವ್ಯಕ್ತಿ ಎಂಬ ಕಲ್ಪನೆಯನ್ನೂ ಇವರ ಪ್ರಬಂಧಗಳು ಛಿದ್ರಿಸುತ್ತವೆ. ಬದುಕಿನ ಕಷ್ಟ ಕಾರ್ಪಣ್ಯಗಳಲ್ಲೇ ನಿಸರ್ಗಸಹಜ ಸಂಘರ್ಷ-ಸಹಬಾಳ್ವೆ ಇರುತ್ತದೆ. ಮತ್ತು ಇದರೊಳಗೇ ಸುಖದ ಕ್ಷಣಗಳೂ ಇರುತ್ತವೆ ಎಂಬುದು ಇವರ ಪ್ರಬಂಧಗಳ ತಾತ್ವಿಕತೆಯಾಗಿದೆ.

ಗೊರೂರು ತಮ್ಮ ಲಘು ಬರಹಗಳನ್ನು ಚಿತ್ರಗಳೆಂದೂ, ಪ್ರಬಂಧಗಳೆಂದೂ, ವಿನೋದ ಚಿತ್ರಗಳೆಂದೂ ಕರೆದಿದ್ದಾರೆ. ಇವರ ನಮ್ಮ ಊರಿನ ರಸಿಕರು (೧೯೩೨) ಬೆಸ್ತರ ಕರಿಯ (೧೯೪೬) ಬೈಲಹಳ್ಳಿ ಸರ್ವೆ (೧೯೭೧) ಹಳೆಯ ಪಳೆಯ ಮುಖಗಳು (೧೯೮೧) – ಇವುಗಳನ್ನು ನೋಡಿದರೆ ಇವು ಒಂದೊಂದು ಅಧ್ಯಾಯಗಳಲ್ಲಿ ಪ್ರಬಂಧಗಳಂತೆಯೂ, ಒಟ್ಟಾರೆ ನೋಡಿದರೆ ಕತೆ-ಕಾದಂಬರಿಗಳಂತೆಯೂ ಕಾಣುತ್ತವೆ. ಕತೆ ಕಾದಂಬರಿಗಳ ಸ್ವರೂಪ ಮತ್ತು ಪ್ರಬಂಧ ಮಾದರಿಗಳೆರಡೂ ಬೆರೆತುಕೊಂಡ ಒಂದು ವಿಶಿಷ್ಟ ಅಪ್ರಕಾರ (ಕಥನ) ಇವರ ನುಡಿಚಿತ್ರಗಳಲ್ಲಿ ಆವಿರ್ಭವಿಸಿದೆ. ಪ್ರಬಂಧವೆಂದರೆ ಒಂದು ಅಂದಾಜು ೧೦-೧೫ ಪುಟಗಳ ಒಳಮಿತಿಯಲ್ಲಿ ಇರಬೇಕೆಂಬ ನಮ್ಮ ಸಾಹಿತ್ಯ ಸಂಸ್ಕೃತಿಯ ಅನೌಪಚಾರಿಕ ನಂಬಿಕೆಯನ್ನು ಇವರ ಪ್ರಬಂಧಗಳು ಛಿದ್ರಿಸುತ್ತವೆ. ಪ್ರಬಂಧವೆಂದರೆ ಅದು ಮಿನಿಕತೆಯಷ್ಟು ಚಿಕ್ಕದೂ ಕಾದಂಬರಿಯಷ್ಟು ದೊಡ್ಡದೂ ಆಗಿರಬಹುದು ಎಂದು ಇವರ ಪ್ರಬಂಧಗಳೇ ತಿಳಿಸುತ್ತವೆ. (ಈ ಮಾತುಗಳನ್ನು ಹೇಳುತ್ತಿರುವಾಗ ವಿ.ಸೀ. ಯವರ ಪಂಪಾಯಾತ್ರೆಯೂ ನೆನಪಾಗುತ್ತದೆ).

ಶಿಷ್ಟ ಮತ್ತು ಜನಪದ ಸಾಹಿತ್ಯಗಳನ್ನು ನಾವು ಬೈನರಿ ವೈರುಧ್ಯಗಳೆಂಬಂತೆಯೇ ನೋಡುತ್ತ ಬಂದಿದ್ದೇವೆ. ಜನಪದ ಮತ್ತು ಶಿಷ್ಟಗಳ ಪರಸ್ಪರ ನಿರಂತರ ಸಂಸರ್ಗವನ್ನು ಹೇಳುವ ಆಸ್ಮಾಸಿಸ್ ಥಿಯರಿಯೂ ನಮ್ಮಲ್ಲಿದೆ. ಆದರೆ ಜನಪದವೆಂಬ ಒಂದು ಮಹಾವೃಕ್ಷದ ಕವಲೆಂಬಂತೆ ಶಿಷ್ಟ ಸಾಹಿತ್ಯವನ್ನು ನೋಡಬಾರದೇಕೆ? ಈ ಹಿನ್ನೆಲೆಯಿಂದ ನೋಡಿದರೆ ಗೊರೂರರ ನುಡಿಚಿತ್ರಗಳು ಬಿಡಿ ಬಿಡಿ ಜಾನಪದವೇ ಲಿಪ್ಯಂತರಗೊಂಡಂತೆ ಕಾಣುತ್ತವೆ. ಹೀಗಾಗಿ ಇವರ ಪ್ರಬಂಧಗಳನ್ನು ಜಾನಪದೀಯತೆಯ ಲಿಪೀಕರಣ ಎಂದರೂ ಸಂದೀತು. ಹಾಗೆ ನೋಡಿದರೆ ಎಲ್ಲ ಲಿಖಿತ ಸಾಹಿತ್ಯವನ್ನೂ ಜಾನಪದೀಯತೆಯ ಲಿಪೀಕರಣವೆನ್ನಲು ಅಡ್ಡಿಯಿಲ್ಲ.

ಇವರು ಅನುಭವಗಳನ್ನೇ ಅಕ್ಷರ ಚಿತ್ರಗಳನ್ನಾಗಿ ರೂಪಿಸುತ್ತಾರೆ ಎಂದು ಬಹುವೇಳೆ ಅನ್ನಿಸುತ್ತದೆಯಾದರೂ ಇದು ಹದಿನಾರಾಣೆಯ ಮಾತೇನೂ ಅಲ್ಲ. ಇವರ ಚಿತ್ರಗಳಲ್ಲಿ ಕಲ್ಪನೆ, ಉತ್ಪ್ರೇಕ್ಷೆಗಳೂ ಧಾರಾಳವಾಗಿ ಸೇರಿಕೊಂಡಿರುತ್ತವೆ. ಕೆಲವೊಮ್ಮೆಯಂತೂ ಇವರು ಕಲ್ಪನೆಯನ್ನೇ ನೈಜ ಅನುಭವ ಎಂಬಂತೆಯೂ, ಉತ್ಪ್ರೇಕ್ಷೆಯನ್ನೇ ಸಹಜ ಸ್ವಾಭಾವಿಕ ಎಂಬಂತೆಯೂ ಬರೆಯುತ್ತಾರೆ. ಓದುಗನನ್ನು ಹಿಡಿದು ಅವನ ಮನಗೆಲ್ಲುವ ಕೌಶಲ್ಯವಿದು. ಅಲ್ಲದೆ ಕಥನಶಾಸ್ತ್ರಕ್ಕಿರುವ ಗುಣವೇ ಇದಲ್ಲವೇ. ಈ ಮಾತುಗಳಿಗೆ ಸಮರ್ಥನೆ ಬೇಕೆನಿಸಿದರೆ ಪೆನ್ಶನ್ ದಫ್ತರ ಬಂಧಿಯ ಅನುಭವ ಪ್ರಬಂಧವನ್ನು, ಅದರಲ್ಲೂ 'ಪರಂಗಿ ಸಾಹೇಬ' ಮತ್ತು 'ಕರ್ನಲ್ ಶಾನುಭೋಗರ ಭೇಟಿಯ ಪ್ರಸಂಗ'ಗಳನ್ನು ಓದಿ ನೋಡಿ.

ವಾಸ್ತವ ಮತ್ತು ಉತ್ಪ್ರೇಕ್ಷೆಗಳ ಹದಬೆರಕೆಗೆ ಇವರ 'ಹೇಮಾವತಿಯ ತೀರದಲ್ಲಿ' ಪ್ರಬಂಧದ ೪ನೇ ಭಾಗ ನೋಡಬಹುದು. ಇಲ್ಲಿ ಮೀನು ಹಿಡಿಯುವ ವಿವರ ಬರುತ್ತದೆ. ''ದೊಡ್ಡನ ಕಲ್ಲಿನಲ್ಲಿ ಬೆಸ್ತರು ಮುಳುಗಿ ಬರಿಯ ಕಯ್ಯಲ್ಲಿ ಮೀನುಗಳನ್ನು ಹಿಡಿದು ಮೇಲಕ್ಕೆ ಬರುತ್ತಾರೆ. ನೀರಲ್ಲಿ ಅವರು ಮುಳುಗಿ ಐದುಹತ್ತು ನಿಮಿಷ ಮೀನುಗಳಂತೆ ಚಲಿಸದೆ ಕುಳಿತಿದ್ದು ಇದು ಕಲ್ಲೋ ಮರವೋ ಎಂದು ಮೀನು ತಮ್ಮ ಕಡೆಗೆ ಬಂದಾಗ ಅದನ್ನು ಹಿಡಿದುಕೊಂಡು ಮೇಲಕ್ಕೆ ಬರುತ್ತಾರೆ.'' (ಇದನ್ನು ಯಾರು ನಂಬುತ್ತಾರೆ!) ''ನಮಗೂ ಬೆಸ್ತರಂತೆ ಈಜುಬರುವುದರಿಂದ ನಾವೂ ಮೀನುಗಳನ್ನು ಈ ರೀತಿ ಹಿಡಿಯಬೇಕೆಂದು ನೀರಿನಲ್ಲಿ ಮುಳುಗಿನೋಡಿದ್ದೇವೆ. ಆದರೆ ಮೀನುಗಳು ನಮಗೆ ಸಿಕ್ಕುವುದಿಲ್ಲ'' (ಗರುಡಗಂಬದ ದಾಸಯ್ಯ : ಪುಟ ೧೫೨). ಅಂದರೆ ಈಜು ಬರುವವರೆಲ್ಲ ಮೀನು ಹಿಡಿಯಲು

**ರಾಮಲಿಂಗಪ್ಪ ಟಿ. ಬೇಗೂರು**

ಆಗುವುದಿಲ್ಲ ಎಂಬ ಮಾತು ಮಾತ್ರ ನಿಜ. ಈಜು ಆಡುವುದಕ್ಕೂ ಮೀನು ಹಿಡಿಯುವುದಕ್ಕೂ ವ್ಯತ್ಯಾಸವಿದೆ. ಮುಳುಗಿ ಮೀನು ಹಿಡಿಯುವುದು ಬರೀ ನೋಡಿ ಅನುಕರಿಸಿ ಕಲಿಯಬಹುದಾದ ವಿದ್ಯೆಯಲ್ಲ, ಅದೊಂದು ಪ್ರಾತಿಭ ಕಸುಬುದಾರಿಕೆ. ಹಾಗೇ ಬರವಣಿಗೆ ಕೂಡ.

ಇವರ ಪ್ರಬಂಧಗಳು ಏನೇ ಕಲ್ಪನೆ, ಉತ್ಪ್ರೇಕ್ಷೆ, ಅನುಭವ ವಾಸ್ತವಗಳಿಂದ ಕೂಡಿರಲಿ, ಇವು ತಮ್ಮನ್ನು (೧) ಅನುಭವ ಚಿತ್ರಗಳಂತೆಯೇ ಓದಲು ಪ್ರೇರೇಪಿಸುತ್ತವೆ. ಹಾಗೇ ನಮಗೇನಾದರೂ ನಮ್ಮದೇ ಹಳ್ಳಿಯ ಅನುಭವ ಇದ್ದರೆ (೨) ನಮ್ಮಲ್ಲಿ ಈ ರೀತಿ ಇದೆ; ನಿಮ್ಮಲ್ಲಿ ಯಾವ ರೀತಿ ಇದೆ ಎಂಬಂತೆ ಇವು ಪ್ರಶ್ನೆ ಕೇಳುತ್ತವೆ. ಹಾಗೆಯೇ ಇವು (೩) ತಾವು ರಚಿತವಾದ ಕಾಲಕ್ಕೂ ಮತ್ತು ಓದಿಗೆ ಗುರಿಯಾಗುವ ಕಾಲಕ್ಕೂ ಒಂದು ತುಲನೆಗೆ ತೊಡಗುವಂತೆ ಪ್ರಚೋದಿಸುತ್ತವೆ. ಅಲ್ಲದೆ ಇವು ಸಂಸ್ಕೃತಿ ಚರಿತ್ರೆಯ ದಾಖಲೆಗಳಂತೆ ತಮ್ಮನ್ನು ತಾವು ತೋರ್ಪಡಿಸಿಕೊಳ್ಳುತ್ತ (೪) ಮಾನವಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬಹುದಾದ ಸಾಮಗ್ರಿಗಳಂತೆಯೂ ತೋರ್ಪಡಿಸಿಕೊಳ್ಳುತ್ತವೆ. (ನಿಜಕ್ಕೂ ಇವರ ಪ್ರಬಂಧಗಳಲ್ಲಿನ ಜನನಂಬಿಕೆಗಳನ್ನೇ ಅಧ್ಯಯನ ಮಾಡಿದರೆ ಅದೊಂದು ವಿಶಿಷ್ಟ ಸಾಂಸ್ಕೃತಿಕ ಅಧ್ಯಯನವಾಗಬಲ್ಲುದು.)

ಗಾಂಧೀಜಿಯ ಸಂವೇದನೆ ಮತ್ತು ಮನೋಧರ್ಮಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡ ಮನೋಭಾವ ಗೊರೂರರದ್ದು. ಈ ಸ್ವಭಾವವು ಇವರ ಪ್ರಬಂಧ ರಚನೆಯ ಹಿಂದಿನ ಧೋರಣೆ, ವಸ್ತುಗ್ರಹಿಕೆ, ನಿರೂಪಣೆಗಳನ್ನು ಬಹುವಾಗಿ ಪ್ರಭಾವಿಸಿದೆ. ಜೂಜುಗಾರರಾಗಲೀ ಶಾನುಭೋಗರಾಗಲೀ, ಸಂಪ್ರದಾಯಸ್ಥ ಬ್ರಾಹ್ಮಣರಾಗಲೀ, ಟೂರಿಂಗ್ ಟಾಕೀಸ್ ಮಾಲೀಕರ ಬಗೆಗಾಗಲಿ ಹೀಗೆ ಯಾವುದೇ ವ್ಯಕ್ತಿಯ ವರ್ತನೆಗಳ ಬಗ್ಗೆ ಬರೆಯುವಾಗ ಇವರಲ್ಲಿ ಆಪಾದನಾ ಧಾಟಿ ಇರುವುದಿಲ್ಲ. ಬದಲಾಗಿ ಅದರ ಹಿಂದಿನ ಕಾರಣಗಳನ್ನು ವಿವರಿಸುವ ಧಾಟಿ ಇರುತ್ತದೆ. ವ್ಯಕ್ತಿಗಳ ನ್ಯೂನತೆ-ದುಷ್ಟತೆಗಿಂತ ವ್ಯವಸ್ಥೆಯ ರಚನೆಯ ಕಡೆ ಇವರ ಗಮನ ಹೆಚ್ಚು.

ಮುನ್ನೋಟ ಮೀಮಾಂಸೆಗಿಂತಾ ಇವರ ಬರವಣಿಗೆ ಕಾರಣ ಮೀಮಾಂಸೆಯ ಕಡೆಗೆ ಹೆಚ್ಚು ಗಮನ ನೀಡುತ್ತದೆ. ಅಂದರೆ ಇವರ ಬರವಣಿಗೆ ಜನಸಂಸ್ಕೃತಿ ಹೇಗಿರಬೇಕು ಎಂಬ ಒಂದು ಮುನ್ನೋಟದ ಮಾದರಿಯನ್ನು ನೀಡಲು ಉತ್ಸುಕವಾಗುವುದಕ್ಕಿಂತ ಯಾಕೆ ಹೀಗೆಲ್ಲಾ ಇದೆ ಎಂಬ ತಳಮಳದ ಕಡೆ ಹೆಚ್ಚು ಧ್ಯಾನ ಕೈಗೊಳ್ಳುತ್ತದೆ. ಹೇಳಿ ತಿಳಿಸುವ ವಿಚಾರನಿವೇದನೆ ಮತ್ತು ವಿಡಂಬನಾತ್ಮಕ ಕಥನ ಇದರಲ್ಲಿದೆಯೇ ವಿನಾ ಪರೀಕ್ಷಿಸಿ ನಿರ್ಣಯ ನೀಡುವ ಮೇಲುಗಾರಿಕೆ ಇವರಲ್ಲಿಲ್ಲ. ದ್ಯೂತ ಪ್ರಸಂಗ, ಶ್ಯಾನುಭೋಗ ಇತ್ಯಾದಿ ಪ್ರಬಂಧಗಳನ್ನು ಇದಕ್ಕೆ ಉದಾಹರಣೆಯಾಗಿ ನೀವು ನೋಡಬಹುದು. ರಂಗಮ್ಮನ ಭೂತ, ಪರ್ಮಿಟ್ ಪಿಶಾಚ, ನಾಯಬಾಲ ಇಂಥ ಕೆಲ ಪ್ರಬಂಧಗಳಲ್ಲಿ ಭ್ರಷ್ಟತೆ, ಅಸ್ಪೃಶ್ಯತೆ, ಶೋಷಕ ಪ್ರವೃತ್ತಿಗಳ ಕುರಿತಾಗಿ ಕಟುವ್ಯಂಗ್ಯ ಮತ್ತು ಆಕ್ರೋಶ ವ್ಯಕ್ತವಾಗಿದ್ದರೂ ಇಲ್ಲೂ ಆಪಾದನಾ ಧಾಟಿ ಇಲ್ಲ.

ಸ್ಥಳೀಯ ಸಂಸ್ಕೃತಿಯ ದಟ್ಟ ವಿವರಗಳನ್ನು ಪ್ರಕಟಿಸುವ ಗೊರೂರರು ತಮ್ಮ ಪ್ರಬಂಧಗಳಲ್ಲಿ ಕಥಿಸುವ ಹಳ್ಳಿಯ ಸಂಪ್ರದಾಯಗಳು, ಆಚಾರಗಳು ಮತ್ತು ಜೀವನ




ವಿವರಗಳಲ್ಲಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ಧೋರಣೆಯನ್ನು ಪ್ರಕಟಿಸುವುದಿಲ್ಲ. ಇವರದು ನಿತ್ಯ ಗತಿಶೀಲ ವಾದ. ಇವರು ಯಾವ ನೆಲೆಯಿಂದಲೂ ಸಂಪ್ರದಾಯ ಶರಣರಂತೆ ಕಾಣುವುದಿಲ್ಲ. ಇವರ ಹಾರುವಯ್ಯ ಕ್ಷೌರಿಕನಾದುದು, ಸಫಲ ಜೀವನ, ಜಪತಪ ಅನುಷ್ಠಾನ, ಆಚಾರ ಕೆಟ್ಟರೂ... ಇತ್ಯಾದಿ ಪ್ರಬಂಧಗಳನ್ನು ಒಟ್ಟಿಗೇ ಇಟ್ಟು ನೋಡಿದರೆ ಇವರು ಶ್ರಮಸಂಸ್ಕೃತಿ ವಾದಿಯೆಂಬುದು ತಿಳಿದುಹೋಗುತ್ತದೆ.

ಆಚಾರ ಕೆಟ್ಟರೂ ಆಕಾರ ಕೆಡಬಾರದು ಪ್ರಬಂಧದಲ್ಲಿ ಆಚಾರ್ಯರು ಅನ್ನಶುದ್ಧಿಗೆ ತುಪ್ಪಕ್ಕಾಗಿ ಗಂಟೆಗಟ್ಟಲೆ ಕಾಯುವುದು, ಕೆರಗಳನ್ನು ತಲೆದಿಂಬಾಗಿ ಇಟ್ಟದ್ದಕ್ಕೆ ಕೂಗಾಡುವುದು, ಅರೆಹೊತ್ತಲ್ಲಿ ಪಪ್ಪಾಯ ತಿಂದ ಬ್ರಾಹ್ಮಣರು ಕೈ ತೊಳಕೊಂಡಂತೆ ಖಾಲಿ ಚೊಂಬು ಸದ್ದು ಮಾಡಿ ನಟಿಸುವುದು ಇವೆಲ್ಲವನ್ನೂ ಗೊರೂರರು ವಿನೋದಪೂರ್ಣ ವ್ಯಂಗ್ಯದಿಂದ ಚಿತ್ರಿಸುತ್ತಾರೆ. ನಿತ್ಯ ಗತಿಶೀಲತೆಯೇ ಇಂಥಲ್ಲಿನ ಮಂತ್ರ. ಆಯಾಯ ಕಾಲದ ನಡಾವಳಿಗಳು ರೂಪಗೊಳ್ಳುವುದು ಆಯಾಯ ಕಾಲ, ಸ್ಥಳದ ಬೇಡಿಕೆ ಮತ್ತು ಸಾಂದರ್ಭಿಕ ಅನಿವಾರ್ಯತೆಗಳಿಂದಲೇ ಅಲ್ಲವೇ? ಇವರ ಪ್ರಬಂಧಗಳ ಹಿಂದಿನ ಬಹುತೇಕ ಗತಿಶೀಲತೆಯ ಕಾರಣಗಳು ಸಾಂದರ್ಭಿಕ ಅನಿವಾರ್ಯತೆಗೆ ತಕ್ಕಹಾಗೆ ಸಾಪೇಕ್ಷವಾಗಿರುತ್ತವೆ.

ಸಫಲ ಜೀವನ ಪ್ರಬಂಧದಲ್ಲಿ ಸ್ನಾನ ಪೂಜೆ ಮತ್ತು ಬೇಸಾಯ ದುಡಿಮೆಗಳ ನಡುವೆ ಒಂದು ದೊಡ್ಡ ಮುಖಾಮುಖಿಯನ್ನು ಏರ್ಪಡಿಸುವ ಗೊರೂರು ದುಡಿಮೆಯೇ ನಿಜವಾದ ಆಧ್ಯಾತ್ಮಿಕತೆ, ಅದೇ ತಪ, ಸಫಲ ಬದುಕು ಎಂಬ ತೀರ್ಮಾನಕ್ಕೆ ಬರುತ್ತಾರೆ. 'ಜಪತಪ ಅನುಷ್ಠಾನ', ಬೈಲಹಳ್ಳಿ ಸರ್ವೆ ಮುಂತಾದ ಕಡೆ ಆಧ್ಯಾತ್ಮಿಕತೆಗೂ - ಮುದಿವಯಸ್ಸಿಗೂ, ಬಿಡುವಿಗೂ-ಆಚಾರವಂತಿಕೆಗೂ, ಆರ್ಥಿಕ ಸುಸ್ಥಿತಿಗೂ ಮತ್ತು ಬ್ರಾಹ್ಮಣಿಕೆಗೂ ಅನ್ಯೋನ್ಯ ಸಂಬಂಧವಿರುವುದನ್ನು ಗೊರೂರು ಚೆನ್ನಾಗಿ ತೋರಿಸಿಕೊಟ್ಟಿದ್ದಾರೆ. ಶ್ರಮಮೂಲ ಆಧ್ಯಾತ್ಮಿಕತೆ ಇವರ ಪ್ರಬಂಧಗಳಲ್ಲಿ ಒಡೆದು ಕಾಣುತ್ತದೆ. ಬೆಸ್ತರ ಕರಿಯ, ಕ್ಷೌರಸಂಹಿತೆ ಕಥನಗಳೂ ಇದಕ್ಕೆ ಉದಾಹರಣೆ.

ನಮ್ಮಲ್ಲಿ ಅನೇಕರು ಇಂದೂ ಇಂಗ್ಲಿಷ್ ತಿಳಿದವರು ಮಾತ್ರ ಜ್ಞಾನಿಗಳು ಎಂದು ನಂಬುತ್ತಾರೆ. ಬೈಲಹಳ್ಳಿ ಸರ್ವೆಯಲ್ಲಿ (ಪು ೭೧-೭೨) ಸಾಹೇಬರು ಸಿಡಿಲಿನ ಕತೆ ಹೇಳುವ ವಿವರಗಳಿವೆ ; ಸಿಡಿಲನ್ನು ಇಂಗ್ಲಿಷರು ಹಿಡಿದು ಬಿಟ್ಟಿದ್ದಾರೆ. ಅದು ಆರಿದರೆ ಥಣ್ಣಗಾಗುತ್ತದೆ. ಅವರು ಅದರಿಂದಲೇ ವೈರ್‌ಲೆಸ್ ಮಾಡುವುದು. ಸಿಡಿಲನ್ನು ಹೇಗೆ ಹಿಡಿಯುತ್ತಾರೆಂದರೆ ಒಂದು ಫರ್ಲಾಂಗ್ ಅಗಲ, ಒಂದು ಫರ್ಲಾಂಗ್ ಉದ್ದ ಗುಂಡಿ ತೆಗೆದು ಅದರಲ್ಲಿ ಸಗಣಿ ಕದರಿಬಿಡುತ್ತಾರೆ. ಸಿಡಿಲು ಅದರಲ್ಲಿ ಬಿದ್ದು ಥಣ್ಣಗಾಗಿ ಬಿಡುತ್ತದೆ. ಇದೆಲ್ಲ ಇಂಗ್ಲಿಷಿನವರಿಗೆ ಮಾತ್ರ ಸಾಧ್ಯ. ಮಿಕ್ಕವರಿಗೆ ಸಾಧ್ಯವಿಲ್ಲ... ನೋಡಿ ರೈಲು ಬಿಡುವುದಕ್ಕೆ ಇದಕ್ಕಿಂತಾ ಉದಾಹರಣೆ ಬೇಕಾ! ಆಫೀಸರು ಏನೇ ಬೊಗಳೆ ಬಿಟ್ಟರೂ ಕೈಕೆಳಗಿನವರು ಸದಾ ಹೌದು ಹೌದೆಂಬ ಹೌದಪ್ಪಗಳಾಗಿರಬೇಕು ಎಂಬ ಆಚಾರ ನಮ್ಮಲ್ಲಿ ಬಹುಕಾಲದಿಂದಲೂ ಸರ್ಕಾರಿ ಕಛೇರಿಗಳಲ್ಲಿ ಚಾಲ್ತಿಯಲ್ಲಿದೆ. ಆದರೆ ಯಾವನೋ ಜುಜುಬಿ ಸಾಹೇಬ ಇಂಥ ತಲೆಮಾಸಿದ ಕತೆಗಳನ್ನು ಊರಲ್ಲಿ ಬಂದು ಹೇಳಿದರೆ ಹೌದು ಹೌದೆನ್ನಬೇಕು. ಯಾಕೆಂದರೆ ಅವನು ಸಾಹೇಬನಲ್ಲವೇ!

ಗೊರೂರರು ಇಂಥ ಇಂಗ್ಲಿಷರು ಮತ್ತು ನವ ಇಂಗ್ಲಿಷರು ('ವಿದ್ಯಾವಂತ'ರು) ಮಾತ್ರ ಜ್ಞಾನಿಗಳು ಎಂಬ ನಂಬಿಕೆಯನ್ನು ಛಿದ್ರಿಸುತ್ತಾರೆ. ಇವರ ಪ್ರಬಂಧಗಳ ಗ್ರಾಮೀಣರು ಜೀವನಾನುಭವದಿಂದ ಹೇಳುವ ತತ್ವಜ್ಞಾನ ಯಾವ ಫಿಲಾಸಫಿ ಪಂಡಿತರಿಗೂ ಕಡಿಮೆಯಿರುವುದಿಲ್ಲ. ಇವರ ಪ್ರಕಾರ 'ಮಾಡುವ ಕೆಲಸ ಚೆನ್ನಾಗಿ ಮಾಡಬೇಕು, ಅದೇ ವಿದ್ಯೆ' (ಕ್ಷೌರ ಸಂಹಿತೆ. ಪು.೧೯೬). ಇವರಿಗೆ ಒಬ್ಬ ಬ್ರಾಹ್ಮಣ ನಾಣಿ, ಒಬ್ಬ ಕ್ಷೌರಿಕ ಮುನಿಯ, ಒಬ್ಬ ಬೆಸ್ತರ ಕರಿಯ, ಒಬ್ಬ ದನಕಾಯುವ ತೂರ, ಒಬ್ಬ ಶಾಲು ಸಾಬಿ, ಒಬ್ಬ ಗೃಹಿಣಿ ಸೀತೆ, ಒಬ್ಬ ರೈತ ವೆಂಕಟರಾಯ ಇಂಥ ವ್ಯಕ್ತಿಗಳೇ ಈ ಸಮಾಜದ ನಿಜವಾದ ಬೆನ್ನೆಲುಬುಗಳು. ಇಂಥ ಗ್ರಾಮೀಣ ಆರ್ಗ್ಯಾನಿಕ್ ಶ್ರಮಜೀವಿಗಳೇ ಇವರ ಪ್ರಬಂಧಗಳಲ್ಲಿ ಒಟ್ಟಾರೆ ಸಂಸ್ಕೃತಿಯ ಆಧಾರ ಸ್ತಂಭಗಳಾಗಿದ್ದಾರೆ. (ಇಂಥಲ್ಲೆಲ್ಲ ರಾಕು ಅವರ ಪ್ರಬಂಧಗಳ ತತ್ವಜಿಜ್ಞಾಸೆ ನೆನಪಿಗೆ ಬರುತ್ತದೆ. ಪ್ರಬಂಧಕಾರರೇ ನಡೆಸುವ ತತ್ವಜಿಜ್ಞಾಸೆಗೂ ಪ್ರಬಂಧಗಳಲ್ಲಿ ಅಂತಸ್ಥವಾಗಿರುವ ಜಿಜ್ಞಾಸೆಗೂ ಇಂಥಲ್ಲಿ ತುಲನೆ ಹುಟ್ಟುತ್ತದೆ).

ಬೈಲಹಳ್ಳಿ ಮೋಜಣಿದಾರರ ಎದುರಿಗೆ ಪ್ರಾಸಂಗಿಕವಾಗಿ ನೇಟಿವ್ ವೈದ್ಯ ಮತ್ತು ಇಂಗ್ಲಿಷ್ ವೈದ್ಯ ಪದ್ಧತಿಗಳ ಚರ್ಚೆ ಬರುತ್ತದೆ. ಈ ಸಂದರ್ಭದಲ್ಲಿ ಸುಬ್ಬೇಗೌಡ ಹೇಳುವ ನಾಟಿವೈದ್ಯನೊಬ್ಬನ ಕತೆ ಬಹಳ ಸ್ವಾರಸ್ಯಕರವಾಗಿದೆ. 'ಟಿಪ್ಪು ಸುಲ್ತಾನನ ಅರಮನೆಯಲ್ಲಿ ಒಬ್ಬ ನೇಟಿವ್ ವೈದ್ಯ ಇದ್ದ. ಅರಮನೆಯ ಹೆಂಗಸರಿಗೆ ಖಾಯಿಲೆ ಆದರೆ ಈ ವೈದ್ಯ ಗಂಡಸಾದ್ದರಿಂದ ಅವರ ಕೈಮುಟ್ಟಿ ನಾಡಿ ನೋಡುವುದಿರಲಿ, ಅವರ ಸಮೀಪ ಹೋಗಲೂ ಅವಕಾಶ ಇರಲಿಲ್ಲ. ಅವರ ಕೈಗೆ ಒಂದು ಉದ್ದನೆ ಹುರಿ ಕಟ್ಟಿ, ಆ ಹುರಿಯ ತುದಿಯನ್ನೆ ಹಿಡಿದು ನಾಡಿ ಪರೀಕ್ಷೆ ಮಾಡಿ ಔಷಧಿ ಕೊಡುತ್ತಿದ್ದ. ಇದರಿಂದಲೆ ಅಂತಃಪುರದ ರಾಣಿಯರು ಗುಣವಾಗುತ್ತಿದ್ದರು. ಹೀಗಿರುವಾಗ ಒಮ್ಮೆ ಅವನ ಪ್ರತಿಭಾ ಪರೀಕ್ಷೆಗೆಂದು ಒಂದು ಕೋಣನ ಕಾಲಿಗೆ ಹುರಿ ಕಟ್ಟಿ ಇನ್ನೊಂದು

ತುದಿಯನ್ನು ಇವನ ಕೈಗೆ ಕೊಟ್ಟರು. ಆಗ ವೈದ್ಯ ಇದೇನಿದು ಕೋಣನ ನಾಡಿ ಆಡ್ತಾ ಇದೆಯಲ್ಲ ಎಂದ. ಇದನ್ನು ಕೇಳಿ ಅಲ್ಲಿದ್ದವರು ದಂಗಾಗಿ ಹೋದರು.' (ಬೈಲಹಳ್ಳಿ ಸರ್ವೆ. ಪು.೬೨) ಕತೆಗೆ ಕಾಲು ಇರುತ್ತದೋ ಇಲ್ಲವೋ ಆದರೆ ದೊರೆಗಳ ಅಂತಃಪುರದ ಸ್ತ್ರೀಯರನ್ನು ಗಂಡಸರಾಗಿದ್ದರೆ ವೈದ್ಯರೂ ಸಮೀಪಿಸುವಂತಿರಲಿಲ್ಲ ಎಂಬುದು ನಿಜವೇ ಇರಬಹುದು.

ಕನ್ನಡ ಮೌಲ್ವಿ (ಒಂದು ಅನುಭವ) ಇವರ ಪ್ರಬಂಧಗಳಲ್ಲಿ ಸ್ವಲ್ಪ ಭಿನ್ನವಾದ ಪ್ರಬಂಧ. ಈ ಪ್ರಬಂಧವನ್ನು ನೋಡಿದರೆ ವೈಯಕ್ತಿಕ ಅನುಭವ ಮತ್ತು ಸಾಮುದಾಯಿಕ ಅನುಭವ ಎಂಬ ಸೂಕ್ಷ್ಮ ಅನುಭವ ಭೇದ ಇವರಲ್ಲಿರುವಂತೆ ಕಾಣುತ್ತದೆ. ಇವರು ಕೆಲ ಪ್ರಬಂಧಗಳನ್ನು ವ್ಯಕ್ತಿ ಸಂಗಾತಗಳಂತೆ, ಪ್ರಸಂಗಾವಧಾನಗಳಂತೆ ಚಿತ್ರಿಸಿದ್ದಾರೆ. ಇಲ್ಲೆಲ್ಲ ಕೊಂಡ ವೆಂಕಪ್ಪಯ್ಯ, ಮಾಸ್ತಿ, ಪುತಿನ, ಕ್ಷೌರಿಕ ಮುನಿಯ, ಬೆಸ್ತರ ಕರಿಯ, ಗೆಳೆಯ ಸೀನಪ್ಪ ಮೊದಲಾದವರು ಬರುತ್ತಾರೆ. ಪೂಟ್ ಲಾಯರಿಯ ಹಣೆಬರಹ, ಕ್ಷೌರಸಂಹಿತೆ ಪ್ರಬಂಧಗಳು ಮತ್ತು ಹಳೆಯಪಳೆಯ ಮುಖಗಳು ಸಂಕಲನದ ಬಹುಪಾಲು ಪ್ರಬಂಧಗಳು ಪ್ರಸಂಗಾವಧಾನದ ಪ್ರಬಂಧಗಳೇ ಆಗಿವೆ. ಇಂಥ ಒಂದು ಹೊಸ ಪ್ರಕಾರವೇ ನಮ್ಮಲ್ಲಿದೆ. ಆದರೆ ಇದಕ್ಕೆ ನಮ್ಮಲ್ಲಿ ಪ್ರಾಶಸ್ತ್ಯ ಕಡಿಮೆ.

ಆಗಸ್ಟ್ ೪೨ರ ಒಂದು ಅನುಭವ, ಯುದ್ಧದಿಂದ ಹಿಂದಿರುಗಿದವನ ದಿನಚರಿಯಿಂದ, ಮೊದಲಾದ ಪ್ರಬಂಧಗಳು ಕೂಡ ಕಲ್ಪನಾಂಶ ಕಡಿಮೆಯುಳ್ಳ ಇತಿಹಾಸವನ್ನು ಆಧರಿಸಿದ ಪ್ರಸಂಗಾವಧಾನೀಯ ಪ್ರಬಂಧಗಳೇ ಆಗಿವೆ. (ರಾವ್ ಬಹದ್ದೂರರ ಮರೆಯದ ನೆನಹುಗಳು ಸಂಕಲನದ ಪ್ರಬಂಧಗಳೂ ಈ ರೀತಿಯವೇ). ಯಾವುದೇ ಸಾಹಿತ್ಯ ಬರಹವನ್ನು ಇತಿಹಾಸ ಚಿತ್ರವೆಂಬಂತೆ ಕಾಣುವುದು ನಮ್ಮಲ್ಲಿ ಕಡಿಮೆ. ಕಥನವೆಂದರೆ ಕಾಲ, ಸ್ಥಳ, ವಾಸ್ತವಿಕತೆಗಳನ್ನು ದಾಟಿದ ರಸಾನುಭವ ಚಿತ್ರವೆಂದೇ ನಮ್ಮಲ್ಲಿ ಭಾವಿಸುವುದು ಹೆಚ್ಚು ಕಥನವು ಇತಿಹಾಸವಾಗಬಲ್ಲುದೋ ಎಂಬ ಮಾತು ಹಾಗಿರಲಿ ಎಲ್ಲ ಇತಿಹಾಸ ಬರವಣಿಗೆಯೂ ಕಥನದ ಕೂಸೇ ಎಂಬುದನ್ನು ಅಲ್ಲಗಳೆಯಲಾಗದು. ಗೊರೂರರ ವಿಚಾರದಲ್ಲಂತೂ ಇತಿಹಾಸ ಮತ್ತು ಕಥನಗಾರಿಕೆಗಳೆರಡೂ ಏಕೀಭವಿಸಿದಂತಿವೆ. ಗೊರೂರರ ಅನೇಕ ಚಿತ್ರಗಳನ್ನು ವಾಸ್ತವಿಕ ಸಂಸ್ಕೃತಿ ಚರಿತ್ರೆಯ ಪ್ರತಿನಿಧೀಕರಣಗಳೆನ್ನಲು ಅಡ್ಡಿಯಿಲ್ಲ. ಯಾವುದೇ ಸಾಹಿತ್ಯ ಕಥನದಲ್ಲಿ ಐತಿಹಾಸಿಕ ವಾಸ್ತವ ಮತ್ತು ಕಲ್ಪನಾ ವಾಸ್ತವಗಳನ್ನು ಖಚಿತವಾಗಿ ವಿಭಜಿಸಲು ಬರುವುದಿಲ್ಲವಾದರೂ ಸ್ಥಳೀಯ ಸಂಸ್ಕೃತಿ ಚರಿತ್ರೆಯನ್ನು ಕಟ್ಟಿಕೊಳ್ಳ ಬಯಸುವವರಿಗೆ, ಅದರ ಬಹುಮುಖಿ ಮಗ್ಗಲುಗಳನ್ನು ತಿಳಿಯ ಬಯಸುವವರಿಗೆ ಗೊರೂರರ ಸಾಹಿತ್ಯವು ಆಕರ ಪಠ್ಯವಾಗಿ ಒದಗುವುದರಲ್ಲಿ ಸಂಶಯವಿಲ್ಲ.

ಗೊರೂರರ ಬರವಣಿಗೆಯಲ್ಲಿ ಕಂಡುಬರುವ ಬಲು ದೊಡ್ಡ ದೌರ್ಬಲ್ಯವೆಂದರೆ ವಾಚಾಳಿತನ. ಬೆಟ್ಟದ ಮನೆಯಲ್ಲಿ, ಕ್ಷೌರಸಂಹಿತೆ, ಪ್ರೀತಿ ಪ್ರೇಮ ಸಂಸಾರ ಇಂಥ ಪ್ರಬಂಧಗಳು ಇದಕ್ಕೆ ಸಾಕ್ಷಿ. ಇಂಥ ಪ್ರಬಂಧಗಳು ಓದುಗರ ತಾದಾತ್ಮ್ಯ ಬೇಡುತ್ತವೆ. ಓದುಗುಣ ಇದ್ದರೂ ಇನ್ನೂ ಅಡಕವಾಗಿದ್ದರೆ ಚೆನ್ನಿತ್ತು ಅನ್ನಿಸುತ್ತವೆ. ಗೊರೂರರೇ ಕ್ಷೌರಸಂಹಿತೆಯಲ್ಲಿ ಹೇಳುವ ಹಾಗೆ "ಲೇಖಕನನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಷ್ಟು ಸಹನೆ ಕೆಲವು ವಾಚಕರಿಗೆ ಇರುವುದಿಲ್ಲ" (ಹ.ಪ. ಮುಖಗಳು. ಪು.೧೬೭)

ಗೊರೂರರ ಪ್ರಬಂಧಗಳು ನಾವು ಈಗಾಗಲೇ ತಿಳಿದಿರುವಂತೆ ಭಾರತೀಯ ಸ್ಥಿತ್ಯಂತರ ಸಮಾಜದ ನುಡಿಚಿತ್ರಗಳಾಗಿವೆ. ಭಾರತೀಯ ಬದುಕಿನ ಒಂದು ಸಂಕೀರ್ಣ ಚಲನಶೀಲ ಜೀವರೂಪಕವೆಂಬಂತೆ ಇವರ ಹೇಮಾವತಿ ತೀರದಲ್ಲಿ ಪ್ರಬಂಧದ ಒಂದು ಭಾಗವನ್ನು ಗಮನಿಸಬಹುದು. (ಆಸಕ್ತರು ನೋಡಿ, ಗರುಡ ಗಂಬದ ದಾಸಯ್ಯ ಪು.೧೪೨-೪೩). ಇಲ್ಲಿ ಹೇಮಾವತಿ ನದಿ ಸಾಮಾಜಿಕ ಸ್ಥಿತ್ಯಂತರದ ಸಾಕ್ಷಿಪ್ರಜ್ಞೆಯಾಗಿ ಬರುತ್ತದೆ. 'ಕಾಲಾನುಕ್ರಮೇಣ ಹೇಮಾವತಿ ನದಿಯಲ್ಲಿ ಸಾಕಷ್ಟು ನೀರು ಹರಿದುಹೋಗಿದೆ'; ಹಾಗೇ ಜೀವನದಲ್ಲೂ ಅನೇಕ ಸ್ಥಿತ್ಯಂತರಗಳು ಸಂಭವಿಸಿವೆ. ಇಂಥ ಸ್ಥಿತ್ಯಂತರಗಳ, ಹಳತು-ಹೊಸತಿನ ಸಂಘರ್ಷ ಯುಕ್ತ - ಸಹಬಾಳ್ವೆಯ ಚಿತ್ರಣವೇ ಇವರ ಪ್ರಬಂಧಗಳ ಜೀವಾಳವಾಗಿದೆ.

**ರಾಮಲಿಂಗಪ್ಪ ಟಿ. ಬೇಗೂರು**
ನಂ.೪೭, ೪ನೇ ಕ್ರಾಸ್, ೪ನೇ ಮುಖ್ಯರಸ್ತೆ, ಬಿ.ಎಸ್.ಕೆ.
೩ನೇ ಹಂತ, ಬೆಂಗಳೂರು-೫೬೦೦೮೫

---

***೩ನೇ ಪುಟದಿಂದ.. (ಈ ತಿಂಗಳು)***

ನಾಶಮಾಡಲು ಹೊರಟಿದ್ದಾರೆ. ಕೇಂದ್ರ ಸರ್ಕಾರವನ್ನು ಎಳೆದು ತಂದು ಸೋನಿಯಾ ಗಾಂಧಿಯನ್ನು ತೆಗಳುವುದು ತೋಗಡಿಯಾ ಅವರಿಗೆ ಅನಿವಾರ್ಯವಾಗಿದೆ. ಏಕೆಂದರೆ, ತಾವು ರಾಮಭಕ್ತರಾದರೆ ಜಯಲಲಿತಾ ರಾಮ ಮತ್ತು ಮೂಕಾಂಬಿಕೆ ಇಬ್ಬರಿಗೂ ಭಕ್ತಳು! ಅಮೆರಿಕಾದ ಗೂಢಚಾರ ಸಂಸ್ಥೆಗೆ ಪ್ರಿಯಬಂಧುವಾದ ಸುಬ್ರಹ್ಮಣ್ಯ ಸ್ವಾಮಿಯಂತೂ ತಾನೇ ಮುಂದಿನ ಪ್ರಧಾನಿಯೆಂಬಂತೆ "ರಾಷ್ಟ್ರೀಯ ಸ್ವಾಭಿಮಾನ ಮಂಚ್' ರಚಿಸಿಕೊಂಡು ಸಾಧು-ಸಂತರ ಅಭಯಪ್ರದಾಯಕರಾಗಿದ್ದಾರೆ. ಮುಂದಿನ ಅವರ ಸರ್ಕಾರದಲ್ಲಿ ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಪಕ್ಷಗಳಿಗೆ ಮಾತ್ರ ಪ್ರವೇಶವಿರುವುದಿಲ್ಲವೆಂದು ಘೋಷಿಸಿಬಿಟ್ಟಿದ್ದಾರೆ. ಅವರ ಜೊತೆ ಸೇರಲು ಯಾರೂ ತುದಿಗಾಲ ಮೇಲೆ ನಿಂತಿಲ್ಲ.

ಜಯೇಂದ್ರ ಸ್ವಾಮಿಗಳ ಬಂಧನದ ಬಗ್ಗೆ ಎಷ್ಟೇ ಅಸಮಾಧಾನವಿದ್ದರೂ ಈ ಕೆಲವು ಪ್ರತಿಕ್ರಿಯೆಗಳು ನೇರವಾಗಿ ವಿಷಯಕ್ಕೆ ಬದ್ಧವಾಗಿರದೆ ಭಾವೋದ್ರೇಕದ ಪ್ರದರ್ಶನಗಳಾಗಿವೆ. ಬಾಡಿಗೆ ಹಂತಕರೊಡನೆ ಸ್ವಾಮಿಗಳು ತಾವೇ ಸಂಪರ್ಕ ಬೆಳೆಸಿ ಸಂಚಾರಿ ದೂರವಾಣಿಯಲ್ಲಿ ಸಂಭಾಷಣೆ ನಡೆಸಿದ್ದಾರೆಂದು ಹೇಳಲಾಗಿದೆ. ಇದು ನಿಜವಾದರೆ ಇವರು ಶೇಕ್ಸ್‌ಪಿಯರ್‌ನ ಮ್ಯಾಕ್‌ಬೆತ್ ನಾಟಕದ ಮ್ಯಾಕ್‌ಬೆತ್‌ಗೆ ಸಮಾನರಾಗಿಬಿಡುವ ಅಪಾಯವಿದೆ. ಕಂಚಿ ಸ್ವಾಮಿಗಳ ಪ್ರಕರಣ ಹೇಗಾದರೂ ಮುಕ್ತಾಯವಾಗಲಿ, ಇದರಿಂದ ಬೇರೆ ಮಠಗಳವರು ಸ್ವಾತ್ಮಾವಲೋಕನ ಮಾಡಿಕೊಳ್ಳಬೇಕಾದ ಅವಶ್ಯಕತೆ ಇದೆ ಮತ್ತು ಮಠಗಳ ಶಿಷ್ಯರು ತಮ್ಮತಮ್ಮ ಮಠಗಳ ಒಳಹೊಕ್ಕು ಎಲ್ಲಾ ವ್ಯವಹಾರಗಳನ್ನೂ ಚೆನ್ನಾಗಿ ಕರಗತಮಾಡಿಕೊಳ್ಳಬೇಕು, ಸೂಕ್ತವಾಗಿ ಪ್ರತಿಕ್ರಿಯಿಸಬೇಕು.

* * *

ನಾಗಪುರದಲ್ಲಿ ಆರೆಸ್ಸೆಸ್‌ನ ಕೇಂದ್ರಭವನಕ್ಕೆ ಭೇಟಿಕೊಟ್ಟಾಗ ಅಡ್ವಾನಿಯವರಿಗೆ ಹುಮ್ಮಸ್ಸು ಉಕ್ಕಿಬಂದು ಕಮ್ಯುನಿಸ್ಟರನ್ನು ಕುರಿತು ವ್ಯಾಖ್ಯಾನ ನೀಡಿದ್ದರು. ಮಾರ್ಕ್ಸ್‌ವಾದಿಗಳಿಗೆ ಆರ್ಥಿಕತೆಯ ಬಗ್ಗೆ ಕಾಳಜಿ ಇರುವುದೇನೋ ಸರಿ, ಆದರೆ ಅವರು ದೇಶದ ಸುಭದ್ರತೆ ಮತ್ತು ವಿದೇಶಾಂಗ ವ್ಯವಹಾರಗಳ ಬಗೆಗೂ ಆಸಕ್ತಿ ತೋರಿಸುತ್ತಿರುವುದು ದೇಶಕ್ಕೆ ಒಳ್ಳೆಯದಲ್ಲವೆಂದು ನಮ್ಮ ರಾಜರ್ಷಿ ಅಡ್ವಾನಿ ಅಪ್ಪಣೆ ಕೊಡಿಸಿದ್ದಾರೆ. ಈಶಾನ್ಯ ಭಾರತದ ಆಗುಹೋಗುಗಳನ್ನು ನಿಯಂತ್ರಿಸಲು ತಾನು ಸಹಕಾರ ನೀಡಲು ಸಿದ್ಧವೆಂದು ಹೇಳಿದ್ದ ಅಮೆರಿಕಾದ ಕೇಂದ್ರ ಪೊಲೀಸ್ ದಳವಾದ ಎಫ್.ಬಿ.ಐ.ನ ಮೂಗುತೂರಿಸುವಿಕೆಯನ್ನು ವಿರೋಧಿಸಿದ ಜ್ಯೋತಿ ಬಸು ಅವರ ಹೇಳಿಕೆಗೆ ಪ್ರತಿಕ್ರಿಯೆ ಇದು. ಅಮೆರಿಕಾದ ರಾಯಭಾರಿಗೆ ಕಮ್ಯುನಿಸ್ಟರು ಮಂಗಳಾರತಿ ಮಾಡಿದ್ದು ಅಡ್ವಾನಿಯವರಿಗೆ ಉಷ್ಣ ಹೆಚ್ಚಾಗಲು ಕಾರಣವಾಗಿದೆ. ದೇಶದ ಎಲ್ಲ ಪ್ರಜೆಗಳೂ ಸುಭದ್ರತೆ ಮತ್ತು ವಿದೇಶಾಂಗ ವ್ಯವಹಾರಗಳ ಬಗ್ಗೆ ಆಸಕ್ತಿ ತೋರದಿದ್ದರೆ ಅಡ್ವಾನಿ ಮತ್ತು ಅವರ ಪಕ್ಷ ನಮ್ಮನ್ನೆತ್ತ ಒಯ್ಯುತ್ತಾರೆಂಬುದು ಇದರಿಂದ ಸ್ಪಷ್ಟವಾಗಿದೆ.

* * *

ರಷ್ಯದ ಅಧ್ಯಕ್ಷ ಪುತಿನ್ ನೇತೃತ್ವದಲ್ಲಿ ಭಯೋತ್ಪಾದನೆಗೆ ಹೊಸ ಲಕ್ಷಣಗಳನ್ನು ನೀಡಲಾಗಿದೆ. ವಿಶ್ವದ ಎಲ್ಲ ರಾಷ್ಟ್ರಗಳೂ ಅದನ್ನು ಮಾನ್ಯ ಮಾಡಬೇಕು. ಏಕೆಂದರೆ ಅದು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ನಿರ್ಣಯವಾಗಿದೆ. ಅದರಂತೆ ಯಾವ ಕ್ರಾಂತಿಕಾರಿ ಹೋರಾಟವಾದರೂ ಅದನ್ನು ಕೂಡಲೆ ಭಯೋತ್ಪಾದನೆಯೆಂದು ವ್ಯಾಖ್ಯಾನಿಸಬಹುದು. ಅವರೆಲ್ಲಾ ಎಷ್ಟು ವ್ಯಾಖ್ಯಾನ ನೀಡಿ ಸುಖಿಸಿದರೂ ಹೋರಾಟ ಮಾಡಬೇಕಾದವರು ಅಜಗರದಂತೆ ನಿಷ್ಕ್ರಿಯರಾಗಲಾರರು.

ಈ ಹಿನ್ನೆಲೆಯಲ್ಲಿ ಬುಷ್ ಒಂದು ಬೃಹತ್ತಾದ ಜೋಕನ್ನು ಹೇಳಿ ನಮಗೆಲ್ಲಾ ಮುದ ನೀಡಿದ್ದಾರೆ. ಈಗ ವಿದೇಶಾಂಗ ಖಾತೆಯನ್ನು ವಹಿಸಿಕೊಂಡಿರುವ ಡಾ|| ಕೊಂಡಲಿಸ್ಸಾ ರೈಸ್ ಅವರನ್ನು ಕುರಿತಾದ್ದು ಆ ಜೋಕು. ಈಕೆ ಬಂದಿರುವುದರಿಂದ "ವಿಶ್ವಕ್ಕೆ ಬಲ, ಲಾವಣ್ಯ ಮತ್ತು ವಿನೀತಭಾವಗಳ ದರ್ಶನವಾಗುತ್ತದೆ" ಎಂಬುದು ಬುಷ್ ಜೋಕು. ಬಲವೇನೋ ತಿಳಿದಿದೆ. ಲಾವಣ್ಯ ಮತ್ತು ವಿನೀತಭಾವ ಹಾಗೂ ಅಮೆರಿಕ ಎರಡು ವಿರುದ್ಧ ಧ್ರುವಗಳೆಂದು ಯಾರಿಗೆ ತಿಳಿಯದು? ಜೊತೆಗೆ, ಈ ರೈಸ್ ಎಂಬ ಮಹಿಳೆ ಅತ್ಯಂತ ಕೆಳಮಟ್ಟದ ದುರಹಂಕಾರಿಯೆಂದು ಅಮೆರಿಕದ ರಾಜಕೀಯ ವಲಯಗಳಲ್ಲಿ ಹೇಳಲಾಗುತ್ತದೆ. ಅದೇ ವಿನೀತಭಾವ! ಇರಾಕಿನ ಜನರೇ, ವಿನೀತಭಾವವೆಂದರೆ ಏನೆಂದು ನಿಮಗೆ ಈಗಾಗಲೆ ತಿಳಿದಿದೆಯಲ್ಲವೆ? ಇನ್ನು ಮುಂದೆ ಬೇರೆ ಹತ್ತಾರು ರಾಷ್ಟ್ರಗಳಿಗೆ ಅದರ ರುಚಿಯನ್ನು ತೋರಿಸಲು ಈ ಕೋಮಲೆ ರೈಸ್ ಬಂದಿದ್ದಾಳೆ, ಎಚ್ಚರ!

# ಸ್ಥಿತ್ಯಂತರ

"ಈ ವಾರದಲ್ಲಿ ಒಂದು ದಿನ ಹಳ್ಳಿಗೆ ಹೋಗೋಣ ಅಪ್ಪ" ತಿಂಡಿ ತಿನ್ನುತ್ತಿದ್ದ ರಾಜೀವ ಹೇಳಿದಾಗ, ಶಿವರಾಮಯ್ಯ ಆಶ್ಚರ್ಯದಿಂದ ಹುಬ್ಬೇರಿಸಿದರು.

"ಹಳ್ಳೀಗಾ, ಯಾಕೆ ?" ಪ್ರಶ್ನಿಸಿದರು ಅವನ ತಾಯಿ ರಾಧಮ್ಮ.

"ನನ್ನ ಮಗ, ಮಗಳಿಗೆ ನಾನು ಹುಟ್ಟಿ ಬೆಳೆದ ಊರು ತೋರಿಸಬೇಕು ಅನ್ನಿಸ್ತಿದೆ. ಭಾವನಾನೂ ನಮ್ಮ ಹಳ್ಳಿ ನೋಡಿಲ್ಲ. ಬೆಳಿಗ್ಗೆ ಹೋಗಿ ಸಾಯಂಕಾಲ ಬಂದುಬಿಡೋಣ" ರಾಜೀವ ಹೇಳಿದ.

"ನನಗೆ ಬರಕ್ಕಾಗಲ್ಲ. ಮುಂದಿನ ವಾರಾನೇ ಹಬ್ಬ, ಕೈತುಂಬಾ ಕೆಲಸವಿದೆ."

"ಅತ್ತೇ, ನಿಮಗೆ ಯಾವತ್ತು ಕೆಲಸ ಇರಲ್ಲ ಹೇಳಿ. ನಿಮ್ಮ ಮಗ ಅಪರೂಪಕ್ಕೆ ಹಳ್ಳಿಗೆ ಹೋಗೋಣ ಅಂತಿದ್ದಾರೆ. ನೀವು ಒಪ್ಪಿಕೊಳ್ಳಿ." ಸೊಸೆ ಭಾವನಾ ಹೇಳಿದಾಗ ಶಿವರಾಮಯ್ಯ ನಸುನಕ್ಕರು. ಭಾವನಾ ಹೇಳಿದ ಮೇಲೆ ಹೆಂಡತಿ ಇಲ್ಲವೆನ್ನುವುದಿಲ್ಲವೆಂದು ಅವರಿಗೆ ಗೊತ್ತಿತ್ತು.

ಬಹಳ ದಿನಗಳಿಂದಲೂ ಶಿವರಾಮಯ್ಯನವರಿಗೆ ಹಳ್ಳಿಗೆ ಹೋಗಿಬರಬೇಕೆನಿಸಿತ್ತು. ಮಾವಿನಕೆರೆ ಬೆಂಗಳೂರಿನಿಂದ ೩೫ ಕಿ.ಮೀ ದೂರದಲ್ಲಿತ್ತು. ಶಿವರಾಮಯ್ಯ ಅಲ್ಲಿ ಪ್ರೌಢಶಾಲಾ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸಿದ್ದರು. ೨೫ ವರ್ಷ ಅದೇ ಊರಿನಲ್ಲಿದ್ದು ಸುತ್ತಮುತ್ತಲಿನ ಶಾಲೆಗಳಿಗೆ ವರ್ಗಾವಣೆ ತೆಗೆದುಕೊಂಡು ಓಡಾಡುತ್ತಿದ್ದರು. ಅಲ್ಲೇ ಸ್ವಂತ ಮನೆ ಮಾಡಿದ್ದರು. ಶಿವರಾಮಯ್ಯ ಅಲ್ಲಿ ನೆಲೆಸಿದ ಮೇಲೆ 'ರಾಮೋತ್ಸವ' ಪ್ರಾರಂಭಿಸಿದ್ದರು. ಊರಿನವರಿಗೆಲ್ಲಾ ಅವರು ಅಚ್ಚುಮೆಚ್ಚಿನ ಮೇಷ್ಟ್ರು. ಅವರಿಗೆ ಮೂವರು ಮಕ್ಕಳು. ದೊಡ್ಡವಳೇ ಲಕ್ಷ್ಮಿ. ಅವಳನ್ನು ರಾಧಮ್ಮನ ತಮ್ಮನಿಗೇ ಕೊಟ್ಟು ಮದುವೆಮಾಡಿದ್ದರು. ಅಳಿಯ ಹಾಸನದ ಕಾಲೇಜಿನಲ್ಲಿ ಲೆಕ್ಚರರ್. ಎರಡನೆಯವನೇ ರಾಜೀವ. ತುಂಬಾ ಬುದ್ಧಿವಂತ. ಮೊದಲಿಂದಲೂ ಡಾಕ್ಟರಾಗುವ ಕನಸು ಕಂಡಿದ್ದವನು. "ಹಳ್ಳಿಯಲ್ಲೇ ಹೈಸ್ಕೂಲು ಸೇರು" ಎಂದಾಗ, "ನಾನು ಇಂಗ್ಲಿಷ್ ಮೀಡಿಯಂ ತೆಗೆದುಕೊಳ್ಳಬೇಕು. ಆದ್ದರಿಂದ ಬೆಂಗಳೂರಿನಲ್ಲೇ ಓದ್ತೀನಿ, ಇಲ್ಲಿಂದ ಓಡಾಡ್ತೀನಿ" ಎಂದು ಹಠ ಹಿಡಿದಿದ್ದ. ಶಿವರಾಮಯ್ಯ ಒಪ್ಪದಿದ್ದಾಗ ಉಪವಾಸ ಸತ್ಯಾಗ್ರಹ ಮಾಡಿದ್ದ. ಕೊನೆಗೆ ತಂದೆಯೇ ಮಗನ ಹಠಕ್ಕೆ ತಲೆಬಾಗಿದ್ದರು.

ರಾಜೀವ ಪಿ.ಸಿ.ಎಂ.ಬಿ. ತೆಗೆದುಕೊಂಡು ಕಾಲೇಜಿಗೆ ಸೇರಿದಾಗ ಅವನ ಜೊತೆಯವರಾದ ಮುರಳಿ, ಮಾಧವ, ಸಿದ್ದೇಗೌಡ, ಬಷೀರ್, ದೇವದಾಸ್ ತಮಗಿಲ್ಲದ ಅದೃಷ್ಟ ಅವನಿಗೆ ಸಿಕ್ಕಿದ್ದಕ್ಕಾಗಿ ಕರುಬಿದ್ದರು.

"ನೀವೂ ಹಠಮಾಡಿ ನಿಮ್ತಂದೆ ತಾಯಿಯರನ್ನು ಒಪ್ಪಿಸಬೇಕಿತ್ತೊ, ಈಗ ಅತ್ತರೇನು ಪ್ರಯೋಜನ ?" ಎಂದಿದ್ದ ರಾಜೀವ.

"ಏನ್ ಮೇಷ್ಟ್ರೆ, ಅಂತೂ ಹಠಮಾಡಿ ಪಟ್ಟಣಕ್ಕೆ ಓಡೋದ್ನಲ್ಲಾ ನಿಮ್ಮಗ. ನಮ್ಮುಡಗ್ರೆಲ್ಲಾ ಬಾಳಾ ಪೆಚ್ಚಾಗ್ಬಿಟ್ಟವ್ರೆ" ಎಂದಿದ್ದರು ಕರೀಗೌಡರು. ಶಿವರಾಮಯ್ಯ ವಿಷಾದದ ನಗೆ ಬೀರಿದ್ದರು. "ನಿಮ್ಮ ಮಕ್ಕಳೆಲ್ಲಾ ಒಳ್ಳೆಯವರು. ನಿಮ್ಮ ಮಾತು ಕೇಳ್ತಾರೆ. ನನ್ನ ಮಗ ಹಠಮಾರಿ, ಸ್ವಾರ್ಥಿ, ಯಾರ ಮಾತೂ ಕೇಳಲ್ಲ" ಎಂದು ಹೇಳಬೇಕೆನ್ನಿಸಿತ್ತು. ಆದರೆ ಮಗನನ್ನು ಬೇರೆಯವರೆದುರಿಗೆ ದೂರಲು ಅವರ ಮನಸ್ಸು ಒಪ್ಪಿರಲಿಲ್ಲ.

ಕೊನೆಯವನೇ ಸಂಜೀವ. ಅವನು ಬಿ.ಕಾಂ. ಮುಗಿಸಿ ಬೆಂಗಳೂರಿನಲ್ಲಿ ಕೆಲಸದಲ್ಲಿದ್ದ. ಮಗನಿಗೆ ಬೆಂಗಳೂರಿನಲ್ಲಿ ಬ್ಯಾಂಕ್‌ನಲ್ಲಿ ಕೆಲಸ ಸಿಕ್ಕಿದಮೇಲೆ ಅವರು ಬೆಂಗಳೂರಿಗೆ ತಮ್ಮ ವಾಸಸ್ಥಾನ ಬದಲಾಯಿಸಿದ್ದರು.

ರಾಜೀವ ಎಂ.ಬಿ.ಬಿ.ಎಸ್. ಓದುವಾಗಲೇ ಸಹಪಾಠಿ



■ ಸಿ. ಎನ್. ಮುಕ್ತಾ

ಭಾವನಾಳನ್ನು ಪ್ರೀತಿಸಿದ್ದ. ಎಂ.ಬಿ.ಬಿ.ಎಸ್. ಮುಗಿಯುತ್ತಿದ್ದಂತೆ ಶ್ರೀಮಂತ ಮನೆತನದ ಡಾ|| ಭಾವನಾಳನ್ನು ಮದುವೆಯಾಗಿ ಮಾವನ ಸಹಾಯದಿಂದ ವಿದೇಶಕ್ಕೆ ಹಾರಿದ್ದ. ಭಾವನಾ ತುಂಬಾ ಒಳ್ಳೆಯ ಹುಡುಗಿ. ಅವಳಿಗೆ ವಿದೇಶದ ಹುಚ್ಚಿರಲಿಲ್ಲ ಅತ್ತೆ ಮಾವನ ಬಗ್ಗೆ ತುಂಬಾ ಗೌರವವಿತ್ತು.

''ರಾಜೀವ್, ನಿಮ್ಮನ್ನು ಡಾಕ್ಟರ್ ಮಾಡಲು ನಿಮ್ಮ ತಂದೆ-ತಾಯಿ ತುಂಬಾ ಕಷ್ಟಪಟ್ಟಿದ್ದಾರೆ. ನೀವು ಕೃತಜ್ಞತೆ ಇಟ್ಟುಕೊಳ್ಳಬೇಕು'' ಎನ್ನುತ್ತಿದ್ದಳು. ಅವರಿಗಿಬ್ಬರು ಮಕ್ಕಳು. ದೊಡ್ಡವನಿಗೆ ೧೨ ವರ್ಷ, ಚಿಕ್ಕವಳಿಗೆ ೧೦ ವರ್ಷ. ಅವಳಿಗೆ ಮಕ್ಕಳನ್ನು ಅಮೇರಿಕಾದಲ್ಲಿ ಓದಿಸಲು ಇಷ್ಟವಿರಲಿಲ್ಲ.

''ನಾವು ಮಕ್ಕಳನ್ನು ಇಂಡಿಯಾದಲ್ಲೇ ಓದಿಸೋಣ. ನಿಮ್ಮ ತಂದೆ-ತಾಯಿ ಆಗಾಗ್ಗೆ ಹೋಗಿ ನೋಡ್ತಿರ್‍ತಾರೆ. ನಮ್ಮ ಮಕ್ಕಳು, ಇಲ್ಲಿಯ ಸಂಸ್ಕೃತಿ, ಆಚಾರ- ವಿಚಾರ ತಿಳಿದುಕೊಳ್ಳಬೇಕು. ಓದುಮುಗಿದ ನಂತರ ಅವರಿಗಿಷ್ಟ ಬಂದ ಕಡೆ ಸೆಟ್ಲ್ ಆಗಲಿ.''

ಆದರೆ ರಾಜೀವ ಒಪ್ಪಿರಲಿಲ್ಲ. ''ನಾನು ಓದುವಾಗ ಇಂಡಿಯಾದಲ್ಲಿ ಕಷ್ಟಪಟ್ಟದ್ದು ಸಾಕು. ನಮ್ಮ ಮಕ್ಕಳಿಗೇನು ಕಡಿಮೆಯಾಗಿದೆ. ಅವರನ್ನು ಅಮೇರಿಕಾದಲ್ಲೇ ಓದಿಸೋಣ'' ಎಂದಿದ್ದ. ಈ ವಿಚಾರದಲ್ಲಿ ಆಗಾಗ್ಗೆ ಅವರ ನಡುವೆ ಜಗಳವಾಗುತ್ತಿತ್ತು.

ಶಿವರಾಮಯ್ಯನವರಿಗೆ ಮಗನ ಸ್ವಭಾವ ಚೆನ್ನಾಗಿ ಅರ್ಥವಾಗಿತ್ತು. ಅವನಿಗೆ ತನ್ನ ವೃತ್ತಿಯ ಬಗ್ಗೆ, ತನ್ನಲ್ಲಿರುವ ಸಂಪತ್ತಿನ ಬಗ್ಗೆ ತುಂಬಾ 'ಅಹಂ' ಇತ್ತು. ಅವನಿಗೆ ಪ್ರೀತಿ, ವಾತ್ಸಲ್ಯಗಳ ಬೆಲೆ ಗೊತ್ತಿರಲಿಲ್ಲ. ತಂದೆ-ತಾಯಿಯರಿಗೆ ಭಾವನಾಳ ಒತ್ತಾಯದಿಂದ ಹಣಕೊಡುತ್ತಿದ್ದನೇ ಹೊರತು ಅಭಿಮಾನದಿಂದಲ್ಲ. ಅವನಿಗಿದ್ದ ವಿದೇಶದ ವ್ಯಾಮೋಹ ಅಲ್ಲಿಗೆ ಹೋದಮೇಲೆ ಇನ್ನೂ ಜಾಸ್ತಿಯಾಗಿತ್ತು. ಹೆಂಡತಿಯ ಒತ್ತಾಯಕ್ಕೆ ಅವನು ೨ ವರ್ಷಗಳಿಗೊಮ್ಮೆ ಇಂಡಿಯಾಕ್ಕೆ ಬರುತ್ತಿದ್ದ. ಬಂದಕೂಡಲೆ ೨ ದಿನ ತಂದೆಯ ಮನೆಯಲ್ಲಿದ್ದು ದಾವಣಗೆರೆಗೆ ಹೋದರೆ ಅಲ್ಲಿ ೨೦-೨೫ ದಿನಗಳಿರುತ್ತಿದ್ದ. ಅಲ್ಲಾದರೆ ಓಡಾಡಲು ಭಾವಮೈದುನನ ಕಾರಿತ್ತು. ತಂದೆಯ ಮನೆಯಲ್ಲಿ ಆ ವೈಭವ ಎಲ್ಲಿಂದ ಬರಬೇಕು!

ಭಾವನಾ ಮಾತ್ರ ಅತ್ತೆ ಮನೆಯಲ್ಲಿರಲು ಬಯಸುತ್ತಿದ್ದಳು. ಗಂಡನನ್ನು ಬಲವಂತವಾಗಿ ತನ್ನ ತವರಿನಿಂದ ಹೊರಡಿಸುತ್ತಿದ್ದಳು. ಗಂಡ ತಾಯಿ-ತಂದೆಯರ ಜೊತೆ ಇರಲಿ ಎನ್ನುವುದು ಅವಳ ಅಭಿಪ್ರಾಯವಾಗಿತ್ತು. ಒಂದು ತಿಂಗಳಾದರೂ ಮಗ ತಮ್ಮ ಜೊತೆ ಇದ್ದರೆ ಆ ಮುದಿ ಜೀವಗಳಿಗೆ ನೆಮ್ಮದಿ ಸಿಗುವುದೆಂದು ಅವಳಿಗೆ ಗೊತ್ತಿತ್ತು.

ಶಿವರಾಮಯ್ಯ ಒಂದು ರೀತಿಯಲ್ಲಿ ಅದೃಷ್ಟವಂತರು. ಸಂಜೀವ ತಾಯಿ-ತಂದೆಯರನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಅವನ ಹೆಂಡತಿ ರೇಖಾ ಕೂಡ ಬ್ಯಾಂಕ್ ಉದ್ಯೋಗಿಯಾಗಿದ್ದಳು. ರಾಧಮ್ಮ ಸ್ವಭಾವತಃ ನಿಧಾನಿ. ಅತ್ತೆ-ಸೊಸೆಯರ ನಡುವೆ ಒಳ್ಳೆಯ ಹೊಂದಾಣಿಕೆ ಇತ್ತು.

ಮೊದಲಿಂದಲೂ ರಾಜೀವ ತುಂಬಾ ಅಹಂಕಾರಿ. ಎಂ.ಬಿ.ಬಿ.ಎಸ್. ಓದುವಾಗಲೂ ಅವನು ಕೆಲವರನ್ನು ಮಾತ್ರ ತನ್ನ ಸ್ನೇಹಿತರನ್ನಾಗಿ ಆಯ್ಕೆಮಾಡಿಕೊಂಡಿದ್ದ. ವಿದೇಶಕ್ಕೆ ತೆರಳಿ ಡಾಲರ್ ಗಳಿಸಲು ಆರಂಭಿಸಿದ ಮೇಲೆ ಅವನಿಗೆ ಇಂಡಿಯಾ ಬಗ್ಗೆ ಇದ್ದ ಅಲ್ಪ-ಸ್ವಲ್ಪ ಪ್ರೀತಿಯು ಮಾಯವಾಗಿತ್ತು. ಅಂತಹ ರಾಜೀವ ಹಳ್ಳಿಗೆ ಹೋಗಲು ಬಯಸಿದಾಗ ಭಾವನಾಗೆ ಸಹಜವಾಗಿ ಕುತೂಹಲ ಉಂಟಾಗಿತ್ತು.

ತಾವಿಬ್ಬರೇ ರೂಮ್‌ನಲ್ಲಿ ಉಳಿದಾಗ ಭಾವನಾ ಕೇಳಿದಳು: ''ರಾಜು, ನಿಮ್ಮನ್ನೊಂದು ಪ್ರಶ್ನೆ ಕೇಳಲಾ?''

''ಕೇಳು.''

''ನನಗೆ ಮತ್ತು ಮಕ್ಕಳಿಗೆ ಹಳ್ಳಿ ತೋರಿಸುವುದಕ್ಕೆ ನಿಮಗೆ ತುಂಬಾ ಇಷ್ಟಾನಾ ಅಥವಾ ಬೇರೆ ಏನಾದ್ರೂ ಕಾರಣ ಇದೆಯಾ?''

''ನೋಡು ಭಾವನಾ, ನಮ್ಮ ಹಳ್ಳಿಯಲ್ಲಿ ಕಾಲೇಜಿಗೆ ಹೋಗಿ ಓದಿರುವವರ ಸಂಖ್ಯೆ ತುಂಬಾ ಕಡಿಮೆ. ಅದರಲ್ಲೂ ಎಂ.ಬಿ.ಬಿ.ಎಸ್. ಮಾಡಿ ಫಾರಿನ್‌ಗೆ ಹೋದವರು ಯಾರೂ ಇಲ್ಲಾಂತಾನೇ ಹೇಳಬೇಕು. ನಾನಾಗ ಬೆಂಗಳೂರಿನಲ್ಲಿ ಕಾಲೇಜು ಸೇರಿದ್ದಕ್ಕೇ ನನ್ನ ಫ್ರೆಂಡ್ಸ್ ಎಷ್ಟು ಹೊಟ್ಟೆ ಉರ್‍ಕೊಂಡ್ರು ಗೊತ್ತಾ? ಈಗ ಅಮೇರಿಕಾದಲ್ಲಿದ್ದು ಡಾಲರ್ ಎಣಿಸ್ತಿರೋ ನನ್ನನ್ನು ನೋಡಿ ಹೇಗಾಡ್ತಾರೋ ನೋಡಕ್ಕಾಸೆ.''

''ಛೆ, ಎಂತಹ ಸಣ್ಣ ಮನಸ್ಸು ನಿಮ್ಮದು! ನಾನು ನಿಮ್ಮ ಜೊತೆ ಬರಲ್ಲ''

''ಬರದಿದ್ರೆ ಬಿಡೋರ್‍ಯಾರು?''

''ನಾನು ನಿಮ್ಮ ಜೊತೆ ಬರಬೇಕಾದರೆ, ನೀವು ನಿಮ್ಮ ಫ್ರೆಂಡ್ಸ್ ಜೊತೆ ನಾರ್ಮಲ್ ಆಗಿ ನಡೆದುಕೊಳ್ಳಬೇಕು. ಅವರು ಪ್ರೀತಿಯಿಂದ ಏನೇ ಕೊಟ್ಟರೂ ತಿನ್ನಬೇಕು. ನಿಮ್ಮ ಬಗ್ಗೆ ನೀವು ಜಂಭ ಕೊಚ್ಚೋಬಾರದು.''

''ಯಾಕೆ ಹಾಗಂತೀಯ?''

''ಮರಕ್ಕಿಂತ ಮತ್ತೊಂದು ಮರ ದೊಡ್ಡದು. ಅಮೇರಿಕಾಕ್ಕೆ ಹೋಗಿ ನಿಮಗಿಂತ ಹೆಚ್ಚಿನ ಸಾಧನೆ ಮಾಡಿರುವವರಿಲ್ವಾ? ನಾವು ಅಮೇರಿಕಾದಲ್ಲಿರೋದು ನಮ್ಮ ಸ್ವಾರ್ಥಕ್ಕೋಸ್ಕರ ಅನ್ನುವುದನ್ನು ಮರೆಯಬೇಡಿ.''

''ಆಯ್ತು ಮಹಾತಾಯಿ, ನೀನು ಹೇಳಿದಹಾಗೆ ಕೇಳ್ತೀನಿ. ಹಠಮಾಡದೆ ನನ್ನ ಜೊತೆ ಬಾ'' ಎಂದು ನಾಟಕೀಯವಾಗಿ ಕೈಮುಗಿದ ರಾಜೀವ.

* * *

ವಾರದೊಳಗೆ ಶಿವರಾಮಯ್ಯ ಹಳ್ಳಿಗೆ ಹೋಗುವ ಪ್ಲಾನ್ ಹಾಕಿದರು. ಒಂದು ಟಾಟಾ ಸುಮೋ ಮಾಡಿಕೊಂಡು ಎಲ್ಲರೂ ಹೋಗಿ ಬರುವುದೆಂದು ತೀರ್ಮಾನವಾಯ್ತು.

ಶುಕ್ರವಾರ ಬೆಳಿಗ್ಗೆ ಎಂಟುಗಂಟೆಗೇ ಮನೆಯಿಂದ ಹೊರಟು ಬೆಂಗಳೂರಿನ ಹೋಟೆಲೊಂದರಲ್ಲಿ ತಿಂಡಿ ಕಾರ್ಯಕ್ರಮ ಮುಗಿಸಿದರು. ದಾರಿಯಲ್ಲಿ ಶಿವರಾಮಯ್ಯ ಹೇಳಿದರು, ''ರಾಜೀವ, ನಿನ್ನ ಫ್ರೆಂಡ್ ಚೆನ್ನೇಗೌಡ ಈಗ ಬೆಂಗಳೂರಿನಲ್ಲೇ ಇದ್ದಾನೆ.''

''ಯಾರು ಕರೀಗೌಡರ ಮಗ ಚೆನ್ನೇಗೌಡಾನಾ?''

''ಹೂಂ. ಅವನೀಗ ಎಂ.ಎಲ್.ಎ. ಆಗಿದ್ದಾನೆ. ಬೆಂಗಳೂರಿನಲ್ಲಿ ಬಂಗಲೆ ಕಟ್ಟಿಸಿದ್ದಾನೆ. ಕಾರು-ಗೀರು ಇಟ್ಕೊಂಡು ಜೋರಾಗಿದ್ದಾನೆ.''

''ಅವನು ಅದೃಷ್ಟವಂತ. ಎಸ್.ಎಸ್.ಎಲ್.ಸಿ. ಮಾಡಕ್ಕೆ ನಾಲ್ಕುವರ್ಷ ತೊಗೊಂಡಿದ್ದ. ಈಗ ಎಂ.ಎಲ್.ಎ ಆಗಿಬಿಟ್ಟ. ಕರೀಗೌಡರು-ಪುಟ್ಟಮ್ಮ ಈಗ ಮಗನ ಮನೇಲೇ ಇದ್ದಾರೆ'' ಎಂದರು ರಾಧಮ್ಮ.

ರಾಜೀವನಿಗೆ ಚೆನ್ನೇಗೌಡ ಎಂ.ಎಲ್.ಎ. ಆಗಿದ್ದಾನೆ ಎನ್ನುವ ಸುದ್ದಿ ಕೇಳಿ ಮನಸ್ಸಿಗೆ ಮುಜುಗರವಾಯಿತು. ಆದರೆ ಅದನ್ನು ತೋರಿಸಲಿಲ್ಲ.

ಹಳ್ಳಿ ಬಹಳ ಬದಲಾದಂತೆ ತೋರಿತು. ಹಿಂದೆ ಬಸ್ ನಿಲ್ಲುತ್ತಿದ್ದ ಸ್ಥಳದಲ್ಲಿ ಸುಂದರವಾದ ಬಸ್‌ನಿಲ್ದಾಣ ಕಟ್ಟಲಾಗಿತ್ತು. ನಿಲ್ದಾಣದ ಪಕ್ಕವೇ 'ಶಾಂತಿಸಾಗರ್' ಎಂಬ ದೊಡ್ಡ ಹೋಟೆಲ್ ಇತ್ತು. ಅದರ ಪಕ್ಕ ಅಂಗಡಿಗಳ ಸಾಲುಗಳೇ ಇದ್ದವು. ಕ್ಯಾಸೆಟ್ ಅಂಗಡಿ, ಮೆಡಿಕಲ್ ಶಾಪ್, ಜೆರಾಕ್ಸ್ ಅಂಗಡಿ, ಬಟ್ಟೆ ಅಂಗಡಿ, ದಿನಸಿ ಅಂಗಡಿ... ನಿಲ್ದಾಣದ ಸಮೀಪದಲ್ಲಿ ಆಟೋಸ್ಟ್ಯಾಂಡ್ ಇತ್ತು.

''ಊರು ತುಂಬಾ ಬದಲಾಯಿಸಿದೆ'' ಎಂದುಕೊಂಡ ರಾಜೀವ.

''ಈ ಊರಿನಲ್ಲಿ ಇಷ್ಟು ದೊಡ್ಡ ಹೋಟೆಲ್ ಇರತ್ತೆ ಅನ್ನುವ ಕಲ್ಪನೆಯೇ ನನಗಿರಲಿಲ್ಲ. ಮೊದಲು ಕಾಫಿ ಕುಡಿಯೋಣ'' ಎಂದಳು ಭಾವನಾ. ರಾಧಮ್ಮನನ್ನು ಹೊರತುಪಡಿಸಿ ಎಲ್ಲರೂ ಕೆಳಗಿಳಿದರು.

ಅವರೆಲ್ಲಾ ಶಾಂತಿಸಾಗರ್ ಮೆಟ್ಟಲು ಹತ್ತುತ್ತಿದ್ದಂತೆ ಪ್ರೊಪ್ರೈಟರ್ ಜಾಗದಲ್ಲಿದ್ದ ವ್ಯಕ್ತಿ ಬಂದು ಶಿವರಾಮಯ್ಯನವರ ಕಾಲಿಗೆರಗಿದ. ''ಸಾರ್, ನೀವು ಬರುವ ವಿಚಾರ ಮೊದಲೇ ತಿಳಿಸಬಾರದಿತ್ತಾ? ನಾನೇ ಬೆಂಗಳೂರಿಗೆ ಬಂದು ಕರ್‍ಕೊಂಡು ಬರ್‍ತಿದ್ದೆ.''

''ಇದ್ದಕ್ಕಿದ್ದ ಹಾಗೆ ಹೊರಟೆವು. ನಿನಗೆ ತಿಳಿಸಕ್ಕಾಗಲಿಲ್ಲ. ನೋಡು ನನ್ನ ಜೊತೆ ಯಾರು ಬಂದಿದ್ದಾರೆ!''

ಮಾಧವ ರಾಜೀವನನ್ನು ನೋಡುವುದಿರಲಿ, ರಾಜೀವನೇ ಬೆರಗುಗಣ್ಣಿನಿಂದ ಗೆಳೆಯನನ್ನು ನೋಡಿದ. ಸಿಲ್ಕು ಜುಬ್ಬಾ ಪೈಜಾಮ ಧರಿಸಿ, ನಾಲ್ಕು ಬೆರಳಿಗೂ ನಾಲ್ಕು ಉಂಗುರ ಧರಿಸಿದ್ದ ಮಾಧವನ ಮುಖ ಆರೋಗ್ಯದಿಂದ ಮಿನುಗುತ್ತಿತ್ತು. ಅವನ ದಟ್ಟ ಕ್ರಾಪ್‌ನಲ್ಲಿ ಬಿಳಿ ಬಣ್ಣದ ಕೂದಲುಗಳು ಇಣುಕಿ ನೋಡುತ್ತಿದ್ದವು. ಹಿಂದಿನ ನರಪೇತಲ ಮಾಧವ ಇವನೇನಾ ಅನ್ನಿಸಿತ್ತು.

ಮಾಧವ ಹಾರ್ದಿಕವಾಗಿ ಗೆಳೆಯನನ್ನು ಅಪ್ಪಿದ. ''ಬನ್ನಿ ಮನೆಗೆ ಹೋಗೋಣ... ಅಲ್ಲೇ ಕಾಫಿ ಕುಡಿದರಾಯ್ತು.''

ರಾಜೀವ ಮಾಧವನ ಕಾರು ಏರಿದ. ಉಳಿದವರು ಟಾಟಾ ಸುಮೋ ಹತ್ತಿದರು. ಕಾರು ಊರಿನ ಹೊರವಲಯದಲ್ಲಿದ್ದ ದೊಡ್ಡ ಬಂಗಲೆಯ ಮುಂದೆ ನಿಂತಿತು. ವಾಚ್‌ಮನ್ ಬಾಗಿಲು ತೆರೆದು ಸಲಾಮು ಹೊಡೆದ. ಬಂಗಲೆಯ ಮುಂದಿದ್ದ ತೋಟ ತುಂಬಾ ಚೆನ್ನಾಗಿತ್ತು. ಎಲ್ಲ ರೀತಿಯ ಗಿಡಮರಗಳೂ ಅಲ್ಲಿದ್ದವು. ಬಂಗಲೆಯ ಅಂದ ಹೆಚ್ಚಿಸಲು ಸುಂದರವಾದ ಪೋರ್ಟಿಕೋ ಇತ್ತು.

ಮಾಧವನ ತಾಯಿ ಶಿವರಾಮಯ್ಯ-ರಾಧಮ್ಮನನ್ನು ನೋಡಿ ಸಂಭ್ರಮ ಪಟ್ಟರು. ಹೆಂಗಸರು ಅಡಿಗೆಮನೆ ಸೇರಿದರು. ಹತ್ತು ನಿಮಿಷಗಳಲ್ಲಿ ಬಿಸಿ ಬಿಸಿ ಕಾಫಿ ಬಂತು. ಕಾಫಿ ಕುಡಿದ ಶಿವರಾಮಯ್ಯ, ಸಂಜೀವ ಸುತ್ತಾಡಿಕೊಂಡು ಬರಲು ಹೊರಟರು.

''ನಮ್ಮ ಊರು ತುಂಬಾ ಬದಲಾಗಿದೆ ಅಲ್ವಾ? ಚೆನ್ನೇಗೌಡ ಎಂ.ಎಲ್.ಎ. ಆದಮೇಲೆ ಊರಿನ ಸ್ವರೂಪಾನ್ನೇ ಬದಲಾಯಿಸಿಬಿಟ್ಟ.''

''ಹೌದು. ಹಳ್ಳೀಂತ ಹೇಳುವ ಹಾಗೇ ಇಲ್ಲ.''

''ಹಳ್ಳಿಯ ಸ್ವರೂಪ ಬದಲಾದರೂ, ಜನ ಬದಲಾಗಲಿಲ್ಲ ನೋಡು.''

''ಬಷೀರ್, ದೇವದಾಸ್, ಮುರಳಿ, ಸೀತಾರಾಮ್, ಸಿದ್ದೇಗೌಡ ಹೇಗಿದ್ದಾರೆ ?''

''ಎಲ್ಲರೂ ಚೆನ್ನಾಗಿದ್ದಾರೆ. ದೇವದಾಸ್ ಮಾತ್ರ ಕ್ಯಾನ್ಸರ್‌ನಿಂದ ಹೋಗಿಬಿಟ್ಟ.''

''ದೇವದಾಸ್ ಹೋಗಿ ಎಷ್ಟು ವರ್ಷಗಳಾದವು ?''

''ಹೋದವರ್ಷ ಹೋಗಿಬಿಟ್ಟ. ಅವನು ಆಯುರ್ವೇದಿಕ್ ಮೆಡಿಸನ್ ಓದ್ಕೊಂಡು ಬಂದು ಹಳ್ಳಿಯಲ್ಲೇ ಕ್ಲಿನಿಕ್ ತೆಗೆದಿದ್ದ. ಚೆನ್ನಾಗಿ ಸಂಪಾದನೆಯೂ ಇತ್ತು. ಆದರೆ ಅವನ ಕಾಯಿಲೆ ಅವನನ್ನು ತಿಂದುಬಿಡ್ತು. ಅವನ ಹೆಂಡ್ತಿ ಎಲಿಸಾನೂ ಡಾಕ್ಟರ್. ಅವರು ಇಲ್ಲೇ ಇದ್ದು ಮಕ್ಕಳನ್ನು ನೋಡಿಕೊಂಡು ಕ್ಲಿನಿಕ್ ನಡೆಸ್ತಿದ್ದಾರೆ. ಅತ್ತೆ-ಮಾವನ್ನ ತಮ್ಮ ಜೊತೆಯಲ್ಲೇ ಇಟ್ಟುಕೊಂಡಿದ್ದಾರೆ.''

ರಾಜೀವ ಮೌನದ ಸ್ನೇಹ ಮಾಡಿಕೊಂಡ. ದೇವದಾಸ್ ಕೂಡ ಡಾಕ್ಟರಾಗಿದ್ದ ಎನ್ನುವ ಸಂಗತಿಯೇ ಅವನ ಮನಸ್ಸಿಗೆ ಹಿಂಸೆ ಉಂಟುಮಾಡಿತು. 'ಈ ಊರಿನಲ್ಲಿ ನಾನೊಬ್ಬನೇ ವಿದ್ಯಾವಂತ ಅಂದು ಕೊಂಡಿದ್ದೆ. ದೇವದಾಸನೂ ಈ ಪಟ್ಟಿಗೆ ಸೇರಿದನಲ್ಲಾ ?' ಎನ್ನಿಸಿತು.



''ನೀನು ಹೇಗಿದ್ದೀಯ ಮಾಧವ ?''

''ನಾನೀಗ ತುಂಬಾ ಅನುಕೂಲವಾಗಿದ್ದೇನೆ. ತಂಗಿಯರನ್ನು ಒಳ್ಳೆಯ ಕಡೆ ಕೊಟ್ಟು ಮದುವೆ ಮಾಡಿದ್ದೇನೆ. ನನ್ನ ಹೆಂಡತಿ ವಿಜಯ ತುಂಬಾ ಒಳ್ಳೆಯವಳು. ನನ್ನ ಯಾವ ಕೆಲಸಕ್ಕೂ ಅಡ್ಡಿ ಬರಲ್ಲ. ಹೋಟೆಲ್ ಲೆಕ್ಕದ ವಹಿವಾಟು ಅವಳದೇ. ನನ್ನ ತಮ್ಮ ಗೋಪಾಲನಿಗೆ ಬೆಂಗಳೂರಿನಲ್ಲಿ ಒಂದು ಪೆಟ್ರೋಲ್ ಬಂಕ್ ಹಾಕ್ಕೊಟ್ಟಿದ್ದೇನೆ. ನನ್ನದೇ ಒಂದು ದಿನಸಿ ಅಂಗಡೀನೂ ಇದೆ. ಅದನ್ನು ನನ್ನ ತಂಗಿ ರುಕ್ಮಿಣಿಯ ಗಂಡ ನೋಡಿಕೊಳ್ತಾರೆ. ಈ ಸಂತಸದ ದಿನಗಳಲ್ಲಿ ಅಪ್ಪ ನಮ್ಮ ಜೊತೆ ಇಲ್ಲವಲ್ಲಾ - ಅನ್ನುವುದೇ ಬೇಸರದ ಸಂಗತಿ.''

''ನಿಮ್ಮ ತಂದೆ ಹೋದಾಗ ನಿನಗೆಷ್ಟು ವರ್ಷ ?''

''ಇಪ್ಪತ್ತು ವರ್ಷ. ನಮ್ಮನೆ ವಿಚಾರ ನಿಂಗೇ ಗೊತ್ತಲ್ಲ. ಅಪ್ಪ ನನ್ನನ್ನು ಮುಂದೆ ಓದಿಸಲಿಲ್ಲ. ಅವರ ಜೊತೆ ಪೌರೋಹಿತ್ಯಕ್ಕೆ ಹೋಗ್ತಿದ್ದೆ. ಒಂದು ಸಲ ಪಕ್ಕದ ಹಳ್ಳಿಯಿಂದ ನಡೆದು ಬರುವಾಗ ಅಪ್ಪ ಹಾವು ಕಚ್ಚಿ ಹೋಗಿಬಿಟ್ರು. ಆಮೇಲೆ ಯಾರೂ ನನ್ನನ್ನು ಪೌರೋಹಿತ್ಯಕ್ಕೇ ಕರೆಯುತ್ತಿರಲಿಲ್ಲ. 'ಚಿಕ್ಕಹುಡುಗ, ಅವನೇನು ಮಾಡಿಸ್ತಾನೆ' ಅಂತಿದ್ರು. ನನ್ನ ತಾಯಿ, ತಮ್ಮ ತಂಗಿಯರ ಜವಾಬ್ದಾರಿ ನನ್ನ ಮೇಲಿತ್ತು .''

''ನಿನಗೆ ಕೆಲಸ ಸಿಕ್ಕಿತ್ತಾ ? ಎಷ್ಟು ಸಂಬಳ ಬರ್‍ತಿತ್ತು ?'' ರಾಜೀವ ಕೇಳಿದ.

''ಏನೂ ಇಲ್ಲ. ಒಂದು ದಿನ ನಿಮ್ಮ ತಂದೆ ನಮ್ಮ ಮನೆಗೆ ಬಂದು ಒಂದು ಸಾವಿರ ರೂಪಾಯಿ ಕೊಟ್ಟು ಹೇಳಿದರು: ''ಇದರಲ್ಲಿ ಏನಾದ್ರೂ ಶುರುಮಾಡು. ಯಾವ ಕಾರಣಕ್ಕೂ ನಿಮ್ಮ ಮನೆಯವರನ್ನು ಉಪವಾಸ ಕೆಡವಬೇಡ'' ಎಂದರು.

''ನೀನೇನು ಮಾಡಿದೆ ?''

''ನಿಜ ಹೇಳಬೇಕೂಂದ್ರೆ ಅವರೆಗೆ ಅಷ್ಟು ಹಣವನ್ನು ನಾನು ಒಟ್ಟಿಗೆ ನೋಡೇ ಇರಲಿಲ್ಲ. ನಾನು ನಮ್ತಾಯಿ ಬಹಳ ಯೋಚಿಸಿ ಬೆಳಗಿನ ಹೊತ್ತು ಮನೆಯಲ್ಲೇ ಇಡ್ಲಿ-ಚಟ್ನಿ ಮಾಡಿ ಮಾರಲು ಶುರುಮಾಡಿದೆವು. ಬೇಕಾದವರು ಬಂದು ತಗೊಂಡು ಹೋಗ್ತಿದ್ರು. ಆಮೇಲೆ ಸಾಂಬಾರು ಮಾಡಕ್ಕೆ ಶುರುಮಾಡಿದೆವು. ವ್ಯಾಪಾರ ಕುದುರ್‍ತು. ಶ್ಯಾನುಭೋಗರು ಒಂದು ದೊಡ್ಡಮನೆ ಬಾಡಿಗೆಗೆ ಕೊಡಿಸಿದರು. ಮಧ್ಯಾಹ್ನ ಹುಳಿಯನ್ನ, ಚಿತ್ರಾನ್ನ, ವಾಂಗಿಬಾತ್ ಜೊತೆಗೆ ಮೊಸರನ್ನ ಮಾಡಕ್ಕೆ ಶುರುಮಾಡಿದೆವು. ನನ್ನ ತಂಗಿಯರು ತುಂಬಾ ಸಹಾಯ ಮಾಡ್ತಿದ್ರು. ಒಟ್ಟಿನಲ್ಲಿ ಶಾಂತಮ್ಮನ ಹೋಟೆಲ್ ಪ್ರಸಿದ್ಧವಾಗಿ ಹೋಯ್ತು.''

''ಆದ್ರೆ ಇಷ್ಟೊಂದು ವಹಿವಾಟು ಹೇಗೆ ಸಾಧ್ಯವಾಯ್ತು ?''

''ಒಂದು ದಿನ ಮಂಗಳೂರಿನವರೊಬ್ಬರು - ಕೃಷ್ಣಭಟ್ ಅಂತ ಅವರ ಹೆಸರು - ನನ್ನನ್ನು ಹುಡುಕಿಕೊಂಡು ಬಂದರು. ತಮ್ಮ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಿದ್ರು. ವ್ಯಾಪಾರ ಕುದುರಿಸಲಿಕ್ಕೆ ಸಹಾಯ ಮಾಡಿದ್ರು.''

''ನೀನು ತುಂಬಾ ಲಕ್ಕಿ .''

''ಹೌದು. ನಿಮ್ತಂದೆಯ ಆಶೀರ್ವಾದದಿಂದ ಲಕ್ಷಾಂತರ ರೂಪಾಯಿ ವಹಿವಾಟು ನಿರ್ವಹಿಸುವಂತಾಗಿದೆ. ನಮ್ತಾಯಿಯನ್ನು ನೆಮ್ಮದಿಯಿಂದ ನೋಡಿಕೊಳ್ಳಕ್ಕೆ ಅವಕಾಶವಾಗಿದೆ.''

ಮೈಮೇಲೆ ಮುಳ್ಳಿದ್ದಂತಹ ಅನುಭವವಾಯಿತು ರಾಜೀವನಿಗೆ. ತನ್ನ ಹಾಗೆ ಓದಲಿಲ್ಲ - ದೇಶಬಿಟ್ಟು ಹೋಗಲಿಲ್ಲ - ಆದರೂ ಅದೆಷ್ಟು ಸುಖವಾಗಿದ್ದಾನೆ! ಎಂತಹ ಬಂಗಲೆ ಕಟ್ಟಿಸಿದ್ದಾನೆ! ಕೈಗೊಬ್ಬ ಕಾಲಿಗೊಬ್ಬ ಆಳಿದ್ದಾರೆ. ಮುಖ್ಯವಾಗಿ ನೆಮ್ಮದಿ ಇದೆ. ನಾನಲ್ಲಿ ಬೆಳಿಗ್ಗೆಯಿಂದ ರಾತ್ರಿಯವರೆಗೂ ದುಡಿಯಬೇಕು. ಬದುಕು ಯಾಂತ್ರಿಕವಾಗಿಬಿಟ್ಟಿದೆ. ಥು ನನ್ನನ್ನು ನಾನು ಗ್ರೇಟ್ ಅಂದ್ಕೊಂಡಿದ್ದೆನಲ್ಲಾ ?''

''ಬಷೀರ್ ಎಲ್ಲಿದ್ದಾನೆ ?''

''ದುಬೈನಲ್ಲಿದ್ದಾನೆ. ಎರಡು ವರ್ಷಕ್ಕೊಂದು ಸಲ ಬರ್‍ತಾನೆ. ಅವನ ತಮ್ಮನಿಗೆ ಗ್ಯಾರೇಜ್ ಇಟ್ಕೊಟ್ಟಿದ್ದಾನೆ. ಅವನ ಹೆಂಡತಿ ಟೀಚರ್. ಇದೇ ಊರಲ್ಲೇ ಇದ್ದಾರೆ.''

ರಾಜೀವನ ಅಹಂಕಾರದ ಬಲೂನಿಗೆ ಮತ್ತೊಂದು ತೂತು ಬಿತ್ತು. ಈ ಹಳ್ಳಿಯಿಂದ ತಾನೊಬ್ಬನೇ ಫಾರಿನ್‌ಗೆ ಹೋಗಿರುವುದು ಎಂದು ಬೀಗುತ್ತಿದ್ದವನಿಗೆ ಬಷೀರನೂ ಹೋಗಿದ್ದಾನಲ್ಲಾ ಎಂದು ಸಂಕಟವಾಯಿತು.

''ಬರ್‍ತೀಯಾ ರಾಜು. ಒಂದು ರೌಂಡ್ ಹೋಗಿಬರೋಣ.''

''ಭಾವನಾನೂ ಬರ್‍ತಾಳೇಂತ ಕಾಣತ್ತೆ.''

''ಭಾವನಾ, ವಿಜಯಾ, ಮಕ್ಕಳು ಹೊರಟಾಯಿತು. ಅವರು ಊರೆಲ್ಲಾ ಸುತ್ತಾಡಿ ಬರ್‍ತಾರೆ. ನಿಮ್ಮ ತಾಯಿ-ನಮ್ಮ ತಾಯಿ ಮಾತಾಡ್ತಾ ಕುಳಿತಿದ್ದಾರೆ. ಅವರ ಮಾತು ಈ ದಿನ ಮುಗಿಯಲ್ಲ. ನಡಿ ನಾವು ಹೋಗೋಣ.''

ರಾಜೀವ, ಮಾಧವನ ಜೊತೆ ಹೊರಟ. ದಾರಿಯಲ್ಲಿ ಒಂದಿಬ್ಬರು ಮಾತನಾಡಿಸಿದರು. ಅವರ ಗುರುತು ರಾಜೀವನಿಗೆ ತಿಳಿಯಲಿಲ್ಲ. ತಾವು ಓದಿದ್ದ ಹೈಸ್ಕೂಲು ಬಳಿ ಬಂದಾಗ ಮಾಧವ ಹೇಳಿದ, ''ಈಗ ಈ ಸ್ಕೂಲು ಎಷ್ಟು ಬದಲಾಗಿದೆ ನೋಡು. ಚೆನ್ನೇಗೌಡ ತಾನು ಓದಿದ

ಸ್ಕೂಲೂಂತ ತುಂಬಾ ಸಹಾಯ ಮಾಡಿದ್ದಾನೆ. ರಿಪೇರಿ ಮಾಡಿಸಿದ್ದಾನೆ, ರೂಮುಗಳನ್ನು ಕಟ್ಟಿಸಿದ್ದಾನೆ, ಮಕ್ಕಳಿಗೆ ಎಲ್ಲಾ ಅನುಕೂಲ ಮಾಡಿಕೊಟ್ಟಿದ್ದಾನೆ.''

''ವೆರಿಗುಡ್, ವೆರಿಗುಡ್'' ಎಂದ ರಾಜೀವ.

''ನಾವು ವಿದ್ಯೆ ಕಲಿತ ಶಾಲೆಗೆ ಇಷ್ಟೂ ಮಾಡದಿದ್ರೆ ಹೇಗೆ ಅಂತಾನೆ ಚೆನ್ನೇಗೌಡ. ನಿಂಗೆ ಸಿದ್ದೇಗೌಡನ ನೆನಪಿದೆಯಾ ?''

''ಹುಂ.. ಮರ ಹತ್ತುವುದರಲ್ಲಿ ನಿಪುಣ...''

''ಅವನೀಗ ಎಲ್ಲಿದ್ದಾನೆ ಗೊತ್ತಾ? ಬಾಂಬೇಲಿ ಬಿಸಿನೆಸ್ ಮಾಡ್ತಿದ್ದಾನೆ. ಎಕ್ಸ್‌ಪೋರ್ಟ್-ಇಂಪೋರ್ಟ್ ಬಿಸಿನೆಸ್ ಅಂತಾನೆ. ವರ್ಷಕ್ಕೊಂದು ಸಲ ಬರ್ತಾನೆ ಇಲ್ಲಿ. ಅವನ ತೆಂಗಿನತೋಟ, ಮನೆಯಿದೆ. ಬಹಳ ಜೋರಾಗಿದ್ದಾನೆ.''

''ಐ ಸೀ'' ಹೊಟ್ಟೆಯಲ್ಲಿ ಮೆಣಸಿನಕಾಯಿ ಕಲಿಸಿದ ಅನುಭವ.

''ಮುಂದಿನವರ್ಷ ನಮ್ಮ ಶಾಲೆಯ ಶತಮಾನೋತ್ಸವ. ನಾವೆಲ್ಲಾ ಒಂದೊಂದು ಲಕ್ಷ ಹಾಕ್ತೇವೆ. ಚೆನ್ನೇಗೌಡ ಎಷ್ಟು ಹಾಕ್ತಾನೋ ಗೊತ್ತಿಲ್ಲ.''

''ನೀನೂ ಹಾಕು'' ಎಂದು ಅವನು ಹೇಳಲಿಲ್ಲ, ತಕ್ಷಣ ರಾಜೀವನಿಗೆ ತಮ್ಮ ಬಾಲ್ಯದ ಘಟನೆಯೊಂದು ನೆನಪಾಯಿತು. ಅವನು ಕಾಲೇಜಿನಲ್ಲಿದ್ದಾಗ ಒಮ್ಮೆ ಊರಿಗೆ ಬಂದಿದ್ದ. ಟೆಂಟ್‌ನಲ್ಲಿ ರಾಜಕುಮಾರ್ ಅಭಿನಯದ ಸಿನಿಮಾ ನಡೆಯುತ್ತಿತ್ತು. ಎಲ್ಲರಿಗೂ ಸಿನಿಮಾ ನೋಡುವ ಆಸೆ. ಆದರೆ ಯಾರ ಹತ್ತಿರವೂ ದುಡ್ಡಿರಲಿಲ್ಲ. ರಾಜೀವನೇ ಗೊಣಗಿಕೊಂಡು ತನ್ನ ಸ್ಕಾಲರ್‌ಶಿಪ್ ಹಣದಿಂದ ಎಲ್ಲರನ್ನೂ ಕರೆದುಕೊಂಡುಹೋಗಿ ಸಿನಿಮಾ ತೋರಿಸಿದ್ದ. ಆ ಕಾಲವೆಲ್ಲಿ ಈ ಕಾಲವೆಲ್ಲಿ? ನಾನು ಅಮೆರಿಕಾದಲ್ಲಿ ಡಾಲರ್ ಎಣಿಸ್ತಿರುವ ಡಾಕ್ಟರ್. ನಾನು ಸಾವಿರ-ಲಕ್ಷದ ಬಗ್ಗೆ ಮಾತಾಡಿದರೂ ಆಶ್ಚರ್ಯವಿಲ್ಲ, ಆದರೆ ಇಲ್ಲಿದ್ದುಕೊಂಡು ಇವರೆಲ್ಲಾ ಲಕ್ಷ, ಐವತ್ತು ಸಾವಿರ ಅನ್ನುತ್ತಾರಲ್ಲಾ?'' ಅನ್ನಿಸಿತು.

''ಮುರಳಿ ಏನ್ಮಾಡ್ತಿದ್ದಾನೆ ?''

''ನಿನ್ನನ್ನು ಈಗ ಅವನ ಹತ್ತಿರಾನೇ ಕರ್‍ಕೊಂಡು ಹೋಗ್ತಿದ್ದೇನೆ. ಅವನು ಅವನ ಹೆಂಡತಿ ಶಾರದ 'ಶಾರದಾನಿಕೇತನ ಬೋರ್ಡಿಂಗ್ ಶಾಲೆ' ಅನ್ನುವುದನ್ನು ನಡೆಸ್ತಿದ್ದಾರೆ. ೬ನೇ ತರಗತಿಯಿಂದ ೧೦ನೇ ತರಗತಿಯವರೆಗಿನ ಮಕ್ಕಳು ಅವನ ಶಾಲೆಯಲ್ಲಿದ್ದಾರೆ. ಸ್ಕೂಲು ತುಂಬಾ ಚೆನ್ನಾಗಿ ನಡೆಯುತ್ತಿದೆ.''

''ಮುರಳಿಗೆ ಬೋರ್ಡಿಂಗ್ ಶಾಲೆ ಆರಂಭಿಸುವಷ್ಟು ಹಣ ಎಲ್ಲಿ ಸಿಕ್ಕಿತು ?''

''ಮುರಳಿ ಬಿ.ಎಸ್ಸಿ, ಬಿ.ಎಡ್. ಮಾಡಿ ಬೆಂಗಳೂರಿನ ಪ್ರೈವೇಟ್ ಶಾಲೆಯೊಂದರಲ್ಲಿ ಕೆಲಸ ಮಾಡ್ತಿದ್ದ. ತುಂಬಾ... ಒಳ್ಳೆಯ ಮ್ಯಾಥ್ಸ್ ಟೀಚರ್ ಅಂತ ಹೆಸರು ಗಳಿಸಿದ್ದ. ಅಲ್ಲಿ ಅವನಿಗೆ ಶಾರದಾಳ ಪರಿಚಯವಾಯಿತು. ಇಬ್ಬರೂ ಪ್ರೀತಿಸಿ ಮದುವೆಯಾದರು. ಆ ಶಾಲೆಯ ಮ್ಯಾನೇಜ್‌ಮೆಂಟ್‌ನಲ್ಲಿ 'ರಾಮಪ್ರಸಾದ್' ಅಂತ ಒಬ್ಬರಿದ್ದರು. ಆತನಿಗೆ ವಯಸ್ಸಾಗಿತ್ತು. ಆದರೆ ಅವರಲ್ಲಿ ಅದ್ಭುತ ಆಲೋಚನೆಗಳಿದ್ದವು. ಅವರಿಗೆ ಮುರಳಿ-ಶಾರದಾರ ಕೆಲಸ ಮೆಚ್ಚುಗೆಯಾಗಿತ್ತು. ಅವರಿಗೆ ಅಪಾರವಾದ ಆಸ್ತಿ ಇತ್ತು. ಅವರ ಮಾರ್ಗದರ್ಶನದಲ್ಲಿ ಈ ಶಾಲೆ ಆರಂಭವಾಯಿತು. ಅವರು ಹಣ ಸಾಲಕೊಟ್ಟರು. ಮುರಳಿ ವರ್ಷಕ್ಕೆ ಒಂದು ಲಕ್ಷದ ಹಾಗೆ ತೀರಿಸ್ತಾ ಬಂದ.''

''ರೆಸಿಡೆನ್ಷಿಯಲ್ ಶಾಲೆಯಾಗಿರುವುದರಿಂದ ತುಂಬಾ ಡೊನೇಷನ್ ಕಲೆಕ್ಟ್ ಮಾಡ್ತಿರಬಹುದು.''

''ಡೊನೇಷನ್ ಕಲೆಕ್ಟ್ ಮಾಡ್ತಿದ್ದಾನೆ ನಿಜ. ಆದರೆ ಹಾಗೆ ಕೆಲವು ಫ್ರೀ ಸೀಟುಗಳನ್ನೂ ಕೊಡ್ತಿದ್ದಾನೆ. ದೇವದಾಸ್ ಮಕ್ಕಳು ಇದೇ ಶಾಲೆಯಲ್ಲಿದ್ದಾರೆ. ಒಟ್ಟು ೫೦೦ ಮಕ್ಕಳಿದ್ದಾರೆ.''

ಆ ವೇಳೆಗೆ ಕಾರು ಶಾಲಾ ಆವರಣ ಪ್ರವೇಶಿಸಿತು. ಸುಮಾರು ೧೫ ಎಕರೆ ಭೂಮಿಯಲ್ಲಿ ಶಾಲೆಯ ಕಟ್ಟಡವಿತ್ತು. ಸುತ್ತಲೂ ಸುಂದರವಾದ ತೋಟ, ಆಟದ ಮೈದಾನವಿತ್ತು.

''ಮೊದಲು ಶಾಲೆ, ಹಾಸ್ಟಲ್ ನೋಡಿ ಬರೋಣ. ನಿನಗೆ ಮುರಳಿಯ ಕೆಲಸದ ಬಗ್ಗೆ ಒಂದು ಐಡಿಯಾ ಬರುತ್ತೆ. ಆಮೇಲೆ ಮುರಳೀನ್ನ ಭೇಟಿಯಾಗೋಣ.''

ರಾಜೀವ ಮಾಧವನ ಜೊತೆ ಹೊರಟ. ವಿಶಾಲವಾದ ಶಾಲಾ ಕೊಠಡಿಗಳು, ಮಕ್ಕಳಿಗೆ ಕುಳಿತುಕೊಳ್ಳಲು ಅಂದವಾದ ಡೆಸ್ಕ್‌ಗಳು, ನೀರಿನ ವ್ಯವಸ್ಥೆ, ಶೌಚಾಲಯ ವ್ಯವಸ್ಥೆ, ಕಂಪ್ಯೂಟರ್ ರೂಂ, ಗ್ರಂಥಾಲಯ, ರೀಡಿಂಗ್ ರೂಂ - ಎಲ್ಲಾ ಚೆನ್ನಾಗಿತ್ತು. ಹಾಸ್ಟೆಲ್ ಕೂಡ ತುಂಬಾ ಚೆನ್ನಾಗಿತ್ತು. ಒಂದು ಕೊಠಡಿಯಲ್ಲಿ ಇಪ್ಪತ್ತು ಮಕ್ಕಳು ಮಲಗುವ ವ್ಯವಸ್ಥೆ ಇತ್ತು. ದೊಡ್ಡ ಅಡಿಗೆಮನೆ, ಅಂದವಾದ ಡೈನಿಂಗ್‌ಹಾಲ್ – ಪ್ರತಿಯೊಂದೂ ಚೆನ್ನಾಗಿತ್ತು.

''ಸಾಯಂಕಾಲದ ಹೊತ್ತು ಯೋಗ, ಕರಾಟೆ, ಸಂಗೀತ ಕಲಿಯುವ ಏರ್ಪಾಡು ಇದೆ. ಈ ವರ್ಷ ಜಿಮ್ನಾಷಿಯಮ್ ಆರಂಭಿಸಬೇಕೂಂತ ಇದ್ದಾನೆ. ಐನೂರು ಮಕ್ಕಳಲ್ಲಿ ಸುಮಾರು ಐವತ್ತು ಮಂದಿ ಫ್ರೀ ಸೀಟುಗಳಿಗೆ ಆಯ್ಕೆಯಾದವರು. ಆದರೆ ಯಾರು ಫ್ರೀಯಾಗಿ ಓದ್ತಿದ್ದಾರೆ ಅನ್ನುವುದು ಯಾರಿಗೂ ತಿಳಿದಿರಲ್ಲ'' ಅವರಿಬ್ಬರೂ ಆಫೀಸ್ ರೂಂ ಪ್ರವೇಶಿಸಿದರು. ಸೆಕ್ರೆಟರಿ ಎನ್ನುವ ಫಲಕ ಹೊತ್ತಿದ್ದ ಟೇಬಲ್ ಬಳಿ ಕುಳಿತಿದ್ದ ಮುರಳಿ ಹಾರಿಬಂದು ಗೆಳೆಯನನ್ನು ಅಪ್ಪಿದ.

''ಅಭಿನಂದನೆಗಳು ಮುರಳಿ. ರಿಯಲಿ ಯೂ ಆರ್ ಗ್ರೇಟ್ !''

''ಇದು ನನ್ನ ಕನಸಿನ ಶಾಲೆ ರಾಜು. ನೀನು ಬೆಂಗಳೂರಿಗೆ ಓದಲು ಹೋದಾಗ ನನಗೆಷ್ಟು ದುಃಖವಾಗಿತ್ತು ಗೊತ್ತಾ ? ಮೆರಿಟ್ ಇದ್ದರೂ ಎಂ.ಬಿ.ಬಿ.ಎಸ್. ಓದುವ ಅವಕಾಶ ಇಲ್ಲವಲ್ಲಾಂತ ಬೇಜಾರಾಗಿತ್ತು. ನನ್ನಂತೆ ಬೇರೆ ಮಕ್ಕಳಿಗೆ ಆಗಬಾರದೂಂತ ಈ ಶಾಲೆ ತೆಗೆದೆ. ಶ್ರೀಮಂತರಿಂದ ಡೊನೇಷನ್ ವಸೂಲು ಮಾಡ್ತೇನೆ. ಆದರೆ ಆ ಹಣದಿಂದ ಬಡಮಕ್ಕಳಿಗೆ ಓದಲು ಸಹಾಯ ಮಾಡ್ತೀನಿ. ಒಟ್ಟನಲ್ಲಿ ನನಗೆ ನನ್ನ ಕೆಲಸದ ಬಗ್ಗೆ ತೃಪ್ತಿಯಿದೆ.''

''ನಿಮ್ಮ ತಂದೆ-ತಾಯಿ ಈಗ ಎಲ್ಲಿದ್ದಾರೆ ?''

''ನಮ್ಮನೆಯಲ್ಲೇ ಇದ್ದಾರೆ. ನನ್ನನ್ನು ಅವರು ಬಹಳ ಕಷ್ಟಪಟ್ಟು ಓದಿಸಿದ್ದರು. ನಾನು ಇವತ್ತು ಏನಾದರೂ ಸಾಧಿಸಿದ್ದರೆ ಅದಕ್ಕೆ ಅವರೇ ಕಾರಣ !''

ರಾಜೀವನಿಗೆ ಕಪಾಳಕ್ಕೆ ಹೊಡೆದಂತಾಯಿತು. ಒಂದು ರೀತಿಯ ಅಪರಾಧಿ ಮನೋಭಾವ ಅವನನ್ನು ಕಾಡಿತು.

ಮಧ್ಯಾಹ್ನ ಊಟವಾದ ಮೇಲೆ, ಮಾಧವ ರಾಜೀವನಿಗೆ ಮಲಗುವ ವ್ಯವಸ್ಥೆ ಮಾಡಿಕೊಟ್ಟು ಹೇಳಿದ, ''ಒಂದರ್ಧಗಂಟೆ ಮಲಗು. ಐದುಗಂಟೆಗೆ ನರಸಿಂಹದೇವರ ಗುಡಿಗೆ ಹೋಗುವ ಪ್ರೋಗ್ರಾಂಯಿದೆ. ರಾತ್ರಿ ತಿಂಡಿ ತಿಂದುಕೊಂಡು ಎಂಟೂವರೆಗೆ ಬೆಂಗಳೂರಿಗೆ ಹೋಗೋದೂಂತ ತೀರ್ಮಾನವಾಗಿದೆ.''

ರಾಜೀವ ಅಂಗಾತ ಮಲಗಿ ತಿರುಗುತ್ತಿದ್ದ ಫ್ಯಾನ್‌ಗೆ ಮುಖವೊಡ್ಡಿದ. ಗೆಳೆಯರ ನೆನಪಾದಾಗ ಅವನಿಗೆ ತನ್ನ ಬಗ್ಗೆ ಅಸಹ್ಯ ಮೂಡಿತು. 'ನಾನು ಜೀವನದಲ್ಲಿ ಏನು ಸಾಧಿಸಿದ್ದೇನೆ ? ಅಪ್ಪ ಓದಿಸಿದರು, ಓದಿದೆ. ಮಾವ ವಿದೇಶಕ್ಕೆ ಕಳುಹಿಸಿದರು, ಹೋದೆ. ನನ್ನಲ್ಲಿ ಸಾಕಷ್ಟು ಹಣವಿದೆ. ಆದರೆ ನೆಮ್ಮದಿಯಿದೆಯೇ ? ಇವರೆಲ್ಲಾ ಎಷ್ಟು ವಾತ್ಸಲ್ಯಮಯಿಗಳು ! ಎಷ್ಟು ಸಂತೋಷವಾಗಿದ್ದಾರೆ ! ನನಗೆ ನನ್ನ ತಂದೆ-ತಾಯಿಯ ಬಗ್ಗೆ ಜನ್ಮಕೊಟ್ಟ ದೇಶದ ಬಗ್ಗೆ ಪ್ರೀತಿ ಇಲ್ಲ, ಅಮೆರಿಕಾದಲ್ಲಿ ಬೆಳೆಯುತ್ತಿರುವ ಈಗಿನ ಕಾಲದ ಮಕ್ಕಳು ತಂದೆ-ತಾಯಿ ಜೊತೆ ಸೌಹಾರ್ದಯುತ ಸಂಬಂಧ ಇಟ್ಟುಕೊಳ್ಳುತ್ತಾರೆಯೆ? ನಾನಾದರೂ ಸುಖವಾಗಿದ್ದೇನೆಯೆ ? ಇತ್ತ ಭಾರತೀಯನೂ ಅಲ್ಲ - ಅತ್ತ ವಿದೇಶಿಯನೂ ಅಲ್ಲದ ಅತಂತ್ರ ಬಾಳು ನನ್ನದು. ನಾನು ನನ್ನ ತಪ್ಪು ತಿದ್ದಿಕೊಳ್ಳಬೇಕು.'

ರಾತ್ರಿ ಎಂಟೂವರೆಗೆ ಅವರು ಹಳ್ಳಿ ಬಿಟ್ಟರು. ಮಲಗುವ ಮೊದಲು ಭಾವನಾ ಕೇಳಿದಳು : ''ಯಾಕೆ ತುಂಬಾ ಮೌನವಾಗಿದ್ದೀರ ?''

''ಭಾವನಾ, ನಮ್ಮ ಮಕ್ಕಳನ್ನು ಮುರಳಿಯ ಶಾಲೆಗೆ ಸೇರಿಸೋಣವಾ ?''

''ನೀವು ಈ ಮಾತು ಹೇಳ್ತಿದ್ದೀರಾ ?''

''ಹೌದು. ಮಕ್ಕಳು ನಮ್ಮ ದೇಶದಲ್ಲೇ ಬೆಳೆಯಬೇಕು. ನಾವೂ ಆದಷ್ಟು ಬೇಗ ಇಂಡಿಯಾಕ್ಕೆ ವಾಪಸ್ಸು ಬಂದು, ಹಳ್ಳಿಯಲ್ಲಿ ಸೆಟ್ಲ್ ಆಗಿ, ಜನರ ಸೇವೆ ಮಾಡೋಣ. ಏನಂತೀಯಾ ?''

ಭಾವನಾ ಮಾತನಾಡದೆ ನಕ್ಕಳು.

''ಯಾಕೆ ನಗ್ತಿದ್ದೀಯ ಭಾವನಾ ? ನನ್ನ ಮಾತಿನಲ್ಲಿ ನಂಬಿಕೆ ಇಲ್ವಾ ?''

''ನಾನು ಖುಷಿಯಿಂದ ನಗ್ತಿದ್ದೇನೆ. ನಿಮ್ಮ ಮನಸ್ಸಿನಲ್ಲಿ ಇಂಡಿಯಾ ಬಗ್ಗೆ ಇಷ್ಟು ಪ್ರೀತಿ ಚಿಗುರೊಡೆದರೆ ಸಾಕು. ಯಾವತ್ತಾದರೂ ನಾವು ವಾಪಸ್ಸು ಬರಬಹುದು !''

''ಭಾವನಾ, ನಿನ್ನನ್ನು ಕೇಳದೆ ಒಂದು ಕೆಲಸ ಮಾಡಿದ್ದೇನೆ.''

''ಏನದು ?''

''ನಮ್ಮ ಶಾಲೆಯ ಶತಮಾನೋತ್ಸವಕ್ಕೆ ಅಪ್ಪನ ಹೆಸರಿನಲ್ಲಿ ಎರಡು ಲಕ್ಷ ರೂಪಾಯಿ ಕೊಡ್ತೇನೀಂತ ಹೇಳಿದ್ದೀನಿ. ಏನು ಹೇಳ್ತೀಯಾ ?''

ಭಾವನಾ ಮಾತಾಡಲಿಲ್ಲ, ಮುಗುಳ್ನಕ್ಕಳು. ಅವಳ ಕಣ್ಣಂಚಿನಲ್ಲಿ ನಿಂತಿದ್ದ ಹನಿಗಳನ್ನು ರಾಜೀವ ಗಮನಿಸಿದ. ಅವನು ಮಾತನಾಡದೆ ಅವಳನ್ನಪ್ಪಿಕೊಂಡ. ಮಾತಿಗಿಂತ ಮೌನ ಹಿತವಾಗಿತ್ತು.

ಸಿ. ಎನ್. ಮುಕ್ತಾ
೧೧೨೬, ಗೀತಾರಸ್ತೆ, ಚಾಮರಾಜಪೇಟೆ, ಮೈಸೂರು - ೫೭೦೦೦೪

## ಮೃತ್ಯುಂಜಯ ರುಮಾಲೆ

# ನಾನು ಬಡವನಯ್ಯ ಮತ್ತು ನಾನೇಕೆ ಬಡವ ? ಒಂದು ಚಿಂತನೆ

ಬಸವಣ್ಣನವರು ನಾನು ಬಡವನಯ್ಯ ಎಂದರೆ,
ಪುರಂದರದಾಸರು ನಾನೇಕೆ ಬಡವ ? - ಎಂದು ಸವಾಲು ಹಾಕುತ್ತಾರೆ.
ಇವರು ವಸ್ತುತಃ ಬಡವರಾದರೂ ಮನಸ್ಸಿನಿಂದ ಶ್ರೀಮಂತರು !
ಇವರ ಮಾತುಗಳು ನಮ್ಮನ್ನು ಜೀವನಾನುಭವದ ಕಡೆಗೆ ಒಯ್ಯುತ್ತವೆ !

'ಉಳ್ಳವರು ಶಿವಾಲಯವ ಮಾಡುವರು, ನಾನೇನು ಮಾಡಲಿ ಬಡವನಯ್ಯಾ ?' ಎಂದು ಬಸವಣ್ಣನವರೂ, 'ನಾನೇಕೆ ಬಡವನು, ನಾನೇಕೆ ಪರದೇಶಿ... ?' ಎಂದು ಪುರಂದರದಾಸರೂ ಕ್ರಮವಾಗಿ ತಮ್ಮ ವಚನ ಮತ್ತು ಕೀರ್ತನೆಯಲ್ಲಿ ಹೇಳುತ್ತಾರೆ. ಪ್ರಶ್ನಾರ್ಥಕ ಚಿಹ್ನೆಯಿಂದ ಕೊನೆಗೊಳ್ಳುವ ಈ ಎರಡೂ ವಾಕ್ಯಗಳು ವಾಚ್ಯಾರ್ಥವನ್ನು ಒಳಗೊಂಡಿಲ್ಲವೆಂಬುದು ಸ್ಪಷ್ಟವಾಗಿದೆ. ಬಸವಣ್ಣ – ನಾನು ಬಡವನಯ್ಯ ಎನ್ನುತ್ತಾನೆ, ನಿಜ. ಆದರೆ ಅದು ಎಲ್ಲಾ ಇದ್ದು ಇರುವ ಬಡತನವಾಗಿದೆ. ಒಂದು ರಾಜ್ಯದ ಮಂತ್ರಿಯಾದವನು ಬಡವನಾಗಿರಲಾರ, ಅವನು ಶ್ರೀಮಂತನೇ ! ಎಂಬುದು ಲೋಕ ನಂಬುವ ವಿಚಾರ. ಬಸವಣ್ಣನವರದು, ಲೋಕದ ಅಂದರೆ ಸಮಾಜದ ಯಾವುದೇ ಭೌತಿಕ ಮತ್ತು ಲೌಕಿಕ ಆಸೆ-ಆಮಿಷಗಳಿಗೆ ಬಲಿಕೊಡದ ಮನಸ್ಸು. ಎಲ್ಲವೂ ವ್ಯರ್ಥವಾಗಿ ಹೋಗುವ ಆಸ್ತಿ-ಸಂಪತ್ತುಗಳನ್ನು ಆ ಮನಸ್ಸು ತ್ಯಜಿಸುತ್ತದೆ. ಆದ್ದರಿಂದ ಬಸವಣ್ಣ ಸಮಾಜದ ಬಹುಸಂಖ್ಯಾತ ವರ್ಗದ ಪ್ರತಿನಿಧಿಯೂ ಆಗಿ ಚಿಂತಿಸುತ್ತಿರುವುದರಿಂದ ಆ ವರ್ಗಕ್ಕೆ ಸಲ್ಲದ ಸಂಪತ್ತು ಅವನದಾಗಿಲ್ಲ. ಆದ್ದರಿಂದ ಅವಾವನ್ನೂ ಮೈಗಂಟಿಸಿಕೊಳ್ಳದೇ ಇರುವ ಏಕಾಕಿತನದ ಬಡತನವನ್ನು ಬಸವಣ್ಣ ಹೊಂದಿದ್ದಾನೆ. ದಾಸರು, 'ನಾನೇಕೆ ಬಡವನು ?' ಎಂದು ಪ್ರಶ್ನಿಸುತ್ತಿರುವುದಾದರೂ ವಾಸ್ತವವಾಗಿ ಸಮಾಜವನ್ನೇ. ಎಲ್ಲ ಸುಖ ಅನುಕೂಲಗಳನ್ನು ತ್ಯಜಿಸಿ ಏನೂ ಇರದ ಬಡತನವೇ ದಾಸರದಾಗಿದ್ದರೂ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ಸಾಕ್ಷಾತ್ ವಿಷ್ಣುವೇ ನನ್ನ ಹೃದಯ ಸಿಂಹಾಸನದಲ್ಲಿರುವಾಗ ನಾನು ಬಡವನೇಕೆ ? ನಾನು ಹೇಗೆ ಬಡವನಾದೆ ? – ಎಂಬುದು ದಾಸರ ವಾದ.

ಈ ಎರಡೂ ಮಾತುಗಳು ಧ್ವನಿಪೂರ್ಣವಾಗಿವೆ. ಇಲ್ಲಿ ಬಳಸಿರುವ ಬಡತನ ಎಂಬ ಎರಡೂ ಶಬ್ದಗಳಿಗೆ ಲೋಕ ಪ್ರಕಾರದ ನಿಘಂಟಿನ ಅರ್ಥವಿಲ್ಲ. ಪಾರಮಾರ್ಥಿಕ ಅರ್ಥಗಳಿವೆ. ಇವು ಮೇಲ್ನೋಟಕ್ಕೆ ಹೇಳುವ ಅರ್ಥಕ್ಕಿಂತಲೂ ವಿಭಿನ್ನವಾಗಿ ಅಂದರೆ ವ್ಯತಿರಿಕ್ತವಾಗಿ ಅರ್ಥೈಸುತ್ತವೆ. ಇವು ಏನು ಹೇಳುತ್ತಿವೆಯೋ ಅವೇ ಆಗಿಲ್ಲ ಎಂಬುದಿಲ್ಲಿ ತಿಳಿಯುತ್ತದೆ. ಇಲ್ಲಿ ನಮಗೆ ಮುಖ್ಯವಾಗ ಬೇಕಾದುದು, ಲೋಕದ ತಿಳುವಳಿಕೆಯಲ್ಲಿರುವ 'ಬಡತನ'ದ ವ್ಯಾಖ್ಯೆಯನ್ನು ಇವು ಏಕೆ ತಲೆಕೆಳಗೆ ಮಾಡುತ್ತವೆ ಎಂಬುದು.

ಲೋಕ ಹೇಳುವ ಬಡತನವೇ ಒಂದಾದರೆ ಈ ಇಬ್ಬರು ಹೇಳುತ್ತಿರುವ ಬಡತನ ಮತ್ತೊಂದಾಗಿದೆ. ಏಕೆಂದರೆ, ಇಂಥವರು ಲೋಕ ನಂಬಿದ ಸ್ಥಾಪಿತ ವ್ಯಾಖ್ಯೆಯನ್ನು ನಂಬಲಾರರು. ಇವರು ಚಿಕಿತ್ಸಕ ಬುದ್ಧಿಯಿಂದ ಎಲ್ಲವನ್ನೂ ಪ್ರಶ್ನಿಸಿ ಪರೀಕ್ಷಿಸುವ ಮನಸ್ಸು ಉಳ್ಳವರು. ಆದ್ದರಿಂದ ಇವರಿಗೆ ದರ್ಶನ ಲಭ್ಯವಾಗುವುದು ಸಾಮಾನ್ಯತ್ವದಲ್ಲಿ. ದಾಸರು – 'ನನಗೆ ತಂದೆಯಾಗಿ ನೀನಿದ್ದಿಯಾ. ಆದರೆ ನಿನಗೆ ತಂದೆ ಯಾರು ? ನೀನು ಅನಾಥ, ನೀನು ಪರದೇಸಿ, ನಾನು ಸ್ವದೇಸಿ, ನಾನೇಕೆ ಬಡವನು ?' ಎಂದು ಹರಿಯನ್ನು ಕುರಿತು ಹೇಳುವ ಈ ನಿಂದಾಸ್ತುತಿಯಲ್ಲಿ ಸಾಮಾನ್ಯತ್ವದ ಚಿಂತನೆಯಿದೆ. ಇವರೀರ್ವರಿಗೆ ನಿರ್ಭೀತಗುಣವನ್ನು ಕೊಟ್ಟಿರುವುದು ಬಡತನವೇ ! ಇವರಿಗೆ ಎಲ್ಲವೂ ಸ್ಪಷ್ಟವಾಗಿ, ಮುಗ್ಧವಾಗಿ, ನೇರವಾಗಿ, ಪ್ರಾಮಾಣಿಕವಾಗಿ ಕಾಣುತ್ತಿರುವುದು ದೇಹದ ಬಡತನದಿಂದ ಮತ್ತು ಮನಸ್ಸಿನ ಶ್ರೀಮಂತಿಕೆಯಿಂದ.

ಬಸವಣ್ಣನವರು ಕಾಯಕ-ದಾಸೋಹಗಳ ಮೂಲಕ ಬಡತನಕ್ಕೆ ಒಂದು ಧೈರ್ಯ ತಂದುಕೊಟ್ಟವರು. ಪುರಂದರದಾಸರಾದರೂ ತಮ್ಮ ಪೂರ್ವಾಶ್ರಮದ ಜಿಪುಣತನವನ್ನು ಬಿಟ್ಟು ಎಲ್ಲ ಆಸ್ತಿಯನ್ನು ದಾನ ಮಾಡಿದ್ದು ಸಮಾಜವನ್ನು ಸಮಾನಗೊಳಿಸಲು.

'ಬಡತನವು ನನಗಿರಲಿ ಭಾಳ ಮಕ್ಕಳಿರಲಿ ! ಮೇಲೆ ಗುರುವಿನ ಕರುಣೆ ಇರಲಿ' – ಎಂಬ ಮಾತಿನಲ್ಲಿ ಇಡೀ ಬದುಕು ಶ್ರೀಮಂತಿಕೆಯ ವೈಭವಕ್ಕೆ ಬಲಿಯಾಗಿ ದಾರಿ ತಪ್ಪದಂತೆ ಮಾಡಿಕೊಂಡ ಒಂದು ಎಚ್ಚರಿಕೆಯ ಮಾತು ಆಗಿರಬಹುದಲ್ಲವೇ !

ಆದ್ದರಿಂದ ದಾಸರು ಮತ್ತೊಂದು ಕಡೆ, 'ಬಡತನವೆಂಬುದು ಕಡೆತನಕಿರಲಿ' ಎಂದಿದ್ದಾರೆ. ಬಡತನ ಜೀವನಾನುಭವವನ್ನು ತರುತ್ತದೆ. ಬದುಕನ್ನು ಸಮೀಪದಿಂದ ಪರಿಚಯಿಸುತ್ತದೆ. ಬಸವಣ್ಣನವರ ಮತ್ತು ಪುರಂದರದಾಸರ ಮಾತುಗಳು ಆರ್ಥಿಕ ಶ್ರೀಮಂತಿಕೆ ಅಥವಾ ಆರ್ಥಿಕ ಬಡತನವನ್ನು ಕುರಿತಾದುವಲ್ಲ. ಆರ್ಥಿಕ ಸೌಲಭ್ಯದ ನಡುವೆಯೂ ಬಡತನದ ನೆನಪು ಸಮಗ್ರ ಬದುಕಿನ ವಾಸ್ತವಿಕ ಸತ್ಯವನ್ನು ಅರಿಯಲು ನೆರವು ನೀಡುತ್ತದೆ – ಎಂಬ ಆಶಯ ಇಲ್ಲಿದೆ. ಆದ್ದರಿಂದ 'ನಾನು ಬಡವನಯ್ಯಾ' ಮತ್ತು 'ನಾನೇಕೆ ಬಡವನು ?' ಎಂಬ ಮಾತುಗಳು ನಮ್ಮನ್ನು ಜೀವನಾನುಭವದ ಕಡೆಗೆ ಒಯ್ಯುತ್ತವೆ.

ಮೃತ್ಯುಂಜಯ ರುಮಾಲೆ
ವಿಜಯನಗರ ಕಾಲೇಜ್, ಹೊಸಪೇಟೆ - ೫೮೩ ೨೦೧




ನಗರಗೆರೆ ರಮೇಶ್

ಭಾರತೀಯರ ಜೀವನದಲ್ಲಿ ರಾಮಾಯಣ, ಮಹಾಭಾರತ ಮಹಾಕಾವ್ಯಗಳು ಕೇವಲ ಸಾಹಿತ್ಯ ಕೃತಿಗಳಾಗಿ ಮಾತ್ರವಲ್ಲದೆ ಧಾರ್ಮಿಕ, ಸಾಂಸ್ಕೃತಿಕ ದಾಖಲೆಗಳಾಗಿ ಮನೆ ಮಾಡಿಕೊಂಡಿರುವುದು ಹೊಸದಾಗಿ ಹೇಳಬೇಕಾದ ಮಾತೇನಲ್ಲ. ಅದೇ ಸಮಯದಲ್ಲಿ ಈ ಕೃತಿಗಳು ಸಾಮಾಜಿಕ ದಾಖಲೆಗಳಾಗಿಯೂ ಉಳಿಯುತ್ತವೆಂಬ ವಿಷಯವನ್ನು ಅವು ಕೇವಲ ಧಾರ್ಮಿಕ ಗ್ರಂಥಗಳೆಂದು ಪೂಜಿಸುವವರು ಮರೆಯುತ್ತಾರೆ. ಹಾಗೆ ನೋಡಿದರೆ ಈ ದೇಶದ ವೇದಗಳು, ಉಪನಿಷತ್ತುಗಳು, ದರ್ಶನಗಳೇ ಮುಂತಾದ ಪ್ರಾಚೀನ ಗ್ರಂಥಗಳೆಲ್ಲವೂ ಸಾಮಾಜಿಕ ಆಯಾಮವನ್ನು ಹೊಂದಿವೆ; ಆದರೆ ಈ ಅಂಶವು ಹಲವು ಸಂದರ್ಭಗಳಲ್ಲಿ ಓದುಗರ ಗಮನದಿಂದ ಆಚೆ ಉಳಿಯುತ್ತದೆ. ಇನ್ನೊಂದು ತುದಿಯಲ್ಲಿ ಈ ಮಹಾಕಾವ್ಯಗಳನ್ನು ಸಂಪೂರ್ಣವಾಗಿ ಚಾರಿತ್ರಿಕ ದಾಖಲೆಗಳೆಂದು ಹೇಳಿ ಅವುಗಳಲ್ಲಿನ ಪುರಾಣಕ್ಕೂ, ಚರಿತ್ರೆಗೂ ನಡುವಿನ ಅಂತರವನ್ನು ಇಲ್ಲವೆನ್ನಿಸಿ ಅದರ ಆಧಾರದ ಮೇಲೆ ಹೊಸ ಚರಿತ್ರೆಯನ್ನು ಸೃಷ್ಟಿಸಲು ಹೊರಡುವ ಪ್ರಯತ್ನಗಳನ್ನೂ ಈ ದೇಶ ಕಂಡಿದೆ. ಈ ಕೃತಿಗಳನ್ನು ಧಾರ್ಮಿಕ ಗ್ರಂಥಗಳೆಂದು ಭಾವಿಸಿ, ಮುಗ್ಧ ಭಕ್ತಿಪೂರ್ವಕವಾಗಿ ನಮಿಸುವ ಮಂದಿಗಿಂತಲೂ, ಅವುಗಳಲ್ಲಿ ಸಂಪೂರ್ಣವಾಗಿ ಚರಿತ್ರೆಯನ್ನು ಕಂಡು ಅದರ ಪುನಃ ಸೃಷ್ಟಿಗೆ ಹೊರಡುವವರು ಎಷ್ಟರಮಟ್ಟಿಗೆ ಅಪಾಯಕಾರಿಯಾದಾರು ಎಂಬುದು ಈಗಾಗಲೇ ಸಾಬೀತಾಗಿದೆ.

ರಾಮಾಯಣ ಕಥೆ ಭಾರತ ಹಾಗೂ ಅದರ ಸುತ್ತಮುತ್ತಲಿನ ದೇಶಗಳಲ್ಲಿ ಆಯಾ ಪ್ರಾಂತ್ಯದ ವಿಶಿಷ್ಟ ಗುಣಗಳಿಗನುಗುಣವಾಗಿ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ. ರಾಮ ಸೀತೆಯರು ದಂಪತಿಗಳಾಗಿದ್ದರೆಂಬ ಸಾಮಾನ್ಯ ಗ್ರಹಿಕೆಗೆ ವಿರುದ್ಧವಾಗಿ ಅವರಿಬ್ಬರೂ ಅಣ್ಣತಂಗಿಯರೆಂದೂ, ನಂತರ ಮದುವೆಯಾದರೆಂದೂ ಹೇಳುವ ಕಥೆಯೂ ಒಂದಿದೆ. ಇಷ್ಟೇ ಅಲ್ಲದೆ, ರಾಮಾಯಣದ ಕಥೆಯಲ್ಲಿ ಬರುವ ಹಲವು ಘಟನೆಗಳು, ಅವು ಘಟಿಸಿದ ಪ್ರದೇಶಗಳು – ಮುಂತಾದ ಅಂಶಗಳ ಬಗೆಗೂ ವಿಭಿನ್ನ ವಿಷಯಗಳು, ವ್ಯಾಖ್ಯಾನಗಳು ಲಭ್ಯವಿವೆ. ರಾಮ ರಾವಣರ ಯುದ್ಧವನ್ನು ದೇವರಾಕ್ಷಸರ ನಡುವಿನ ಯುದ್ಧವೆಂದು ಪರಿಗಣಿಸಿದ ರೀತಿಯಲ್ಲಿಯೇ ಆರ್ಯ ದ್ರಾವಿಡ ಯುದ್ಧ, ಅಥವಾ ಅರಣ್ಯವಾಸಿಗಳು ಮತ್ತು ನಗರ ವಾಸಿಗಳ ನಡುವಿನ ಯುದ್ಧವೆಂದು ವಿಶ್ಲೇಷಿಸಿದವರೂ ಇದ್ದಾರೆ. ಇಷ್ಟಾದರೂ, ಅದರಲ್ಲಿನ ಮುಖ್ಯ ಪಾತ್ರಗಳಾದ ರಾಮ, ಸೀತೆ, ಲಕ್ಷ್ಮಣ, ರಾವಣ ಮತ್ತು ಇನ್ನಿತರ ಪಾತ್ರಗಳ ಬಗ್ಗೆ ಕೆಲವು ಅಭಿಪ್ರಾಯಗಳಂತೂ ಭಾರತೀಯರಲ್ಲಿ ಗಟ್ಟಿಯಾಗಿ ನೆಲೆ ನಿಂತಿವೆ. ಈ ಪಾತ್ರಗಳು ಕೆಲವು ಗುಣಗಳಿಗೆ ಪ್ರತೀಕಗಳಾಗಿಯೇ ಈ ದೇಶದ ಸಾಮುದಾಯಿಕ ಪ್ರಜ್ಞೆಯಲ್ಲಿ ಒಂದಾಗಿದೆ. ಹೀಗಾಗಿ ಈ ಗ್ರಂಥದಲ್ಲಿಯೇ ಹಲವು ವಿಷಯಗಳು ಇಂಥ ಪಾರಂಪರಿಕ ಅರ್ಥೈಸುವಿಕೆಯ ವಿರುದ್ಧವೇ ಇದ್ದರೂ, ಈ ಗ್ರಂಥದ ಬಗೆಗಿನ ಧಾರ್ಮಿಕ ಶ್ರದ್ಧೆಯು ಅದರ ವಸ್ತುನಿಷ್ಠ ಪರಿಶೀಲನೆಗೆ ಅಡ್ಡಿಬರುವುದೇ ಹೆಚ್ಚು.




ಇಂಥ ಹೊಸ ರೀತಿಯ ಪರಿಶೀಲನೆಯನ್ನು ನಡೆಸುವ ಪ್ರಯತ್ನ ೧೯೭೩ರಲ್ಲಿ 'ರಾಮಾಯಣ ವಿಷವೃಕ್ಷಂ' ಎಂಬ ಹೆಸರಿನಲ್ಲಿ ತೆಲುಗಿನ ಹೆಸರಾಂತ ಲೇಖಕಿ ರಂಗನಾಯಕಮ್ಮನವರಿಂದ ನಡೆಯಿತು. ಆ ಹೊತ್ತಿಗಾಗಲೇ ಈ ದೇಶದ ಎಲ್ಲಾ ಭಾಷೆಗಳಲ್ಲಿಯೂ ರಾಮಾಯಣ ಪ್ರಕಟಗೊಂಡಿತ್ತು. ವಾಲ್ಮೀಕಿ ಬರೆದ ರೀತಿಗಿಂತಲೂ ವಿಭಿನ್ನ ರೀತಿಯ ರಾಮಾಯಣಗಳೂ ಸಹ ಬೆಳಕು ಕಂಡಿದ್ದವು. ಆದರೂ ಸಾಮಾನ್ಯ ನಂಬಿಕೆಯಾದ 'ಮರ್ಯಾದಾ ಪುರುಷೋತ್ತಮ', 'ಏಕಪತ್ನೀವ್ರತಸ್ಥ'ನಾದ ರಾಮನ ಸ್ಥಾನವಂತೂ ಅಲುಗಾಡಿರಲಿಲ್ಲ. ಈ ಮಾತನ್ನು ಈಗಿನ ಸಂದರ್ಭಕ್ಕೂ ಅನ್ವಯಿಸಿ ಹೇಳಬಹುದು. ಹೀಗೆ ಹೊಸದಾಗಿ ಬರೆದ ರಾಮಾಯಣಗಳಲ್ಲಿಯೂ ಮೂಲ ರಾಮಾಯಣದ ಕೆಲವು ಪಾತ್ರಗಳ, ಘಟನೆಗಳ ವಿಷಯದಲ್ಲಿ ವ್ಯತ್ಯಾಸಗಳು ಕಂಡುಬಂದರೂ ಒಟ್ಟಾರೆ ಉದ್ದೇಶವಂತೂ ರಾಮನನ್ನು ಅವತಾರ ಪುರುಷನೆಂದು ಚಿತ್ರಿಸುವುದೇ ಆಗಿತ್ತು. 'ವಿಷವೃಕ್ಷಂ' ಪ್ರಕಟನೆಗೊಳ್ಳುವ ಹೊತ್ತಿಗೆ ತೆಲುಗಿನಲ್ಲಿ ವಿಶ್ವನಾಥ ಸತ್ಯನಾರಾಯಣ ಅವರು ಬರೆದ 'ಶ್ರೀಮದ್ರಾಮಾಯಣ ಕಲ್ಪವೃಕ್ಷಮು' ಪ್ರಕಟಗೊಂಡಿತ್ತು. ಈ ಗ್ರಂಥಕ್ಕೆ ಜ್ಞಾನಪೀಠ ಪ್ರಶಸ್ತಿಯೂ ದೊರೆತಿದೆ. ಆದರೆ ರಂಗನಾಯಕಮ್ಮನವರ ಉದ್ದೇಶವು ರಾಮನನ್ನು ಒಬ್ಬ ವ್ಯಕ್ತಿಯಾಗಿ ನೋಡಿ, ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ವಿಶ್ಲೇಷಿಸುವುದಾಗಿದೆ. ಇಂಥ ಪ್ರಯತ್ನಕ್ಕೆ ತಕ್ಷಣದಲ್ಲಿಯೇ ವಿಭಿನ್ನ ಪ್ರತಿಕ್ರಿಯೆಗಳು ವ್ಯಕ್ತವಾದವು. ಸಂಪ್ರದಾಯವಾದಿಗಳು ಈ ಗ್ರಂಥವು ನಮ್ಮ ಸಂಸ್ಕೃತಿಯ ಮೇಲೆ ನಡೆದ ದಾಳಿ ಎಂದು ಟೀಕಿಸಿದರು. ಪ್ರಗತಿಪರರು ಈ ಪ್ರಯತ್ನವನ್ನು ಸ್ವಾಗತಿಸಿದರು. ರಾಮಾಯಣವನ್ನು ಒಂದು ಸಾಹಿತ್ಯ ಕೃತಿಯಾಗಿ ವಸ್ತುನಿಷ್ಠವಾಗಿ ನೋಡಬೇಕಾದರೆ ಇಂಥ ಗ್ರಂಥಗಳ ಆವಶ್ಯಕತೆ ಇದೆ ಎಂದು ಹೇಳಲಾಯಿತು.

೧೯೭೩ರ ನವೆಂಬರ್‌ನಿಂದ ೧೯೭೬ರ ಜುಲೈವರೆಗಿನ ಮಧ್ಯಕಾಲದಲ್ಲಿ 'ರಾಮಾಯಣ ವಿಷವೃಕ್ಷಂ'ನ ರಚನೆ ಮೂರು ಸಂಪುಟಗಳಲ್ಲಿ ನಡೆಯಿತು. ಈ ಮೂರೂ ಸಂಪುಟಗಳು ಬಿಡಿಬಿಡಿಯಾಗಿ ಹಲವು ಸಲ ಪುನರ್ಮುದ್ರಣಗೊಂಡಿವೆ. ಮೊದಲ ಎರಡು ಸಂಪುಟಗಳಿಗೂ ಲೇಖಕಿಯವರು ಸುದೀರ್ಘವಾದ ಮುನ್ನುಡಿಯನ್ನು ಬರೆದಿದ್ದು ಅದರಲ್ಲಿ ರಾಮಾಯಣ ಕಥೆ, ಆ ಕಾಲದ ಸ್ಥಿತಿಗತಿಗಳು, ಆ ಹಿನ್ನೆಲೆಯಲ್ಲಿ ಕಥೆಯಲ್ಲಿ ಕಂಡುಬರುವ ಪಾತ್ರಗಳು ಹಾಗೂ ಸನ್ನಿವೇಶಗಳನ್ನು ಕುರಿತಾದ ವಿವರವಾದ ವ್ಯಾಖ್ಯಾನ ಕಂಡುಬರುತ್ತದೆ. ಪೂರ್ತಿಯಾಗಿ ಆಡುಮಾತಿನ ಗದ್ಯದಲ್ಲಿ ಸಾಗುವ ಕಥಾ ನಿರೂಪಣೆಗೆ ಪೂರಕವಾಗಿ ಸಾಕಷ್ಟು ಅಡಿಟಿಪ್ಪಣಿಗಳನ್ನೂ ನೀಡಲಾಗಿದೆ. ಮೂರನೆಯ ಸಂಪುಟದ ಕೊನೆಯ ಭಾಗದಲ್ಲಿಯೂ ರಾಮಾಯಣಕ್ಕೆ ಸಂಬಂಧಿಸಿದ ಹಲವು ವಿಷಯಗಳನ್ನು ಚರ್ಚಿಸಲಾಗಿದೆ. ಈ ಮೂರು ಸಂಪುಟಗಳ ಗ್ರಂಥದ ಇಂಗ್ಲಿಷ್ ಅನುವಾದ ೨೦೦೪ರ ಆಗಸ್ಟ್ ತಿಂಗಳಲ್ಲಿ ಒಂದೇ ಸಂಪುಟವಾಗಿ ಹೊರಬಂದಿದೆ. ಅನುವಾದವನ್ನು ಬಿ.ಆರ್. ಬಾಪೂಜಿ, ಆರ್. ವೆಂಕಟೇಶ್ವರ ರಾವ್, ಆರಿ ಸೀತಾರಾಮಯ್ಯ ಹಾಗೂ ಸಿ. ಪದ್ಮಜ ಅವರು ಕೈಗೊಂಡಿದ್ದು Ramayana - The Poisonous Tree (Stories, Essays and Foot-notes) ಎಂಬ ಹೆಸರಿನಲ್ಲಿ ಪ್ರಕಟಗೊಂಡಿದೆ.

ರಂಗನಾಯಕಮ್ಮನವರು 'ವಿಷವೃಕ್ಷಂ' ಬರೆಯಲು ಮುಖ್ಯ ಪ್ರೇರಣೆಯಾಗಿ ತಮ್ಮ ಮೇಲೆ ಮಾರ್ಕ್ಸ್‌ವಾದದ ಪ್ರಭಾವವನ್ನು ಗುರುತಿಸುತ್ತಾರೆ. 'ನಾನು ಮಾರ್ಕ್ಸ್‌ವಾದವನ್ನು ಓದಿಲ್ಲದಿದ್ದರೆ ಈ ಪುಸ್ತಕವನ್ನು ಬರೆಯುತ್ತಿರಲಿಲ್ಲ'ವೆಂದು ತಮ್ಮ ಮುನ್ನುಡಿಯಲ್ಲಿ ಒಂದು ಕಡೆ ತಿಳಿಸುತ್ತಾರೆ. ಮಾರ್ಕ್ಸ್‌ವಾದದ ಈ ಪ್ರಭಾವದ ಗುರುತುಗಳು ಈ ಗ್ರಂಥದುದ್ದಕ್ಕೂ ಸ್ಪಷ್ಟವಾಗಿ ಸಿಗುತ್ತವೆ. ರಾಮಾಯಣ ಕಾಲದಲ್ಲಿ ಇದ್ದದ್ದು ಊಳಿಗಮಾನ್ಯ, ರಾಜವ್ಯವಸ್ಥೆ. ಆ ಕಾಲದ ಹಲವು ನಂಬಿಕೆಗಳು ಹಾಗೂ ಆಚರಣೆಗಳು ಈ ವ್ಯವಸ್ಥೆಯ ಪ್ರತಿಬಿಂಬಗಳು ಎಂದು ಲೇಖಕಿ ಉದಾಹರಣೆಗಳ ಮೂಲಕ ವಿವರಿಸುತ್ತಾರೆ. ವಾಲ್ಮೀಕಿಯು ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಕಥೆಗೆ ಧಾರ್ಮಿಕ ಲೇಪ ಹಚ್ಚಿ ರಾಮಾಯಣ ಕಾವ್ಯವನ್ನು ರಚಿಸಿದ್ದಾನೆಂಬುದು ರಂಗನಾಯಕಮ್ಮನವರ ದೃಢ ಅಭಿಪ್ರಾಯವಾಗಿದೆ. ಅಂದಿನ ವ್ಯವಸ್ಥೆಯನ್ನು ಎತ್ತಿ ಹಿಡಿಯುವುದಕ್ಕಾಗಿ ಈ ಧಾರ್ಮಿಕ ಬಣ್ಣವನ್ನು ಕಥೆಗೆ ಹಚ್ಚಲಾಗಿದೆ. ನಂತರದ ಕಾಲದಲ್ಲಿ ಹಲವರು ಈ ಕಾವ್ಯವನ್ನು ಆಧರಿಸಿ ಕೆಲವು ಬದಲಾವಣೆಗಳೊಂದಿಗೆ ಬರೆದ ರಾಮಾಯಣಗಳೂ ಈ ಮೂಲ ಉದ್ದೇಶವನ್ನೇ ಎತ್ತಿ ಹಿಡಿದವು. ಆದರೆ 'ರಾಮಾಯಣ ವಿಷವೃಕ್ಷಂ' ಈ ಎಲ್ಲ ರಾಮಾಯಣಗಳಿಗೂ ತೀರ ಬೇರೆಯೇ ಆದ ನೆಲೆಯಲ್ಲಿ ನಿಲ್ಲುತ್ತದೆ. ಪಾತ್ರಗಳು, ಸನ್ನಿವೇಶಗಳ ಬಗ್ಗೆ ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ಮಾಡಿದ ವಿಶ್ಲೇಷಣೆ ಒಪ್ಪಿತವಾದ ಹಲವು ಗ್ರಹಿಕೆಗಳನ್ನು ಪ್ರಶ್ನಿಸುತ್ತದೆ. ಮತ್ತು

ಈ ಎಲ್ಲ ಹೊಸ ವ್ಯಾಖ್ಯಾನಗಳಿಗೂ ಆಧಾರಗಳು ಮೂಲ ಕಥೆಯಲ್ಲಿಯೇ ಸಿಗುತ್ತವೆ ಎಂಬುದೂ ಇಲ್ಲಿ ಮುಖ್ಯ. ರಾಮನ ಪಿತೃವಾಕ್ಯಪರಿಪಾಲನೆ, ಸತ್ಯಸಂಧತೆ, ರಾಮರಾಜ್ಯ ಮುಂತಾದ ಕಲ್ಪನೆಗಳನ್ನು ನಿಶಿತವಾದ ಪರಿಶೀಲನೆಗೆ ಒಳಪಡಿಸಲಾಗಿದೆ.

ರಂಗನಾಯಕಮ್ಮನವರ ಮಾರ್ಕ್ಸ್‌ವಾದದ ಬಗೆಗಿನ ಒಲವು ಅವರು ಈ ಗ್ರಂಥದ ಎರಡು ಸಂಪುಟಗಳಿಗೆ ಬರೆದಿರುವ ಪೀಠಿಕೆಗಳಲ್ಲಿ ವ್ಯಕ್ತವಾಗುತ್ತದೆ. ಮಾರ್ಕ್ಸ್‌ವಾದದ ಮೂಲಪಾಠಗಳನ್ನು ತಿಳಿಯ ಬಯಸುವವರಿಗೆ ಈ ಪೀಠಿಕೆಗಳು ಹಲವು ವಿವರಗಳನ್ನು ಒದಗಿಸುತ್ತವೆ. ಅಷ್ಟೇ ಅಲ್ಲದೆ, ಈ ಸಿದ್ಧಾಂತವನ್ನು ಒಂದು ಸಾಹಿತ್ಯ ಕೃತಿಯನ್ನು ಅದರ ಎಲ್ಲ ಮಗ್ಗುಲುಗಳಿಂದ ವಿಶ್ಲೇಷಿಸಲು ಹೇಗೆ ಬಳಸಬಹುದು ಎಂಬುದೂ ಈ ಪೀಠಿಕೆಗಳ ಮೂಲಕ ಸ್ಪಷ್ಟವಾಗುತ್ತದೆ. ಮಾರ್ಕ್ಸ್‌ವಾದಿ ಮೂಲತತ್ವಗಳಾದ ಮಿಗುತಾಯ ಮೌಲ್ಯ ಮುಂತಾದ ಪರಿಕಲ್ಪನೆಗಳನ್ನೂ ತಮ್ಮ ಪರಿಣಾಮಕಾರಿ ತೆಲುಗಿನಲ್ಲಿ ಲೇಖಕಿ ವಿವರಿಸಿದ್ದಾರೆ. ಇಂಗ್ಲಿಷ್ ಅನುವಾದದಲ್ಲಿನ ಒಟ್ಟು ಏಳುನೂರ ಎಂಬತ್ತನಾಲ್ಕು ಪುಟಗಳಲ್ಲಿ ರಾಮಾಯಣ ಕಥೆಯು ಆರುನೂರು ಪುಟಗಳಲ್ಲಿದ್ದರೆ ಇನ್ನುಳಿದ ನೂರ ಎಂಬತ್ತನಾಲ್ಕು ಪುಟಗಳು ರಾಮಾಯಣ ಕಥೆಯ ವಿಶ್ಲೇಷಣೆ, ಮಾರ್ಕ್ಸ್‌ವಾದದ ಹಲವು ವಿವರಗಳು, ಕೆಲವು ಇತರ ರಾಮಾಯಣ ಕಾವ್ಯಗಳು, ಮತ್ತು ಸ್ಪಷ್ಟೀಕರಣಗಳಿಗೆ ಮೀಸಲಾಗಿವೆ. ಗ್ರಂಥದ ಈ ಭಾಗದಲ್ಲಿ ಪವಿತ್ರಗ್ರಂಥವೆಂದು ಹೇಳಲಾದ ರಾಮಾಯಣವನ್ನು ಈ ರೀತಿ ಹೊಸದಾಗಿ ಬರೆದು, ವಿಮರ್ಶೆಗೆ ಒಳಪಡಿಸಿದ್ದಕ್ಕಾಗಿ ತಮ್ಮ ವಿರುದ್ಧ ಆಗಲೇ ವ್ಯಕ್ತವಾಗಿದ್ದ, ಅಥವಾ ಮುಂದೆ ಬರಬಹುದಾದ ಟೀಕೆಗಳಿಗೂ ಉತ್ತರ ನೀಡಿದ್ದಾರೆ. ಕೆಲವರು ಪ್ರಗತಿಪರ ಲೇಖಕರೇ 'ವಿಷವೃಕ್ಷಂ' ಗ್ರಂಥವನ್ನು ವಿಮರ್ಶಿಸಿದ್ದೂ ಉಂಟು. ಆದರೆ ಅದು ರಾಮಾಯಣದ ಪಾವಿತ್ರ್ಯತೆಯನ್ನು ಈ ಗ್ರಂಥ ಹಾಳುಮಾಡಿದೆ ಎಂಬ ಕಾರಣಕ್ಕಾಗಿ ಅಲ್ಲ. ಇವುಗಳನ್ನೂ ಸಹ ರಂಗನಾಯಕಮ್ಮನವರು ಗ್ರಂಥದ ಕೊನೆಯಲ್ಲಿ ಪ್ರಸ್ತಾಪಿಸಿದ್ದಾರೆ. ಅಡಿ ಟಿಪ್ಪಣಿಗಳು ಸವಿವರವಾಗಿದ್ದು ಲೇಖಕಿಯರ ಅಭಿಪ್ರಾಯಗಳು ಹಾಗೂ ಅವುಗಳಿಗೆ ಆಧಾರಗಳನ್ನು ಸ್ಪಷ್ಟವಾಗಿ ನಮೂದಿಸುತ್ತವೆ. ನಮ್ಮ ಸಮಾಜವನ್ನು ಇನ್ನೂ ಆಳುತ್ತಿರುವ ಊಳಿಗಮಾನ್ಯ, ಪುರುಷ ಪ್ರಧಾನ, ಜಾತಿ ಆಧಾರಿತ ವಿಚಾರಗಳು ರಾಮಾಯಣದಲ್ಲಿಯೂ ಕಾಣಿಸಿಕೊಂಡಾಗ ಆ ಗ್ರಂಥವನ್ನು ಮತ್ತೊಮ್ಮೆ ಈ ದೃಷ್ಟಿಯಿಂದ ನೋಡಬೇಕು ಎನಿಸಿದರೆ ಅದರಲ್ಲಿ ಆಶ್ಚರ್ಯವಾಗಲಿ, ಅಪಚಾರವಾಗಲಿ ಇಲ್ಲ.

ಅನುವಾದದ ಬಗ್ಗೆ ಎರಡು ಮಾತು. ನಾಲ್ಕು ಜನ ಅನುವಾದಕರು ತುಂಬ ಶ್ರಮಪಟ್ಟು ಈ ಕೆಲಸವನ್ನು ಪೂರೈಸಿದ್ದಾರೆ. ಅದು ಪ್ರಶಂಸನೀಯ. ಆದರೆ ಕೆಲವು ಕಡೆ ಇಂಗ್ಲಿಷ್ ಭಾಷೆಯ ಬಳಕೆಯಲ್ಲಿ ತಪ್ಪುಗಳು ನುಸುಳಿದ್ದು ಓದುಗರು ನಡೆಯುವ ದಾರಿಯಲ್ಲಿ ಮುಳ್ಳುಗಳಾಗುತ್ತವೆ. ಮೂಲದಲ್ಲಿ ಬಳಸಲಾಗಿರುವ ತೆಲುಗಿನ ನುಡಿಗಟ್ಟನ್ನೇ ಅನುವಾದದಲ್ಲಿಯೂ ತರಲು ಪ್ರಯತ್ನಿಸಲಾಗಿದೆ. ಈ ಪ್ರಯತ್ನವು ಕಥಾನಿರೂಪಣೆಯಲ್ಲಿ ಮಾತ್ರವಲ್ಲದೆ, ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾದ ಭಾಗಗಳಲ್ಲಿಯೂ ಕಂಡುಬರುತ್ತದೆ. ಕಥೆಯನ್ನು ಹೇಳುವಂಥಾ ಸೃಜನಶೀಲ ಕ್ರಿಯೆಯಲ್ಲಿ ಮೂಲದ ನುಡಿಗಟ್ಟನ್ನು ಉಳಿಸಿಕೊಳ್ಳುವ ಹಲವು ಪ್ರಶಂಸನೀಯ ಉದಾಹರಣೆಗಳು ನಮ್ಮ ಮುಂದಿವೆ. ಆದರೆ ಪ್ರಬಂಧದ ರೀತಿಯ ಬರವಣಿಗೆಯಲ್ಲಿಯೂ ಇಂಥದೇ ಪ್ರಯತ್ನ ನಡೆದಲ್ಲಿ ಮೂಲದಲ್ಲಿ ಹೇಳಲಾದ ವಿಷಯ ಸ್ಪಷ್ಟವಾಗಿ ವ್ಯಕ್ತವಾಗುವುದಿಲ್ಲ. 'ವಿಷವೃಕ್ಷಂ'ನ ಇಂಗ್ಲಿಷ್ ಅನುವಾದದಲ್ಲಿಯೂ ಈ ತೊಡಕು ಕಂಡುಬರುತ್ತದೆ. ಅಲ್ಲದೆ, ಹಲವು ಕಡೆಗಳಲ್ಲಿ ಓದುಗರನ್ನು ಎದುರಿಸುವ ಮುದ್ರಾರಾಕ್ಷಸರು ಸರಾಗವಾದ ಓದಿಗೆ ತಡೆಯೊಡ್ಡುತ್ತಾರೆ. ಆದರೂ ವಿಷಯ ಆಸಕ್ತಿಕರವಾದ್ದರಿಂದ ಅದರ ಗ್ರಹಿಕೆಗಾಗಿಯಾದರೂ ಓದಲೇಬೇಕಾದ ಗ್ರಂಥ Ramayana - The Poisonous Tree. ತೆಲುಗಿನ ಪರಿಚಯವಿದ್ದರೆ, ಆ ಭಾಷೆಯ ಬಳಕೆ ಹೇಗಿದೆ ಎಂಬುದನ್ನು ತಿಳಿಯಲಾದರೂ ಮೂಲದಲ್ಲಿಯೇ ಓದುವುದು ಇನ್ನೂ ಹೆಚ್ಚು ತೃಪ್ತಿದಾಯಕವಾಗುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

**ನಗರಗೆರೆ ರಮೇಶ್**
ನಂ.೩೬೬, ೮ನೇ ಕ್ರಾಸ್, ೮ನೇ ಮೇನ್, ಪದ್ಮನಾಭನಗರ, ಬೆಂಗಳೂರು-೫೬೦೦೭೦



# ಗಣಪ ಮತ್ತು ಗಾಂಪ

■ ಪಿ.ಬಿ. ಪ್ರಸನ್ನ

**ನೀ**ವು ಯಾರಾದ್ರೂ ಉಚ್ಚಿಲದಲ್ಲಿ ಬಸ್ಸಿಳ್ದು, ''ಇಲ್ಲಿ ಗಣ್ಪ...'' ಅಂತ ಮಾತು ಮುಗ್ಸೂದ್ರೊಳ್ಗೆ ಅಲ್ಲಿರುವ ಜನ್ರು, ''ಯಾರು... ಗಣ್ಪತಿಯಾ ? ಗಾಂಪನಾ ?'' ಅಂತ ಕೇಳ್ತಾರೆ. ಗಣ್ಪತಿ ಅಂದ್ರೆ ಊರಿನ ದೇವ್ರು. ಗಾಂಪ ಅಂದ್ರೆ ಪೊಲ್ಯದ ಲೀಲಾವತಿಯ ಮಗ.

ಉಚ್ಚಿಲದಲ್ಲಿ ಬೇರೆ ಸುಮಾರು ದೇವಸ್ಥಾನಗಳು ಉಂಟು. ಆದ್ರೆ ಗಣ್ಪತಿಯಷ್ಟು ಫೇಮಸ್ ಯಾವ್ದೂ ಅಲ್ಲ. ಗಣ್ಪತಿ ಹೇಗೆ ಫೇಮಸ್ ಅಂದ್ರೆ,

''ಒಂದು ವರ್ಷ ತೇರು ನಡೀತಿತ್ತು ಮಾರ್ರೆ. ಜನ ಅಂದ್ರೆ ಜನ. ಭಯಂಕರ ರಶ್ಶು.... ರಥ ಎಳೀऽऽತಾ ಎಳೀऽऽತಾ ಇದ್ದ ಹಾಗೆ ಅದ್ರ ಅಟ್ಟೆ ಲಟಲಟಾಂತ ಸೌಂಡ್ ಮಾಡಿತು. ಜನ ಎಲ್ಲ ಹೋऽऽ ಅಂದ್ರು. ಏನಾದ್ರೂ ಅಟ್ಟೆ ಮುರ್ದು ಕೆಳ್ಗೆ ಬೀಳ್ತಿದ್ರೆ ಗ್ಯಾರಂಟಿ ಎಂಟ್ಹತ್ತು ಜನ ಫಡ್ಚ ಆಗ್ತಿದ್ರು. ಅಷ್ಟರಲ್ಲಿ ಕೃಷ್ಣಭಟ್ರು ಮಾ ಗಣ್ಪತೇ ಕಾಪಾಡು ಅಂತ ಬೊಬ್ಬೆ ಹೊಡ್ದ್ರು. ಅಟ್ಟೆ ಹಾऽऽಗೆ ನಿಂತದ್ದೆ ಮಾರ್ರೆ. ತೇರು ಗುತ್ತಿನ ಹತ್ರ ನಿಂತ ಮೇಲೆ ಎಲ್ರೂ ಒಮ್ಮೆ ಉಸ್ರು ಕೆಳಗೆ ಬಿಟ್ಟದ್ದು.''

''ನೋಡಿ... ಮಳೆಗಾಲ್ದಲ್ಲಿ ಸುತ್ತ ಇರುವ ಎರ್ಮಾಳು, ಕಾಪು, ಮೂಳೂರು ಎಲ್ಲ ಕಡೆ ಕಡ್ಲು ಕೊರೀತಾ ಮುಂದೆ ಬರ್ತದೆ, ಆದ್ರೆ ಉಚ್ಚಿಲದಲ್ಲಿ ಎಂಥದ್ದೂ ಆಗೂದಿಲ್ಲ... ಯಾಕೆ ಗೊತ್ತುಂಟಾ ? ಗಣ್ಪತಿಯ ಕಾರ್ಣಿಕ ಅದು.''

''ಊರಲ್ಲಿ ಯಾರ್ದಾದ್ರೂ ಎಂತಾದ್ರೂ ಕಳ್ದು ಹೋದ್ರೆ, ಕೊಟ್ಟಿಗೆಯಲ್ಲಿರುವ ಕೈ-ಕಂಜಿಗಳಿಗೆ ಎಂತಾದ್ರೂ ಆದ್ರೆ ಮಾ ಗಣ್ಪತೇ ನಿಂಗೆ ಪಂಚ್ಕಜ್ಜಾಯ ಮಾಡಿಸ್ತೇನೆ, ಕಡುಬು ಮಾಡಿಸ್ತೇನೆ, ಅಪ್ಪ ಮಾಡಿಸ್ತೇನೆ ಅಂತ ಹರ್ಕೆ ಹೇಳ್ಕೊಂಡ್ರೆ ಆಯ್ತು. ಎಲ್ಲ ಸಮಾऽऽ ಆಗ್ತದೆ' ಅಂತೆಲ್ಲ ಗಣ್ಪತಿಯ ಮೈಮೆಯ ಬಗ್ಗೆ ಹೇಳುವವ್ರು ಉಚ್ಚಿಲ ಬಸ್‌ಸ್ಟ್ಯಾಂಡಲ್ಲಿ, ಹೋಟ್ಳಲ್ಲಿ, ಗಡಂಗುಗಳಲ್ಲಿ ಸಿಗ್ತಾರೆ.

ಗೋವಿಂದ ಪೈಗಳು ಉಚ್ಚಿಲದ, 'ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿ'ಯ ಮ್ಯಾನೇಜರ್ರು. ಅವ್ರು ಹೇಳ್ತಾರೆ, ''ನಂಮ್ಮೇಳ ಎಲ್ಲಿ ಇರ್ತದೋ ಅಲ್ಲಿ ಭಾರೀ ಕಲೆಕ್ಷನ್. ಸುತ್ಮುತ್ತ ಎಲ್ಲೇ ಮಳೆ ಬರ್ಲಿ, ನಾವು ಟೆಂಟ್ ಹಾಕಿದಲ್ಲಿ ಒಂದು ಹನಿ ಬೀಳೂದಿಲ್ಲ. ಪುತ್ತೂರು ಜಾತ್ರೆ, ಉಡ್ಪಿ ಪರ್ಯಾಯ ಎಲ್ಲೇ ಆಗ್ಲಿ ಬೇರೆ ಮೇಳದವ್ರ ಜೊತೆ ನಮ್ಮ ಟೆಂಟ್ ಹಾಕಿದ್ರೆ ನಮ್ದಕ್ಕೇ ಕಲೆಕ್ಷನ್ ಜಾಸ್ತಿ. ಎಲ್ಲೂ ಕಲೆಕ್ಷನ್‌ಗೆ ಮೋಸ ಆಗಿದ್ದೇ ಇಲ್ಲ. ಯಾಕೆ ಗೊತ್ತುಂಟೋ ? ನಮ್ಮ ಮೇಳದ ದೇವ್ರು ಗಣ್ಪತಿ ಅಲ್ವಾ ಮಾರ್ರೆ? ಮೇಳ ಎಲ್ಲಿ ಇರ್ತದೋ ಅಲ್ಲೇ ಗಣ್ಪತಿಯೂ ಇರ್ತಾನೆ. ಅದಕ್ಕೇ ನಾನು ಚೌಕಿಯಲ್ಲಿ ಗಣ್ಪತಿಯನ್ನು ಇಡ್ಲಿಕ್ಕೆ ಭಾऽऽऽರಿ ಮಡೀऽऽಯಲ್ಲಿ ವ್ಯವಸ್ಥೆ ಮಾಡಿದ್ದೇನೆ. ಹ್ಹೆ... ಹ್ಹೆ... ಹ್ಹೆ... ದೇವ್ರನ್ನು, ಅದ್ರಲ್ಲೂ ನಮ್ಮ ಗಣ್ಪತಿಯನ್ನು ಬಿಡ್ಲಿಕ್ಕುಂಟಾ ಮಾರ್ರೆ ?'' ಇದು ಪೈಗಳ ಆಲೋಚ್ನೆ.

ಪೊಲ್ಯದ ಲೀಲಾವತಿಯ ಮಗನ ನಿಜ ಹೆಸ್ರು ಗಣಪ. ಆದ್ರೆ ದಡ್ಡ, ಪೆದ್ದ. ಅಲ್ದೆ ಆರೂವರೆ ಅಡಿ ಎತ್ರ, ದೊಡ್ಡ ಹೊಟ್ಟೆ, ಮೂರೂವರೆ ಅಡಿ ಅಗ್ಲ, ಗಿಡ್ಡ ಕುತ್ಗೆ, ಉಬ್ಬು ಹಲ್ಲಿನ ಇವ್ನನ್ನು ಎಲ್ರೂ ಗಾಂಪ ಅಂತ್ಲೇ ಕರೀತಿದ್ರು. ತಿನ್ಲಿಕ್ಕೆ ಕೂತ್ರೆ ಸೇರು ಅಕ್ಕಿ ಅನ್ನ ತಿಂದು 'ಇನ್ನೂ ಹಾಕಿ' ಅಂತಿದ್ದ. ಧನುರ್ವಾಯುವಿಂದ ನರಳ್ತಿದ್ದ ಗಂಡ, ಕಿತ್ತು ತಿನ್ನುವ ಬಡತನ, ಮಗನ ಹೊಟ್ಟೆಬಾಕತನ ಲೀಲಾವತಿಯನ್ನು ಕಂಗಾಲು ಮಾಡಿತ್ತು. ನಿತ್ಯವೂ ಖಾಲಿ ಪಾತ್ರೆ. ಕುಚ್ಚಿಗೆ ಅಕ್ಕಿ ಒಂದಿಷ್ಟು ಸಿಕ್ಕಿದ್ರೆ ಹೆಚ್ಚು. ಅದನ್ನು ಗಂಜಿ ಮಾಡಿದ್ರೆ, ಬೇಯ್ತಿದ್ದ ಹಾಗೆ ಗಾಂಪ ಬಟ್ಲು ಹಿಡ್ಕೊಂಡು ಬರ್ತಿದ್ದ. ಎಷ್ಟು ಬೇಯ್ಸಿ ಹಾಕಿದ್ರೂ ಅವ್ನಿಗೆ ಕಡ್ಮೆಯೇ. ಅದ್ಕೇ ಅವ್ಳು, ''ಹೋಗು ಉಚ್ಚಿಲ ಪೇಟೆಗೆ, ಅಲ್ಲಿ ಯಾರಾದ್ರೂ ನಿನ್ನ ಕಪ್ಪಲೆ ತುಂಬಿಸ್ತಾರೆ'' ಅಂತ ಬೈದು ಅವ್ನನ್ನು ಬೆಳಿಗ್ಗೆಯೇ ಪೇಟೆಗೆ ಕಳಿಸ್ತಿದ್ಲು.

ಗಾಂಪ ಶಾಲೆ ಮೆಟ್ಲು ಹತ್ತಿದ್ದ. ಆದ್ರೆ ಐದ್ನೇ ಕ್ಲಾಸಿಗೆ ಬರುವಾಗ್ಲೇ ಭಾರೀ ಸೋತಿದ್ದ, ಯಾಕಂದ್ರೆ ಪ್ರತೀ ಕ್ಲಾಸಲ್ಲೂ ಎರಡೆರ್ಡು ವರ್ಷ ಕೂತಿದ್ದ. ಶೀನಪ್ಪಯ್ಯ ಮೇಷ್ಟ್ರು ಒಂದು ಸಾರಿ, ''ಏ ಗಾಂಪಾ... ಎಂಟೆಂಟ್ಲೆ ಎಷ್ಟಾ?'' ಅಂತ ಕೇಳಿದ್ರು. ಅವ ಕೂಡ್ಲೆ, ''ಎಂಟೆಂಟ್ಲೆ ಅಜ್ಜಿಗೂಟ್ಲೆ!'' ಅಂದ. ಅವತ್ತೆ ಅವ್ನನ್ನು ಶಾಲೆಯಿಂದ ಹೊರ್ಗೆ ಹಾಕಿದ್ರು.

ಡೈಲಿ ಬೆಳಿಗ್ಗೆ ಗಾಂಪ, ಲೀಲಾವತಿಯಿಂದ ಬೈಸಿಕೊಂಡು ದೊಗಲೆ ಚಡ್ಡಿ, ದೊಡ್ಡ ಬನಿಯನ್ನು ಏರಿಸ್ಕೊಂಡು ಉಚ್ಚಿಲ ಪೇಟೆಗೆ ಬರ್ತಿದ್ದ. ಅಲ್ಲಿ ಅವ್ನಿಗೋಸ್ಕರ ಕಾದುಕೊಂಡು ಕೆಲವ್ರು ಇರ್ತಿದ್ರು. ಅವ್ರೆಂದ್ರೆ ಕಲಾಯಿ ಸಾಬ, ದೇವಸ್ಥಾನ್ದ ಕೃಷ್ಣಭಟ್ರು, ಮಯ್ಯರ ಹೋಟ್ಲಿನ ಸದಾನಂದ ಮಯ್ಯರು, ಕಟ್ಲೇರಿ ಅಂಗ್ಡಿಯ ಕಾಮತರು.

''ಗಾಂಪಾऽऽऽ ಒಂದ್ಹತ್ತು ಗೋಣಿ ಅಕ್ಕಿ ಹೊರಾऽऽ''

''ಏ... ಗಾಂಪಾSSS ದೇವಸ್ಥಾನಕ್ಕೆ ಇಪ್ಪತ್ತು ಗೋಣಿ ತೆಂಗಿನ್ಕಾಯಿ ಹೊರಾSSS''

''ಗಾಂಪಣ್ಣಾ... ಒಂದು ಎಂಟ್ಹತ್ತು ದೊಡ್ಡ ಪಾತ್ರೆಗಳುಂಟು. ತಗೊಂಡೋಗಿ ಕಾಪು ಮಾರಿಗುಡಿಗೆ ಹಾಕ್ಬೇಕು.''

''ಹೋಟ್ಲಿನ ಹಿಂದೆ ನೀರು ಸರೀ ಹೋಗ್ತಾ ಇಲ್ಲ. ಸ್ವಲ್ಪ ಮೋರಿಗಿಳ್ದು ಎಲ್ಲ ಕ್ಲೀನ್ ಮಾಡು ಆಯ್ತಾSSSS''

ಹೀಗೆ ಎಲ್ರೂ ಕೆಲ್ಸ ಹೇಳ್ತಿದ್ರು.

ಕೆಲ್ಸ ಹೇಳ್ತಿದ್ರೆ ಗಾಂಪ ಮಂಡೆ ತುರ್ಸಿಕೊಂಡು ''ಹ್ಹಿ... ಹ್ಹಿ... ಹ್ಹೆ...'' ಅಂತ ಹಲ್ಲು ಬಿಡ್ತಿದ್ದ. ಅವ್ನಿಗೆ ಬೇಕಾಗ್ತಿದ್ದದ್ದು ಹೊಟ್ಟೆ ತುಂಬ ತಿಂಡಿ ಅಥ್ವಾ ಊಟ. ಅದು ಎಲ್ರಿಗೂ ಗೊತ್ತಿತ್ತು. ಹಾಗಾಗಿ ಅವ್ರೆಲ್ಲ, ''ನಾ ಹೇಳಿದ ಕೆಲ್ಸ ಮಾಡಿದ್ರೆ ಮಯ್ಯರ ಹೋಟ್ಲಲ್ಲಿ ಐದು ಮಸಾಲೆ'', ''ದೇವಸ್ಥಾನ್ದಲ್ಲಿ ಮಧ್ಯಾಹ್ನ ಮೃಷ್ಟಾನ್ನ ಊಟ'' ಅಂತ ಅವ್ನಿಗೆ ಹೇಳ್ತಿದ್ರು. ಅವ್ರು ಅಷ್ಟು ಹೇಳಿದ್ರೆ ಸಾಕು. ಗಾಂಪ, ''ಧಿತ್ತೊಂಗ ಧಿಕು ತಕ ಥೈಯ ಥೈಯ ದಿನ ತಾ'' ಅಂತ ಕುಮ್ಚಟ್ಟು ಹಾಕಿ ಕ್ಷಣದಲ್ಲಿ ಕೆಲ್ಸ ಮುಗ್ಸಿ ''ಕೊಡಿ ತಿಂಡಿ!'' ಅಂತ ಹೇಳ್ತಿದ್ದ. ''ತಿನ್ಲಿಕ್ಕೆ ಕೊಡ್ತೇನೆ ಅಂತ ಹೇಳಿದ್ರೆ ಸಾಕು ಮಾರ್ರೆ ಬ್ರಮ್ಮರಕ್ಕಸ ರೋಮ ಸರ್ತ ಮಾಡಿದ ಹಾಗೆ ಕೆಲ್ಸ ಮುಗಿಸ್ತಾನೆ'' ಅಂತ ಜನ ಹೇಳ್ತಿದ್ರು.

ಆಟ ನೋಡುದು ಮತ್ತು ಚೆಂದದ ಹುಡುಗಿಯರನ್ನು ನೋಡ್ತಾ ನಿಲ್ಲುದು ಗಾಂಪನ ಮುಖ್ಯ ಚಟಗಳಾಗಿದ್ವು. ಉಚ್ಚಿಲ ಮಾಗಣೆಯ ಆಸುಪಾಸು ಎಲ್ಲೇ ಆಟ ಇರ್ಲಿ ಅಲ್ಲಿ ಗಾಂಪ ಹಾಜರ್. ಹಗ್ಲಲ್ಲಿ ಪೇಟೆಯಲ್ಲಿ ಏನೂ ಕೆಲ್ಸ ಸಿಕ್ಕದಿದ್ರೆ ಸೀದ ಆಟ ನಡಿಯುವ ಜಾಗಕ್ಕೆ ಹೋಗ್ತಿದ್ದ. ಅಲ್ಲಿ ಮೇಳದವ್ರಿಗೆ ಟೆಂಟ್ ಹಾಕೂದಕ್ಕೆ, ಚೌಕಿ ರೆಡಿ ಮಾಡೂದಕ್ಕೆ, ರಂಗಸ್ಥಳ ಕಟ್ಟೂದ್ಕಕ್ಕೆ ಸಾಯ ಮಾಡ್ತಿದ್ದ. ದೊಡ್ಡ ದೊಡ್ಡ ಪೆಟ್ಟಿಗೆಗಳನ್ನು ಹೊತ್ತು ಲಾರಿಯಿಂದ ಚೌಕಿಗೆ, ಚೌಕಿಯಿಂದ ಲಾರಿಗೆ ಹಾಕ್ತಿದ್ದ. ಮೇಳದ ದಣಿಗಳು ಖುಷಿಯಿಂದ ಫ್ರೀಪಾಸು ಕೊಟ್ಟು ಹೊಟ್ಟೆ ತುಂಬ ಊಟ ಹಾಕ್ತಿದ್ರು. ಗಾಂಪನ ತಾಕತ್ತು ಗೋವಿಂದ ಪೈಗಳಿಗೂ ಗೊತ್ತಿತ್ತು. ''ನೋಡಾSSSS ಗಾಂಪಾSSSS ಇಲ್ಲಿ ಸುತ್ತುತ್ತ ಎಲ್ಲೇ ನಮ್ಮೇಳ್ದ ಆಟ ಇರ್ಲಿ ನೀನ್ ಅಲ್ಲಿಗೇSSS ಬಂದ್ಬಿಡು ಆಯ್ತಾ? ಪೆಟ್ಗೆ ಗಿಟ್ಗೆ ಹೊರ್ಲಿಕ್ಕೆ ಸಾಯ ಮಾಡು ಆಯ್ತಾ? ಶಮಾSSS ಊಟ ಹಾಕ್ತೇನೆ ಆಯ್ತಾ? ಹಾಗೆ ಆಟವೂ ನೋಡ್ಲಿಕ್ಕೆ ಶಿಗ್ತದೆ ಆಯ್ತಾ?'' ಅಂತ ಹೇಳಿದ್ರು. ಗಾಂಪ ಅವ್ರ ಆರ್ಡರನ್ನು ಒಪ್ಪಿದ್ದ. ಉಚ್ಚಿಲ ಸುತ್ತುತ್ತ ಎಲ್ಲೇ ಉಚ್ಚಿಲ ಮೇಳದ ಆಟ ಇದ್ರೂ ಅವ ಅಲ್ಲಿ ಹಾಜರ್.

ಮೇಳದ ದಣಿಗಳು ಫಸ್ಟ್‌ಕ್ಲಾಸಿನ ಪಾಸನ್ನು ಕೊಟ್ರೂ ಗಾಂಪ ಕೂತ್ಕೊಳ್ತಿದ್ದದ್ದು ನೆಲದಲ್ಲಿ, ಹೆಂಗಸ್ರ ಹಿಂದೆ. ಚೆಂದದ ಹುಡುಗಿಯರು ಕಂಡ್ರೆ ಸ್ಟೇರ್ ಮಾಡ್ತಿದ್ದ. ಅವ್ರು ಹಲ್ಲು ಬಿಟ್ರೆ ಇವ್ನೂ ಬಿಡ್ತಿದ್ದ. ಸಿಟ್ಟಿನಿಂದ ಅವ್ರೇನಾದ್ರೂ ಬೈದ್ರೆ ಬೇರೆ ಹೆಂಗಸ್ರನ್ನು ನೋಡ್ತಿದ್ದ.

ಗಾಂಪ ಆಟ ನೋಡಿ ಬಂದ ಮರುದಿವ್ಸ ಉಚ್ಚಿಲ ಪೇಟೆಯಲ್ಲಿದ್ದವ್ರಿಗೆಲ್ಲ ಅದ್ರ ರೀಪ್ಲೇ ಸಿಗ್ತಿತ್ತು. ಪೇಟೆಗೆ ಬರುವಾಗ್ಲೆ, ''ಅರರೆ ಭಾಪುರೆ ಕರ್ಣ ಮಜಭಾಪುರೆ ಭಟಾಗ್ರಣಿ...'' ಅಂತೆಲ್ಲ ಪದ್ಯ ಹಾಡ್ಕೊಂಡೇ ಬರ್ತಿದ್ದ. ಯಾರಾದ್ರೂ, ''ಗಾಂಪಾSSS ನಿನ್ನೆದ್ದು ಆಟ ಹೇಗಿತ್ತಾ?'' ಅಂತ ಕೇಳಿದ್ರೆ ಸಾಕು, ''ಚಿಟ್ಟಾಣಿ ಕುಣ್ದದ್ದು ಹೀಗೆ'' ಅಂತ, ನವಿಲು ನೃತ್ಯ ಮಾಡ್ತಿದ್ದ. ''ಧಾರೇಶ್ವರ ಹಾಡಿದ್ದು ಹೀಗೆ'' ಅಂತ ''ನೀಲ ಗಗನದೊಳು ಪದ್ಯ ಹಾಡ್ತಿದ್ದ''. ಪೇಟೆಯಲ್ಲಿ ಸುಮ್ನೆ ಕೂತಿದ್ದವ್ರಿಗೆಲ್ಲ ಟೈಂ ಪಾಸಾಗ್ತಿತ್ತು.

ಹೀಗೆ ಉಚ್ಚಿಲ ಅನ್ನುವ ಊರಲ್ಲಿ ಗಣಪತಿ, ಪೊಲ್ಯದಲ್ಲಿ ಗಾಂಪ ಎಲ್ರಿಗೂ ಬೇಕಾದವ್ನಾಗಿದ್ರು.

* * *

ಶಿವರಾತ್ರಿಗೆ ಇನ್ನೂ ಏಳೆಂಟು ದಿನಗಳಿತ್ತು. ಊರು ಉತ್ಸವಕ್ಕೆ ರೆಡಿ ಆಗ್ತಾ ಇತ್ತು. ಪೊಲ್ಯದಲ್ಲಿ ಚಳಿಯನ್ನೇ ಹೊದ್ಕೊಂಡು ಲೀಲಾವತಿ ಮತ್ತು ಅವ್ಳ ಮನೆಯವ್ರೆಲ್ಲ ಮಲಗಿದ್ರು. ಇನ್ನೂ ಸರಿ ಬೆಳಕಾಗಿರ್ಲಿಲ್ಲ. ಅಷ್ಟರಲ್ಲಿ,

''ಲೀಲಾ... ಏ ಲೀಲಾ!....''

''ಗಾಂಪಾ... ಏ.... ಗಾಂಪಾ!....''

ಅಂತ ಒಂದೇ ಸಮ ಕರ್ದದ್ದು ಕೇಳಿ ಲೀಲಾವತಿ ಚಳಿಯನ್ನು ತುಳ್ದು ಎದ್ದು ಹೊರ್ಗೆ ಬಂದ್ಲು.

ನೋಡಿದ್ರೆ ಹದಿನೈದಿಪ್ಪತ್ತು ಜನ್ರು ಬಂದಿದ್ದಾರೆ. ಎಲ್ರೂ ಮರಕಾಲ್ರು. ಎಲ್ಲ ಕಣ್ಣುಗಳು ಆ ಕತ್ಲೆಯಲ್ಲೂ ಕೆಂಪು ಕಾಣ್ತವೆ. ಬಂದವ್ರಲ್ಲಿ ಊರಿನವ್ನೇ ಆದ ಬೊಗ್ಗುವಿನ ಗುರ್ತ ಇತ್ತು. ಹಾಗಾಗಿ ಇದ್ದ ಬದ್ದ ಧೈರ್ಯ ಸೇರ್ಸಿ, ''ಏನು?... ಏನು?... ಎಂತ ವಿಷ್ಯ ಬೊಗ್ಗು?...'' ಅಂತ ಕೇಳಿದ್ಲು.

''ಎಂತ ವಿಷಯವಾ? ಕರಿ ಆ ರಂಡೆ ಮಗ ಗಾಂಪನನ್ನು! ಎಲ್ಲ ಗೊತ್ತಾಗ್ತದೆ'' ಅಂದ ಬೊಗ್ಗು.

''ಅಲ್ಲ... ಗಾಂಪ ಎಂತ ಮಾಡಿದ್ನಾ ನಿಮ್ಗೆ? ಎಂತ ವಿಷ್ಯ ಅಂತ ಸರೀ ಹೇಳು ಮಾರಾಯಾ? ದಮ್ಮಯ್ಯ... ನನ್ನ ಕೈ ಕಾಲೆಲ್ಲ ನಡುಗ್ತಾ ಉಂಟು.''

''ಎಂತ ಮಾಡಿದ್ನಾ?... ಇಲ್ಲೀ ತನ್ಕ ಅವ ಪೆದ್ದ... ಪಿರ್ಕಿ... ಗಾಂಪ ಅಂತ ಸುಮ್ನೆ ಬಿಟ್ಟದ್ದೇ ತಪ್ಪಾಯ್ತು. ಹುಡುಗ್ಯರನ್ನು ಕಂಡು ಬಪ್ಪರ್ ಪದ್ಯಗಳನ್ನು ಹಾಡುವಾಗ್ಲೆ ಮುಸುಂಟಿಗೆ ಎರ್ಡು ಬಿಡ್ಬೇಕಾಗಿತು. ಹಾಗೆ ಬಿಟ್ಟದ್ದೇ ತಪ್ಪಾಯ್ತು... ಈಗ ನೋಡು ಎಂತಾ ಕೆಲ್ಸ ಮಾಡಿದ್ದಾನೆ ಗೊತ್ತುಂಟಾ? ಎಂಕುವಿನ ಮಗ್ಳು ಲಚ್ಚಿಮಿ ಇಲ್ವಾ? ಮೂಗಿSSS ಅವ್ಳಿಗೆ ಈಗ ಮೂರು ತಿಂಗ್ಳು. ಮೊನ್ನೆ ಎಂಕು ಅವ್ಳಿಗೆ ದನಕ್ಕೆ ಬಡ್ದ ಹಾಗೆ ಬಡ್ದಿದ್ದ. ಯಾರು ಇದ್ಕೆ ಕಾರ್ಣ? ಹೇಳು! ಅಂತ ಬೈದಾಗ ಕೈ ಸನ್ನೆ ಬಾಯ್ಸನ್ನೆಯಲ್ಲಿ ಉದ್ದ, ದಪ್ಪ ಇರುವವ ಅಂತ ಹೇಳಿದ್ಲು. ಯಾರು? ಪೊಲ್ಯದ ಗಾಂಪನಾ ಅಂತ ಕೇಳಿದಾಗ ತಲೆ ಆಡಿಸಿದ್ಲು. ಕರೀ ಆ ರಂಡೆ ಮಗ್ನನ್ನೆ ಹೊರ್ಗೆ. ವಿಷ್ಯ ಈಗ್ಲೆ ಇತ್ಯರ್ಥ ಆಗ್ಬೇಕು'' ಅಂತ ಹೇಳಿದ ಶಂಕ್ರು.

ಶಂಕ್ರನ ಮಾತು ಕೇಳಿ ಲೀಲಾವತಿಯ ಕೈ ಕಾಲೆಲ್ಲ ತಣ್ಣಗಾಯ್ತು. ಒಂದು ನಿಮಿಷ ಸುಮ್ನೆ ನಿಂತ್ಲು. ಅಳ್ಳಿಕ್ಕೆ ಬಂತು. ಕೋಪವೂ ಬಂತು. ಕೈಗೆ ಸಿಕ್ಕಿದ ಕಟ್ಟಿಗೆಯ ತುಂಡನ್ನು ಹಿಡ್ಕೊಂಡು, ''ಬ್ಯಾವರ್ಷಿ!... ಶನಿ!... ರಂಡ್ಯೆ ಮಗ... ಬಾ ಹೊರ್ಗೆ!...'' ಅಂತ ಗಾಂಪನ ಜುಟ್ಟು ಹಿಡ್ಕೊಂಡು ಅಂಗ್ಳಕ್ಕೆ ತಂದ್ಲು. ಏನಾಯ್ತೂಂತ ಗಾಂಪನಿಗೆ ಗೊತ್ತಾಗುವಷ್ಟರಲ್ಲಿ ಕಾಲಿನ ಚರ್ಮ ಜಾರಿತ್ತು.

''ಬಾಯಿ ಬಿಡು ಬ್ಯಾವರ್ಷಿ!... ಇವ್ನು ಹೇಳ್ತಾ

ಇರುದು ಸತ್ಯವಾ? ಎಂಕುವಿನ ಮಗ್ಳು ಲಚ್ಚಿಮಿಯ ಶೀಲ ಕೆಡ್ಸಿದ್ದು ಸತ್ಯವಾ? ಹೇಳಾಽಽಽ'' ಲೀಲಾವತಿ ಮಾಂಕಾಳಿಯಾಗಿದ್ಲು.

ಗಾಂಪ ಒಂದು ನಿಮಿಷ ಸುಮ್ಮಿದ್ದ. ಆಮೇಲೆ, ''ಹ್ಹಿ... ಹ್ಹಿ... ಹ್ಹಿ... ಲಚ್ಚಿಮಿಯ ಒಟ್ಟಿಗಿದ್ದದ್ದು ಹೌದು. ಆಽಽವತ್ತು ರಾತ್ರಿ ಕಾಪುವಲ್ಲಿ ಆಟ ಇತ್ತಲ್ಲ? ಅವತ್ತು ರಾತ್ರಿ... ಹ್ಹಿ... ಹ್ಹಿ... ಹ್ಹಿ...''

''.....!''

''ನೋಡಿದ್ಯಾ? ಪೆದ್ದ! ಗಾಂಪ... ಗಾಂಪಾಂತ ಕರೀತಾ ಇದ್ರು ಎಲ್ರೂ. ಈಗ ನಿನ್ನ ಕೊಂಡಾಟದ ಮಗ ಎಂಥ ಕೆಲ್ಸ ಮಾಡಿದ್ದಾನೆ ನೋಡಿದ್ಯಾ? ನೀನೆ ಹೇಳು ಲೀಲ... ಎಂತ ಮಾಡ್ಬೇಕು ಇವ್ನನ್ನು?'' ಶಂಕ್ರ ಖಾರವಾಗಿ ಕೇಳಿದ.

''.....''

''ನಿಮ್ಮಿಂದ ಏನೂ ಉತ್ರ ಬರ್ದಿದ್ರೆ ನಮ್ಗೆ ಗೊತ್ತುಂಟು ಏನು ಮಾಡ್ಬೇಕೂಂತ. ಒಂದೋ ಲಚ್ಚಿಮಿಯನ್ನು ನಿನ್ನ ಸೊಸೇಂತ ಮಾಡಿಕೋ. ಅದು ಆಗುವುದಿಲ್ಲಾಂತಾದ್ರೆ ಗಾಂಪನನ್ನು ನಮ್ಮ ಕೈಗೆ ಒಪ್ಪಿಸಿ. ನಾವೇ ಅವ್ನಿಗೆ ಲಚ್ಚಿಮಿಯೊಟ್ಟಿಗೆ ಮದ್ವೆ ಮಾಡ್ತೇವೆ'' ಅಂತ ಹೇಳಿದ್ರು ಅಲ್ಲಿ ಬಂದಿದ್ದ ಶಂಕ್ರನ ಹುಡುಗ್ರು.

''.....?''

''ಲೀಲಾ ನೀನು ಎಂತ ಯೋಚ್ನೆ ಮಾಡ್ತಾ ಇರುದು ಅಂತ ನಂಗೆ ಗೊತ್ತುಂಟು. ನೀವು ಬ್ರಾಮಣ್ರು. ನಾವು ಮರಕಾಲ್ರು. ಲಚ್ಚಿಮಿಯನ್ನು ಒಳ್ಗೆ ಸೇರಿಸ್ಲಿಕ್ಕು ಆಗೂದಿಲ್ಲ. ಗಾಂಪನನ್ನು ಕಳಿಸ್ಲಿಕ್ಕೂ ಆಗೂದಿಲ್ಲ. ಜಾತಿ ಅಡ್ಡ ಬರ್ತದೆ ನಿಂಗೆ. ಆದ್ರೆ ಒಂದು ಕೇಳು ಲೀಲ... ಇದು ಎರಡ್ರಲ್ಲಿ ಯಾವ್ದನ್ನಾದ್ರೂ ನೀನು ಒಪ್ಲೇ ಬೇಕು'' ಅಂದ ಶಂಕ್ರ.

ಲೀಲಾವತಿಗೆ ದಿಕ್ಕೇ ಕಾಣ್ಲಿಲ್ಲ. ಸಪೋರ್ಟು ಮಾಡ್ಲಿಕ್ಕೆ ಒಬ್ರೂ ಇಲ್ಲ. ಏನಾದ್ರೂ ಆಗ್ಲಿ ಗಾಂಪನನ್ನೇ ಇವ್ರ ಕೈಗೆ ಕೊಡುದು. ಇಲ್ದಿದ್ರೆ ಯಾರನ್ನೂ ಬದುಕ್ಲಿಕ್ಕೆ ಇವ್ರು ಬಿಡುದಿಲ್ಲ ಅಂತ ಆಲೋಚ್ನೆ ಮಾಡಿದ್ಲು. ''ಮಾ ಗಣ್ಪತೇ ಕಾಪಾಡು... ನೀನೇ ದಿಕ್ಕು'' ಅಂತ ಮನಸ್ಸಲ್ಲೇ ಹೇಳಿಕೊಂಡ್ಲು. ''ಶಂಕ್ರ... ಬೊಗ್ಗು... ರಕ್ತ ನೀರು ಒಂದು ಮಾಡಿ ಇವ್ನನ್ನು ಬೆಳ್ಸಿದೆ. ಏನೋ ಪೇಟೆಗೆ ಹೋಗಿ ಒಂದಿಷ್ಟು ಕೆಲ್ಸ ಮಾಡಿ ಹೊಟ್ಟೆ ತುಂಬ್ಸಿಕೊಳ್ತಿದ್ದ. ಆಟ ಇರುವಲ್ಲಿಗೆಲ್ಲ ಹೋಗ್ತಿದ್ದ. ಬೇಡ ಅಂದ್ರೆ ಕೇಳ್ತಿರ್ಲಿಲ್ಲ. ಈಗ ಈ ರೀತಿ ಆಗಿದೆ. ಶಂಕ್ರ... ನಿನ್ನ ಕೈಗೆ ಒಪ್ಪಿಸುದು ಬಿಟ್ರೆ ಬೇರೆ ದಾರಿಯೇ ನಂಗಿಲ್ಲ'' ಅಂತ ಅಳ್ತಾ ಹೇಳಿದ್ಲು ಲೀಲಾವತಿ. ಅವ್ಳ ಮಾತು ಕೇಳಿ ಶಂಕ್ರನಿಗೆ ಸೀಗಡಿ ಮೀನಿನ ರಾಶಿಯೇ ಸಿಕ್ಕಿದ ಹಾಗಾಗಿತ್ತು.

ಶಂಕ್ರ ಉಚ್ಚಿಲದ ಮರಕಾಲ್ರ ಲೀಡರ್ ಆಗ್ಲಿಕ್ಕೆ ಟ್ರೈ ಮಾಡ್ತಿದ್ದವ. ಅವ್ನು ಮಂಡಲ ಪಂಚಾಯತ್ ಪ್ರೆಸಿಡೆಂಟಾಗಿದ್ದ. ಅದೂ ಅಲ್ದೆ ದೇವಸ್ಥಾನದ ಆಡಳಿತ ಮಂಡಳಿಯಲ್ಲೂ ಇದ್ದ. ಪ್ರತೀ ಸಾರಿ ತೇರಿಗೆ ಮೊದ್ಲು ನಡೀತಿದ್ದ ಮೀಟಿಂಗಲ್ಲಿ, ''ಕೃಷ್ಣಭಟ್ರೇ... ಈ ಸಾರಿಯಾದ್ರೂ ತೇರಿನ ದಿವ್ಸ ಸಾ ಪಂಕ್ತಿ ಊಟ ಹಾಕಿ, ಬ್ರಾಮಣ್ರೊಟ್ಟಿಗೆ ಶೆಟ್ರು, ಸೇರಿಗಾರ್ರು, ಎಲ್ರೂ ಕೂತ್ರೆ ಚೆಂದ ಅಲ್ವಾ? ಈ ಶತಮಾನ್ದಲ್ಲೂ ಜಾತಿ ಜಾತಿ ಅಂತ ಹೇಳುದು ಚೆಂದವಾ?'' ಅಂತ ಹೇಳ್ತಿದ್ದ. ಅದಕ್ಕೆ ಕೃಷ್ಣ ಭಟ್ರು, ''ನಾನೇನೋ ರೆಡಿ ಮಾರಾಯ... ಆದ್ರೆ ಕಮಿಟಿ




ಯಲ್ಲಿರುವ ಉಳಿದವ್ರು ಎಂತ ಹೇಳ್ತಾರೆ ನೋಡ್ಬೇಕು'' ಅಂತ ಹೇಳಿ ಬೇರೆಯವ್ರ ಮುಖ ನೋಡ್ತಿದ್ರು.

ಆಗ ಕಮಿಟಿಯಲ್ಲಿದ್ದ ಬೇರೆ ಬ್ರಾಹ್ಮಣ ಲೀಡರ್‌ಗಳು ಹೌದೌದು... ಭಟ್ರು ಹೇಳುದು ಸರಿ. ಇದು ಪ್ರಾಕಿನಿಂದ ನಡ್ಕೊಂಡು ಬಂದಿರುದಲ್ವೋ? ಇದನ್ನು ಬಿಡ್ಲಿಕ್ಕುಂಟೋ? ಹಾಗೇನಾದ್ರೂ ಕಟ್ಟುಕಟ್ಳೆಯಲ್ಲಿ ಹೆಚ್ಚು ಕಡಿಮೆ ಆದ್ರೆ ಗಣ್ಪತಿಗೆ ಕೋಪ ಬಂದ್ರೆ ಇಡೀ ಊರಿಗೇ ಬರ್ಕತ್ತಾಗ್ಲಿಕ್ಕಿಲ್ಲ'' ಅಂತ ಹೇಳ್ತಿದ್ರು. ಶಂಕ್ರ ಸಪೋರ್ಟ್ ಸಿಗ್ದೆ ಚಪ್ಪೆಯಾಗ್ತಿದ್ದ.

ಒಂದೆರ್ಡು ಸಾರಿ ತನ್ನ ಜಾತಿಯವ್ರ ಮೀಟಿಂಗಲ್ಲಿ, ''ಈ ಸಾರಿ ಉಸ್ತವದ ದಿವ್ಸ ನಮ್ಮ ಜಾತಿಯವ್ರು ಮಾತ್ರ ಅಲ್ಲ, ಶೆಟ್ರು, ಶೇರಿಗಾರ್ರು, ಬಾಕುಡರು, ಕೊರಗರೂ ಬ್ರಾಮ್ಮಣ್ರೊಟ್ಟಿಗೆ ಕೂತು ಊಟ ಮಾಡುವ ಹಾಗೆ ಮಾಡ್ಬೇಕು. ನೋಡುವ ಎಂತ ಆಗ್ತದೇಂತ. ಉಸ್ತವಕ್ಕೆ ರಥ ಕಟ್ಟುದು ನಾವು. ಹೊರೆಕಾಣಿಕೆ ಕೊಡುದು, ವಾದ್ಯ ಊದುದು, ತೋರಣ ಕಟ್ಟುದು, ಪಯಿಂಟ್ ಮಾಡುದು ಎಲ್ಲ ಕೆಳಜಾತಿಯವ್ರು. ಆದ್ರೆ ಮೊದ್ಲು ಊಟ ಅವ್ರಿಗೆ. ನಂತ್ರ ನಮ್ಗೆ ಅಂದ್ರೆ ಹೇಗೆ? ಬಿಡೂದು ಬೇಡ ಪ್ರಯತ್ನ ಮಾಡುವ'' ಅಂತ ತನ್ನ ಜಾತಿಯ ಹುಡುಗ್ರಿಗೆ ಹೇಳಿದ್ದ. ಅವ್ನು ಹೇಳಿದ ಹಾಗೆ ಒಂದೆರ್ಡು ವರ್ಷ ತೇರಿನ ದಿವ್ಸ ಬ್ರಾಮಣ್ರೊಟ್ಟಿಗೆ ಬೇರೆ ಜಾತಿಯವ್ರನ್ನೂ ಶಂಕ್ರನ ಹುಡುಗ್ರು ಕೂತ್ಕೊಳ್ಳಿಸಿದ್ರು. ಇದ್ರಿಂದ ಬ್ರಾಮಣ್ರಿಗೆ ಕೋಪ ಬಂದು ಕೃಷ್ಣ ಭಟ್ರಿಗೆ ಕಂಪ್ಲೇಂಟ್ ಕೊಟ್ರು. ಕೂಡ್ಲೆ ಭಟ್ರು ಮೈಕಲ್ಲಿ, ''ದಯಮಾಡಿ ಕೇಳಿ... ಬ್ರಾಮ್ಮಣ್ರ ಪಂಕ್ತಿಯಲ್ಲಿ ಮರಕಾಲ್ರು, ಶೆಟ್ರು, ಕೊರಗರು, ಬಾಕುಡರು ಕೂತಿದ್ದಾರೆ. ಇದು ಯಾರ ಕಟಪಟೇಂತ ಗೊತ್ತಾಗ್ತಾ ಇಲ್ಲ... ಸಾ ಪಂಕ್ತಿ ಮಾಡಿದ್ರೆ ಏನಾಗ್ತದೇಂತ ಕೇಳ್ಬಹುದು ನೀವು... ಈಗ ನೋಡಿ ಮರಕಾಲ್ರಿಗೆ ಕಡ್ಲಲ್ಲಿ ಮೀನೇ ಸಿಗ್ತಾ ಇಲ್ಲ, ಶೆಟ್ರುಗಳಿಗೆ ವ್ಯಾಪಾರ್ದಲ್ಲಿ ಭಾರೀಽಽಽ ಲಾಸಾಗ್ತಾ ಉಂಟು. ಕೊರಗ್ರು ಬಾಕುಡರು ಎಲ್ಲ ಯಾವ್ಯಾವ್ದೋ ರೋಗದಿಂದ ನರಳ್ತಾ ಇದ್ದಾರೆ... ಅದೆಲ್ಲ ಆಗುದು ಯಾವುದ್ರಿಂದ ಗೊತ್ತುಂಟಾ? ಈ ರೀತಿಯ ಆಲೋಚ್ನೆಗಳಿಂದ್ಲೇ... ಇವತ್ತು ತೇರು... ಗಣಪತಿ ತನ್ನ ಪರಿವಾರದವ್ರೊಂದಿಗೆ ಇಲ್ಲಿಗೆ ಬರ್ತಾನೆ. ಅವ್ನಿಗೇನಾದ್ರೂ ಮಡಿಯಲ್ಲಿ ತೊಂದ್ರೆ ಆದ್ರೆ ಭಾರೀಽಽ ಕೋಪ ಬರ್ತದೆ. ಭಕ್ತಾಭಿಮಾನಿಗಳೇ... ನೋಡಿ... ಆಲೋಚ್ನೆ ಮಾಡಿ... ಊಟ ಎಲ್ರಿಗೂ ಉಂಟು. ಆದ್ರೆ ಮೊದ್ಲು ಬ್ರಾಮಣ್ರಿಗೆ. ನಂತ್ರ ಉಳ್ದವ್ರಿಗೆ...'' ಅಂತ ಎನೌನ್ಸ್ ಮಾಡಿದ್ದೇ ತಡ ಇದ್ದ ಶೂದ್ರರೆಲ್ಲ ಹೆದ್ರಿ ಎದ್ದು ಹೋದ್ರು. ಶಂಕ್ರ ಮತ್ತು ಅವ್ನ ಬಂಟ್ರಿಗೆ ತಮ್ಮ ಪ್ರಯತ್ನ ಕೈ ಕೊಟ್ಟಿತಲ್ಲಾಂತ ಭಾರೀ ಕೋಪ, ನಿರಾಸೆ ಎಲ್ಲ ಆಯ್ತು. ಹೇಗಾದ್ರೂ ಮಾಡಿ ಬ್ರಾಮಣ್ರಿಗೆ ಬುದ್ಧಿ ಕಲಿಸ್ಲೇಬೇಕು ಅಂತ ಕಾಯ್ತಿದ್ದ. ಈಗ ಗಾಂಪನ ವಿಷ್ಯ ಸರಿಯಾಗಿ ಸಿಕ್ಕಿತ್ತು.

''ಹಿಡ್ಕೊಳ್ರಾ ಅವ್ನನ್ನು'' ಅಂತ ತನ್ನ ಬಂಟ್ರಿಗೆ ಹೇಳಿದ ಶಂಕ್ರ, ''ಲೀಲಾ... ಗಾಂಪನನ್ನು ಕರ್ಕೊಂಡ್ಹೋಗ್ತೇವೆ. ಮುಂದಿನವಾರ ಅವ್ನಿಗೂ ಲಚ್ಚಿಮಿಗೂ ನಾವೆ ಮದ್ವೆ ಮಾಡ್ತೇವೆ. ನಿಂಗೆ ಹೇಳಿ ಕಳಿಸ್ತೇವೆ ಆಯ್ತಾ? ಊಟಕ್ಕೆ ಬಾ ಆಯ್ತಾ? ನಮ್ಮೊಟ್ಟಿಗೆ ಮೀನು ಹಿಡೀಲಿಕ್ಕೆ ಕರ್ಕೊಂಡ್ಹೋಗ್ತೇವೆ, ನೀನೇನೂ ಚಿಂತೆ ಮಾಡ್ಬೇಡ'' ಅಂತ ದೊಡ್ಡ ಸೌಂಡಲ್ಲಿ ಹೇಳಿದ, ಎಲ್ರನ್ನೂ ಕರ್ಕೊಂಡು ಹೋದ.

ಪೊಲ್ಯದಿಂದ ಶಂಕ್ರನ ಬಂಟ್ರ ಒಟ್ಟಿಗೆ ಹೊರ್ಟ ಗಾಂಪನಿಗೆ ಕೈ ಕಾಲು ನಡುಗ್ಲಿಕ್ಕೆ ಸುರುವಾಯ್ತು. 'ಅಮ್ಮ ಕಾಲಲ್ಲಿ ರಕ್ತಬರುವ ಹಾಗೆ ಬಾರ್ಸಿದ್ದಾಳೆ. ನಂಗೆ ಜೋರು ಮಾಡಿದ್ದಾಳೆ. ಇವ್ರೆಲ್ಲ ಸೇರಿ ಅಮ್ಮನಿಗೆ ಬೈದಿದ್ದಾರೆ. ಅಮ್ಮ ಬಡ್ದ ಹಾಗೆ ಇವ್ರೂ ಬಡ್ದ್ರೆ? ಎಂತ ಮಾಡುದು?' ಅಂತ ಆಲೋಚ್ನೆ ಮಾಡಿದ. ಹಾಗೆ ಆಲೋಚ್ನೆ ಮಾಡಿದವ್ನೆ ಗಕ್ಕ ನಿಂತುಬಿಟ್ಟ. ಅವ್ರೆಲ್ಲ ಪೊಲ್ಯದ ಹಾಡಿಯ ದಾರಿಯಲ್ಲಿ ಬಂದು ಕುಂಜೂರು, ಎಲ್ಲೂರು ಕಡೆಗೆ ಹೋಗುವ ಕೂಡು ರಸ್ತೆಯ ಹತ್ರ ಬಂದಾಗಿತ್ತು.

''ಏಯ್... ಬಾರಾ ಬೇಗ ಯಾಕ್ ನಿಂತಿಯಾ?'' ಅಂತ ಒಬ್ಬ ಜೋರು ಮಾಡಿದ.

''ಹ್ಹಿ... ಹ್ಹಿ... ಹ್ಹಿ... ಉಚ್ಚೆ.''

''ಸರಿ ಸರಿ... ಏ ಸುಧಾಕರ ನಾವು ಮುಂದೆ ಹೋಗ್ತೇವೆ. ಉಚ್ಚೆ ಹೊಯ್ಸಿ ಕರ್ಕೊಂಡು ಬಾ'' ಅಂತ ಹೇಳಿ ಶಂಕ್ರ ತನ್ನ ಬಂಟ್ರನ್ನು ಕರ್ಕೊಂಡು ಬೀಸ ಬೀಸ ಹೋದ.

ಗಾಂಪ ಉಚ್ಚೆ ಹೊಯ್ಯುವವನ ಹಾಗೆ ದಣಪೆಯ ಅಡ್ಡ ನಿಂತವ್ನೆ ಎದ್ನೋ ಬಿದ್ನೋ ಅಂತ ಎಲ್ಲೂರಿನತ್ತ ಓಡಿದ. ವಿರುದ್ಧ ದಿಕ್ಕಿಗೆ ಮುಖ ಮಾಡಿ ಉಚ್ಚೆ ಹೊಯ್ಯುತ್ತಿದ್ದ ಸುಧಾಕರನಿಗೂ ಗಾಂಪ ಓಡಿದ್ದು ಪಕ್ಕನೆ ಗೊತ್ತಾಗ್ಲಿಲ್ಲ. ''ಏ... ಏ... ಏಯ್! ಹಿಡೀರಿ ಹಿಡೀಽಽರಿ ಅವ್ನನ್ನು'' ಅಂತ ಕಿರುಚ್ವಾಗ ಗಾಂಪ ಎಲ್ಲಿ? ದಣಪೆ, ಗದ್ದೆ ಎಲ್ಲ ದಾಟಿ ಮೈನ್‌ರೋಡು ಸೇರಿ ಮಂಗ ಮಾಯ ಆಗಿದ್ದ.

ವಿಷ್ಯ ಗೊತ್ತಾಗಿ ಶಂಕ್ರ ಆಕಾಶ ಭೂಮಿ ಒಂದು ಮಾಡಿದ. ''ಎಲ್ಲ ಕಡೆ ಹುಡ್ಕಿ ಬೋಳಿಮಕ್ಕೆ... ಅವ ಎಲ್ಲಿ ಸಿಕ್ಕಿದ್ರೂ ಮುಖ ಮುಸುಡು ನೋಡ್ದೆ ಹೊಡೀರಿ. ಸುತ್ತ ಇರುವ ಬ್ರಾಮಣ್ರು ಯಾರೂ ನಮ್ಮ ಸುದ್ದಿಗೆ ಬರ್ಬಾರ್ದು ಹಾಗೆ ಮಾಡಿ'' ಅಂತ ಆರ್ಡರ್ ಮಾಡಿದ. ಅವ್ನ ಬಂಟ್ರು ಅದಮಾರು, ಎಲ್ಲೂರು, ಎರ್ಮಾಳು,

ಕುಂಜೂರು, ಪಡುಬಿದ್ರಿ ಅಂತ ಎಲ್ಲ ಕಡೆ ಹುಡ್ಕಿದ್ರು. ಆಟ ನಡೀವಲ್ಲಿಗೆಲ್ಲ ಹೋದ್ರು. ಕೆಲವು ದಿವ್ಸ ಪೊಲ್ಯದ ಅವ್ನ ಮನೆಗೂ ಕಾವಲು ಕೂತ್ರು. ಗಾಂಪನ ಸುದ್ದಿ ಸಿಗ್ಲೇ ಇಲ್ಲ. ಇದೆಲ್ಲ ಆಗಿ ಕೆಲವು ದಿವ್ಸಗಳಲ್ಲಿ ಲಚ್ಚಿಮಿ ಬಾವಿಗೆ ಹಾರಿ ಸತ್ತು, ಶಂಕ್ರನ ಕೋಪ ಮತ್ತೂ ಹೆಚ್ಚಾಯ್ತು.

ಮೊದಲ ಕೆಲವು ದಿನಗಳಲ್ಲಿ ಊರಿನವು, "ಅSSವತ್ತೆ ಹೇಳಿದ್ದೆ ನಾನು. ಅವ್ನು ಹೆಂಗಸ್ರನ್ನು ನೋಡ್ತಿದ್ದ ಶೈಲೇ ಬೇರೆ ಇತ್ತು."

"ಮತ್ತೆ ಎಂಥದು ಮಾರ್ರೆ ?... ಆಟದವ್ರ ಸಾವಾಸ ಮಾಡಿದ್ರೆ ಹೀಗೆ ಆಗುದು" ಅಂತೆಲ್ಲ ಮಾತಾಡಿ ಕೊಂಡ್ರು. ಕೆಲವು ದಿನ ಆದ್ಮೇಲೆ ಎಲ್ಲ ಮರ್ತುಬಿಡ್ಳಿಕ್ಕೆ ಸುರು ಮಾಡಿದ್ರು.

ಲೀಲಾವತಿ ಮಾತ್ರ ಗಣಪತಿ ದೇವಸ್ಥಾನಕ್ಕೆ ಡೈಲಿ ಬಂದು, "ಮಾ ಗಣ್ಪತೀ ನನ್ನ ಮಗ ವಾಪಾಸು ಬರ್ವ ಹಾಗೆ ಮಾಡು, ನಿಂಗೆ ಅಪ್ಪ, ಪಂಚಕಜ್ಜಾಯ ಎಲ್ಲ ಮಾಡಿಸ್ತೇನೆ" ಅಂತ ಹೇಳಿಕೊಳ್ತಿದ್ಲು. ಉಚ್ಚಿಲದಲ್ಲಿ ಯಾವ್ದೇ ಮೇಳದವ್ರು ಬಂದ್ರೂ ಅದ್ರ ದಣಿಗಳ ಹತ್ರ ಹೋಗಿ "ನನ್ನ ಗಾಂಪ ಎಲ್ಲಿಯಾದ್ರೂ ಕಾಣ್ಳಿಕ್ಕೆ ಸಿಕ್ಕಿದ್ನಾ ?" ಅಂತ ಕೇಳ್ತಿದ್ಲು. ಗೋವಿಂದ ಪೈಗಳ ಹತ್ರವೂ ಹೇಳಿದ್ಲು, "ಪೈಗಳೆ... ನಿಮ್ಮ ಮೇಳದ ಆಟ ಇದ್ದಲ್ಲಿ ಒಂದು ಚೂರು ಕಣ್ಣಿಟ್ಟಿರಿ ನಮ್ಮ ಮಾಣಿ ಎಲ್ಲಾದ್ರೂ ಕಾಣ್ತಾನಾ ಅಂತ." ಆದ್ರೆ ಏನೂ ಪ್ರಯೋಜ್ನ ಆಗ್ಲಿಲ್ಲ.

* * *

ಇದೆಲ್ಲ ಆಗಿ ಸುಮಾರು ಐದು ವರ್ಷಗಳು ಕಳ್ದು ಹೋಯ್ತು. ಊರಿಗೆ ಊರೇ ಗಾಂಪನನ್ನು ಮರ್ತು ಬಿಟ್ಟಿತು. ಲೀಲಾವತಿಯ ಗಂಡ ಸತ್ತುಹೋದ. ಗಾಂಪ ಸಿಗ್ಬಹುದು ಮತ್ತೆ ಮನೆಗೆ ಬರ್ಬಹುದು ಅನ್ನುವ ಆಸೆ ಕ್ಷೀಣವಾಗಿತ್ತು. ಆದ್ರೂ ಪೇಟೆಗೆ ಬಂದವ್ಳು ಒಂದರ್ಧ ಗಂಟೆ ಎಲ್ಲ ಬಸ್ಸುಗಳು ಬರುದನ್ನು ಕಾದು ಅದ್ರಲ್ಲಿ ಇಳಿಯುವವ್ರನ್ನು ನೋಡಿ ಆಮೇಲೆ ಮನೆಗೆ ಹೋಗ್ತಿದ್ಲು.

ಗಣ್ಪತಿ ದೇವಸ್ಥಾನದಲ್ಲಿ ಭಾರೀ ಇಂಪ್ರೂಮೆಂಟ್ ಆಗಿತ್ತು. ಗರ್ಭಗುಡಿಗೆ ತಾಮ್ರದ ತಗಡು ಹಾಸಿದ್ರು. ದೇವ್ರಿಗೆ ವಜ್ರದ ಕಿರೀಟ, ಚಿನ್ನದ ಮುಖ ಎಲ್ಲ ಬಂದಿತ್ತು. ಮೇಳದ ಗಣ್ಪತಿಯ ವಿಗ್ರಹಕ್ಕೂ ಕೂಡ ಚಿನ್ನದ ಪ್ರಭಾವಳಿ, ದಂತ ಮತ್ತು ನವರತ್ನದ ಹಾರ ಎಲ್ಲ ಬಂದಿತ್ತು. ಒಟ್ಟಾರೆ ಗಣ್ಪತಿ ದೇವ್ರು ಭಾರಿ ರೈಸ್ ತಿದ್ರು.

ಶಂಕ್ರ ಉಚ್ಚಿಲವೂ ಸೇರಿ ಒಟ್ಟು ಎಂಟು ಮಾಗಣೆಯ ಮರಕಾಲ್ರ ಲೀಡರ್ ಆಗಿದ್ದ. ಎಲ್ರಿಗೂ ಅವ್ನು ಅಣ್ಣೆರ್ ಆಗಿದ್ದ. ಹದಿನೈದಿಪ್ಪತ್ತು ಜನ ಅವ್ನ ಹಿಂದೆ ಮುಂದೆ 'ಅಣ್ಣೆರೆ' 'ಅಣ್ಣೆರೆ' ಅಂತ ತಿರುಗಾಡ್ತಿದ್ರು. ಮುಂದೆ ಓಟಿಗೆ ನಿಲ್ಲುವ ಆಲೋಚ್ನೆ ಮಾಡ್ತಿದ್ದ ಶಂಕ್ರ. ಎರ್ಡೂ ಕೈಗಳಿಗೆ ಸೇರಿ ಒಟ್ಟು ಹದಿನಾರು ಉಂಗುರ. ಮೊಣಕೈಗೆ ದಪ್ಪ ಕಡಗ, ಕೈಯಲ್ಲಿ ಮೊಬೈಲ್, ತಿರುಗಾಡ್ಲಿಕ್ಕೆ ಫಾರಿನ್ ಕಾರು ಇದಿಷ್ಟು ಅವ್ನ ಗೆಟಪ್ಪಾಗಿತ್ತು. ಸುರತ್ಕಲ್ಲಿನಲ್ಲಿ ಆಗಷ್ಟೇ ತಲೆ ಎತ್ತಿದ್ದ ಆಯಿಲ್ ಕಂಪೆನಿ ವಿರುದ್ಧ ಚಳುವಳಿ ಮಾಡ್ತಿದ್ದ, ಡೈಲಿ ಪೇಪರ್ನಲ್ಲಿ ಫೋಟೋ ಬರ್ವ ಹಾಗೆ ನೋಡ್ಕೊಳ್ತಿದ್ದ.

ಒಂದು ದಿನ ಕಾಟಿಪಳ್ಳದಲ್ಲಿ ಆಯಿಲ್ ಕಂಪೆನಿ ವಿರುದ್ಧ ಭಾಷಣ ಮಾಡ್ತಿದ್ದ. ಆಗ ಅವ್ನ ಬಂಟನೊಬ್ಬ ಬಂದು, "ಕೃಷ್ಣಾಪುರ್ದಲ್ಲಿ ಇವತ್ತು ಉಚ್ಚಿಲ ಮೇಳದ ಆಟ ಉಂಟು" ಅಂತ ಹೇಳಿ, ಶಂಕ್ರನ ಕಿವಿಯಲ್ಲಿ 'ಪಿಸಿಪಿಸಿ' ಅಂದ. ಕೂಡ್ಲೆ ಅವ್ನ ಬಾಯಿ ಕಿವಿತಂಕ ಹೋಯ್ತು, ಒಂದಷ್ಟು ಜನ್ರನ್ನು ರೆಡಿ ಮಾಡ್ಳಿಕ್ಕೆ ಹೇಳಿ ಹಾಗೆಯೇ ದೊಣ್ಣೆ, ತಲ್ವಾರು, ಪೆಟ್ರೋಲುಗಳನ್ನು ತರ್ಳಿಕ್ಕೆ ಹೇಳಿ ಮನಸ್ನಲ್ಲೇ ಬಂಗುಡೆ ಫ್ರೈ ತಿನ್ಲಿಕ್ಕೆ ಸುರು ಮಾಡಿದ.

ಕೃಷ್ಣಾಪುರ್ದಲ್ಲಿ ಉಚ್ಚಿಲ ಮೇಳದ ಭರ್ಜರಿ ಟೆಂಟ್ ಹಾಕಿತ್ತು. ಇನ್ನೇನು ಆಟ ಸುರುವಾಗ್ಬೇಕು ಅನ್ನುವಾಗ ಪೈಗಳಿಗೆ ಚೌಕಿಯ ಹತ್ರ ಗಾಂಪನನ್ನು ಕಂಡ ಹಾಗೆ ಆಯ್ತು. "ಏ.... ಗಾಂಪಾSS" ಅಂತ ಕರೀಬೇಕು ಅನ್ನುವಷ್ಟರಲ್ಲಿ ಅವ ಕಾಣ್ಳಿಕ್ಕೇ ಸಿಗ್ಲಿಲ್ಲ. ಪೀಠಿಕೆ ವೇಷಗಳು ಮುಗೀತು. ಪ್ರಸಂಗ ಸ್ಟಾರ್ಟ್ ಆಗುವ ಮೊದ್ಲು ಪೈಗಳು ಮುಂದಿನ ಕ್ಯಾಂಪಿನ ವಿವ್ರಗಳನ್ನು ಹೇಳ್ಳಿಕ್ಕೆ ಸ್ಟೇಜಿಗೆ ಬಂದ್ರು. ಮಾತಾಡ್ತಾ ಮಾತಾಡ್ತಾ ನೆಲ್ದ ಕಡೆಗೆ ನೋಡಿದ್ರೆ ಹೆಂಗಸ್ರ ಹಿಂದೆ ಗಾಂಪ! ಒಮ್ಮೆ ಕಣ್ಣು ತಿಕ್ಕಿಕೊಂಡ್ರು. ಹೌದು... ಅವ್ನೇ! ಒಂದೇ ರೀತಿ ಇದ್ದಾನೆ. ಹಲ್ಲು ಸ್ವಲ್ಪ ಮುರ್ದಿದೆ. ಸೊಡ್ಡು ಸ್ವಲ್ಪ ಬಾತಿದೆ. ಬೋಳಿಮಗ ಎಲ್ಲೋ ಪೆಟ್ಟು ತಿಂದಿರ್ಬೇಕು. ಏನಾದ್ರೂ ಹೆಂಗಸ್ರ ಚಟ ಇನ್ನೂ ಬಿಡ್ಳಿಲ್ಲ ಅಂತ ಆಲೋಚ್ನೆ ಮಾಡಿದ್ರು. ಇರ್ಲಿ ಪುರ್ಸೊತ್ತಲ್ಲಿ ಮಾತಾಡಿಸುವ ಅಂತ ಲೆಕ್ಕ ಹಾಕಿದ್ರು.

'ಸಮಗ್ರ ಭೀಷ್ಮ' ಪ್ರಸಂಗ ಸುರುವಾಯ್ತು. ಶಂತನು ಮತ್ಸ್ಯಗಂಧಿಯನ್ನು ಕಂಡದ್ದು, ದಾಶರಾಜ ಮದ್ವೆ ಮಾಡಿಕೊಡ್ಳಿಕೆ ಆಗುದಿಲ್ಲಾಂತ ಹೇಳಿದ್ದು ಎಲ್ಲ ಮುಗೀತು. ಶಂತನುವಿನ ಆಸೆ ಈಡೇರಿಸ್ಲಿಕ್ಕೆ ಬಂದ ಮಗ ದೇವವ್ರತ ಸ್ವಲ್ಪ ಅಧಿಕಪ್ರಸಂಗಿ, ಕೃಷ್ಣಭಟ್ರ ತಮ್ಮನ ಮಗ ವಾಸುದೇವ. ಮೇಳದಲ್ಲಿದ್ದ ಒಂದೆರಡು ಬ್ರಾಮ್ಮಣ ಕಲಾವಿದ್ರನ್ನು ಒಟ್ಟು ಮಾಡಿ ಬೇರೆಯೇ ಇರ್ತಿದ್ದ. ಶೂದ್ರರನ್ನು ಕಂಡ್ರೆ ಆಗ್ತಿರ್ಲಿಲ್ಲ. ಅದೂ ಅಲ್ದೆ ಪುರಾಣ ಪ್ರಸಂಗಗಳನ್ನು ಹೊಸ ದೃಷ್ಟಿಯಿಂದ ನೋಡ್ಬೇಕು ಅನ್ನುವವ. ದಾಶರಾಜನ ಪಾರ್ಟು ಮಾಡಿದವ ನಿಜ ಜೀವ್ನದಲ್ಲೂ ಮರಕಾಲ. ಶಂಕ್ರನ ದಾಯಾದಿ.

ಶಂತನುವಿನ ಪರವಾಗಿ ಮಾತಾಡ್ತ ದೇವವ್ರತ, "ನೀವು ಮೀನು ಹಿಡಿಯುವ ಜಾತಿಯವ್ರೆಲ್ಲ ಒಂದೆ.



## ಬರದಿರಿ ಹೊರಗೆ

ತಾಯ ಗರ್ಭದ
ನಿರ್ವಿಕಲ್ಪ ಸಮಾಧಿಯಲಿ
ಮಲಗಿರುವ ಭ್ರೂಣಗಳೆ
ಬರದಿರಿ ಹೊರಗೆ

ನಿಮ್ಮನು ಸ್ವಾಗತಿಸಲಿಲ್ಲಿ
ಮರಗಳಲ್ಲಿ
ರೆಂಬೆ ಕೈಗಳಿಲ್ಲ
ಹೂ ಕಣ್ಣುಗಳಿಲ್ಲ

ಬೀಸುಗಾಳಿಯ
ಉಚ್ಛ್ವಾಸ ನಿಶ್ವಾಸಗಳಿಲ್ಲ
ಹಿಚುಕಿದ ಕೊರಳಿಂದ
ಹಕ್ಕಿ ಹಾಡುವುದಿಲ್ಲ

ವಿಷದ ನೀರಿನಲ್ಲಿ
ಮೀನುಗಳೀಜುವುದಿಲ್ಲ
ಸತ್ತ ಮಣ್ಣಿನಲ್ಲಿಲ್ಲಿ
ಹಸಿರು ಉಸುರುವುದಿಲ್ಲ

ಆಕಾಶವೂ ಹಾಗೆ
ಕರುಣೆ ತೋರಿಸುವುದಿಲ್ಲ..
ದಯಮಾಡಿ ನಿಮಗೆ
ಹೇಳುವುದಿಷ್ಟೆ

ಮತ್ತೆ ಮಾಡುವುದಕೆ
ಪಶ್ಚಾತ್ತಾಪದ ಬೇಗೆ
ಬರದಿರಿ ಹೊರಗೆ
ಈ ವಿಕೃತಿಯ ಕರೆಗೆ

ರವಿಶಂಕರ ಶೆಟ್ಟಿ ಒಡ್ಡಂಬೆಟ್ಟು, ಉಪನ್ಯಾಸಕ, ಸರ್ಕಾರಿ ಪ-ಪೂ ಕಾಲೇಜು, ಕನ್ಯಾನ - ೫೭೪೨೭೯, ಬಂಟ್ವಾಳ (ತಾ) ದ.ಕ.ಜಿಲ್ಲೆ

ಎದ್ರು ಒಂದು ಹಿಂದೆ ಒಂದು. ಹೊರಗೆ ಬ್ರಾಹ್ಮಣ, ಕ್ಷತ್ರಿಯರನ್ನು ನಿಂದಿಸುತ್ತ ಒಳಗೆ ಅರಸೊತ್ತಿಗೆಯ ಮೇಲೆ ಕಣ್ಣಿಟ್ಟವ್ರು'' ಅಂತ ಹೇಳಿದ. ಜನ್ರ ಒಂದು ಗುಂಪಿಂದ ಚಪ್ಪಾಳೆ ಬಿತ್ತು.

ಮತ್ತೊಂದು ಕಡೆ ಕೂತಿದ್ದ ಶಂಕ್ರ ಎದ್ದ, ''ನಿಲ್ಸಿ ಆಟ... ಯಾವ ರಂಡ್ಯಾ ಮಗ ಹೇಳಿದ್ದು ಈ ಡೈಲಾಗನ್ನು? ಅವ ನಮ್ಮೆಲ್ಲರತ್ರ ಕ್ಷಮೆ ಕೇಳ್ಬೇಕು. ಇಡೀ ನಮ್ಮ ಜಾತಿಗೆ ಮಾಡಿದ ಇನ್ಸಲ್ಟ್ ಇದು!'' ಅಂತ ಬೊಬ್ಬೆ ಹೊಡ್ದ. ಶಂಕ್ರನಿಗೆ ಉಚ್ಚಿಲ ಮೇಳದ ಆಟದಲ್ಲಿ ವಾಸುದೇವ ಈ ರೀತಿಯ ಡೈಲಾಗನ್ನು ಹೇಳ್ತಾನೆ ಅಂತ್ಲೂ ಅದ್ಕೇ ಅವ ಫೇಮಸ್ ಅಂತ್ಲೂ ಅವ್ನ ಬಂಟನಿಂದ ಗೊತ್ತಾಗಿತ್ತು. ಅದ್ಕೇ ಜನ್ರನ್ನು ಒಟ್ಟು ಮಾಡಿ ಬಂದಿದ್ದ ಅಲ್ಲಿಗೆ.

ಆದ್ರೆ ವಾಸುದೇವ ಕ್ಷಮೆ ಕೇಳ್ಳಿಲ್ಲ ''ಹೋಗ!... ಮೀನು ಹಿಡಿಯುವ ಮರಕಾಲ ನೀನು. ನಿನ್ನ ಹತ್ರ ಎಂಥದಾ ಕ್ಷಮೆ ಕೇಳುದು ನಾನು? ಆಟ ನೋಡ್ಲಿಕ್ಕೆ ಇಷ್ಟ ಇದ್ರೆ ನೋಡ್. ಇಲ್ದಿದ್ರೆ ಕುಂಡೆಗೆ ಕಾಲು ಕೊಡ್!'' ಅಂತ ಹೇಳಿದ್ದು ಮೈಕಲ್ಲಿ ಕೇಳಿ ಎಲ್ಲಾ ಗೊಳ್ಳೆಂದ್ರು.

ಶಂಕ್ರನಿಗೆ ಮೈಮೇಲೆ ಹಾವು ಹರ್ದ ಹಾಗಾಯ್ತು. ''ನೋಡುದು ಎಂಥದಾ? ಬಡೀರಿ ಇವ್ನಿಗೆ!'' ಅಂತ ಹೇಳಿದ್ದೇ ತಡ ಜನ್ರಲ್ಲಿ ಹೊಡ್ದಾಟ ಸುರುವಾಯ್ತು. ಗಲಾಟೆ ಕೇಳಿ ಚೌಕಿಯಲ್ಲಿ ಗೊರ್ಕೆ ಹೊಡೀತಿದ್ದ ಪೈಗಳು ಓಡಿ ಬಂದ್ರು. ಎಂತ ಹೇಳುದು? ಜನ್ರಲ್ಲಿ ಯುದ್ಧವೇ ಸುರುವಾಗಿದೆ. ಸ್ಟೇಜಿಗೆ ಹಾರಿದ ಶಂಕ್ರ ಪೈಗಳ ಕೆಪ್ಪೆಗೆ ಬಾರ್ಸಿದ. ಚೌಕಿಗೆ ನುಗ್ಗಿದ ಸುಧಾಕರ, ಬೊಗ್ಗು ಕೈಗೆ ಸಿಕ್ಕಿದ ಆಯುಧಗಳಿಂದ ಕಲಾವಿದ್ರಿಗೆಲ್ಲ ಬಾರ್ಸಿದ್ರು. ಕಲಾವಿದ್ರೆಲ್ಲ ಪಿಡ್ಜೋ! ಒಂದಿಷ್ಟು ಪೆಟ್ರೋಲ್ ಹಾಕಿ ಟೆಂಟಿಗೆ ಬೆಂಕಿಕೊಟ್ಟು ಶಂಕ್ರನ ಗ್ಯಾಂಗು ಕತ್ಲಲ್ಲಿ ಪರಾರಿಯಾಯ್ತು. ಪೈಗಳ ಪುಣ್ಯ. ಯಾರೋ ಆ ಬೆಂಕಿ ದೊಡ್ಡದಾಗ್ತದೆ ಎನ್ನುವಾಗಲೇ ಆರಿಸಿದ್ರು.

ಎಲ್ಲ ಹೋದ್ಮೇಲೆ ಪೈಗಳು ನೋಡ್ತಾರೆ. ಎಂತ ಹೇಳುದು? ಕುರ್ಚಿಗಳೆಲ್ಲ ಪುಡಿ ಪುಡಿ. ಚೌಕಿ, ರಂಗಸ್ಥಳ ಎಲ್ಲ ಧ್ವಂಸ, ಕಲಾವಿದ್ರು ಮುಖ ಮುಸುಡಿ ನೋಡದೆ ಪೆಟ್ಟು ತಿಂದಿದ್ದಾರೆ. ಮೇಳದ ದೇವ್ರು? ನೆನಪಾಗಿ ಎದೆ ಧಸಕ್ಕಾಯ್ತು. ಸ್ವಲ್ಪ ಹುಡುಕಿದ್ರು. ಅಷ್ಟರಲ್ಲಿ ''ಪೈಗಳೆ...'' ಅಂತ ಕೂಗಿದ್ದು ಕೇಳಿತು. ತಿರ್ಗಿ ನೋಡ್ತಾರೆ ಗಾಂಪ! ''ಎಂತ ಹುಡ್ಕುದು ನೀವು?''

''ದೇವ್ರ ಪೆಟ್ಟಿಗೆ ಮಾರಾಯಾ.''

''ಅದು ಇಲ್ಲಿ ಉಂಟು'' ಅಂತ ಗಾಂಪ ತಾನು ಅಡಗಿಸಿಟ್ಟ ಜಾಗ ತೋರ್ಸಿದ. ಪೈಗಳಿಗೆ ಜೀವ ಬಂದ ಹಾಗಾಯ್ತು. ''ಗಾಂಪಾ... ಈಗ ನೀನೇ ನನ್ನ ದೇವ್ರು ಮಾರಾಯಾ'' ಅಂತ ಹೇಳಿದ್ರು.

ಅಷ್ಟರಲ್ಲಿ ಕಲಾವಿದ್ರೆಲ್ಲ ''ನಮ್ಮನ್ನು ಬೇಗ ಊರಿಗೆ ಕಳ್ಸಿಕೊಡಿ'' ಅಂತ ಗಲಾಟೆ ಮಾಡ್ಲಿಕ್ಕೆ ಸುರು ಮಾಡಿದ್ರು. ಇದ್ದ ಬದ್ದ ಸಾಮಾನುಗಳನ್ನೆಲ್ಲ ಒಟ್ಟು ಮಾಡಿ ಪೆಟ್ಟಿಗೆಗಳಿಗೆ ತುಂಬಿಸಿ ಲಾರಿ ಹತ್ರ ಬಂದ್ರೆ ಎಂತ ಹೇಳುದು? ಟೈರುಗಳ ಗಾಳಿ ತೆಗ್ದಿದ್ರು. ''ಥೂ... ಇದಾಗ್ಲಿಲ್ಲ ಕೆಲ್ಸ!'' ಅಂದ್ರು ಪೈಗಳು. ಅಷ್ಟೊತ್ತಿಗೆ ಗಲಾಟೆ ವಿಷಯ ಕೇಳಿ ಸುರತ್ಕಲ್ಲಿಂದ ಬಂದ ಇಬ್ರು ಪಿ.ಸಿ.ಗಳು, ''ಬೇಗ ಊರು ಸೇರ್ಕೊಳ್ಳಿ ಮಾರ್ರೆ... ಗಲಾಟೆ ಹೆಚ್ಚಾದ್ರೆ ನಾವು ಎಂತದೂ ಮಾಡ್ಲಿಕ್ಕಾಗುದಿಲ್ಲ'' ಅಂದ್ರು. ಪೈಗಳಿಗೆ ದಾರಿಯೇ ಕಾಣ್ಲಿಲ್ಲ. ಎಂಟ್ಹತ್ತು ಯುವ ಕಲಾವಿದ್ರ ಹತ್ರ ಪೆಟ್ಟಿಗೆಗಳನ್ನು ಹೊರ್ಸಿದ್ರು. ಮೇಳದ ದೇವ್ರ ಪೆಟ್ಟಿಗೆಯನ್ನು ಗಾಂಪನೇ ಹೊತ್ತಿದ್ದ. ನಡುರಾತ್ರಿ ಎಲ್ಲಾ ಸುರತ್ಕಲ್ ಹೈವೇಗೆ ಬಂದ್ರು. ಎಲ್ಲಾ ಬೆವರಿ ಚಂಡಿ ಆಗಿದ್ರು. ''ಪೈಗಳೆ ನಾವು ಬೆಳಗಾದ್ಮೇಲೆ ಬರ್ತೇವೆ ಉಚ್ಚಿಲಕ್ಕೆ. ನೀವು ಬೇಕಾದ್ರೆ ದೇವ್ರ ಪೆಟ್ಟಿಗೆ ಗಾಂಪನತ್ರ ಹೊರ್ಸಿಕೊಂಡು ಮುಂದೆ ಹೋಗಿ'' ಅಂದ್ರು ಎಲ್ರು. ಪೋಲೀಸ್ರು ಕೂಡ ಹಾಗೇ ಹೇಳಿದ್ರು. ಲಕ್ಷಾಂತ್ರ ರುಪಾಯಿ ಬೆಲೆ ಬಾಳುವ ದೇವ್ರ ಪೆಟ್ಟಿಗೆ ಹೊತ್ಕೊಂಡು ನಡುರಾತ್ರಿಯಲ್ಲಿ ಹೈವೇಯಲ್ಲಿ ನಿಲ್ಲುದು ಅಪಾಯ ಅಂತ ಪೈಗಳು ಯೋಚಿಸಿದ್ರು. ''ಗಾಂಪಾ, ದೇವ್ರ ಪೆಟ್ಟಿಗೆ ಹೊರ್ತಿಯಾನಾ ಉಚ್ಚಿಲದ ತಂಕ?'' ಅಂತ ಕೇಳಿದ್ರು.

''ಹೊರ್ತೇನೆ. ಕಷ್ಟಕ್ಕೆ ಆಗುವಾಗ ಎಲ್ರಿಗೂ ನಾನೆ ಬೇಕು ಅಲ್ವಾ?'' ಅಂದ.

ಪೈಗಳಿಗೆ ಅವ್ನ ಮಾತು ಕೇಳಿ ಆಶ್ಚರ್ಯ ಆಯ್ತು. ಹಿಂದಿನ ಗಾಂಪನೇ ಅಲ್ಲ ಅಂತ ಅನ್ನಿಸಿತು. ಹಿಂದೆ ಆದ್ರೆ, ''ತಿನ್ಲಿಕ್ಕೆ ಎಂತ ಕೊಡ್ತೀರಿ?'' ಅಂತ ಕೇಳ್ತಿದ್ದ. ಈಗ ಊರು ಬಿಟ್ಟ ಬೋಳೀಮಗ ಎಲ್ಲೋ ಭಾರೀ ವ್ಯವಹಾರ ಕಲ್ತಿದ್ದಾನೆ ಅಂತ ತಿಳ್ಕೊಂಡ್ರು. ಆದ್ರೂ ತೋರಿಸ್ಲಿಲ್ಲ. ದೇಶಾವರಿ ನೆಗಾಡ್ತಾ, ''ಗಾಂಪ ಗಾಂಪ, ಉಚ್ಚಿಲದವರೆಗೆ ಪೆಟ್ಟಿಗೆ ಹೊತ್ಕೊಂಡು ಹೋದ್ರೆ ನೀನು ಎಂತ-ಎಷ್ಟು ಕೇಳ್ತಿಯಾ ಅದನ್ನು ಕೊಡ್ತೇನೆ'' ಅಂದ್ರು.

''ನೀವೆಂತ ಕೊಡುದು ಮಣ್ಣಾಂಗಟ್ಟಿ, ನಾನೇ ತಕೊಳ್ತೇನೆ. ನಡೀರಿ ಬೀಸ ಬೀಸ. ಬೇಗ ಸೇರ್ಬೇಕು. ಹನ್ನೆರಡು ಮೈಲಂದ್ರೆ ಕುಶಾಲಲ್ಲ'' ಅಂತ ಹೇಳಿದವ್ನೆ ದೇವ್ರ ಪೆಟ್ಟಿಗೆ ಹೊತ್ಕೊಂಡು ಗಾಂಪ ಹೊರಟ. ಮುಂದೆ ಮುಂದೆ ಗಾಂಪ. ಹಿಂದೆ ಹಿಂದೆ ಪೈಗಳು. ಅರ್ವತ್ತೈದರ ಪೈಗಳಿಗೆ ಗಾಂಪನ ಸಮ ನಡೀಲಿಕ್ಕೆ ಆಗ್ತಿರ್ಲಿಲ್ಲ. ದಮ್ಮು ಬರ್ತಿತ್ತು. ಆದ್ರೂ ಅವ್ನನ್ನು ಮಾತಿಗೆ ಎಳ್ದು ನಿಧಾನ ನಡಿಯುವ ಹಾಗೆ ಮಾಡ್ಬೇಕು ಅಂತ ಆಲೋಚಿಸಿದ್ರು.

''ಊರಿಂದ ಪರಾರಿಯಾಗಿ ಹೋದವ ಇಷ್ಟು ದಿವ್ಸ ಎಲ್ಲಿದ್ದೀಯಾ?''

''ಲಚ್ಚಿಮಿಗೆ ನೀನೆ ಹೊಟ್ಟೆ ಮಾಡಿದ್ದು ಹೌದನಾ?''

''ಪಾಪ ಲೀಲಾವತಿಯನ್ನು ನೋಡ್ಬೇಕೂಂತ ಒಂದು ಸಾರಿಯು ಅನ್ನಿಸ್ಲಿಲ್ವನಾ ನಿಂಗೆ? ನಿನ್ನಪ್ಪ ಸತ್ತಾಗ ಎಷ್ಟು ಕೂಗಿದ್ಲು ಗೊತ್ತುಂಟಾ? ನಿನ್ನನ್ನು ನೆನಪು ಮಾಡಿಕೊಂಡು?''

ಪೈಗಳ ಇಷ್ಟೂ ಪ್ರಶ್ನೆಗಳಿಗೂ ಗಾಂಪನದ್ದು ''ಹ್ಹೆ... ಹ್ಹೆ...'' ಎನ್ನುವ ನಗುವಿನ ಉತ್ತರ.

ಅಂತೂ ಎದ್ದುಕೂತು ಬೆವ್ರು ಒರೆಸಿಕೊಂಡು ಉಚ್ಚಿಲ ದೇವಸ್ಥಾನದ ಹತ್ರ ಅವ್ರಿಬ್ರೂ ಬಂದಾಗ ಬೆಳಿಗ್ಗೆ ಐದೂವರೆಯ ಹತ್ರ ಆಗಿತ್ತು. ದೇವಸ್ಥಾನದ ಬಾಗಿಲು ತೆಗಿಯುದು ಆರು ಗಂಟೆಗೆ. ''ಪೆಟ್ಟಿಗೆ ಇಲ್ಲೇ ಇಳ್ಸು'' ಅಂದ್ರು ಪೈಗಳು. ಗಾಂಪ ಪೆಟ್ಟಿಗೆ ಇಳಿಸಿದವ್ನೆ, ''ಪೈಗಳೆ ನಾನು ಹೊರಡ್ತೇನೆ'' ಅಂದ. ''ಅರೆ!... ಇರು ಮಾರಾಯಾ. ಮಯ್ಯರ ಹೋಟ್ಳಲ್ಲಿ ಚಾ ಕುಡಿಯುವ. ಆಮೇಲೆ ಇಗಾ... ಪೊಲ್ಯಕ್ಕೆ ಹೋಗುವ. ಪಾಪ ಲೀಲಾವತಿ ನಿನ್ನ ಚಿಂತೆಯಲ್ಲಿ ಹಾಸಿಗೆ ಹಿಡಿದ್ದಾಳೆ'' ಅಂತ ಅವ್ನ ಕೈ ಹಿಡ್ಕೊಂಡು ಪೈಗಳು ಹೇಳಿದ್ರು.

ಕೂಡ್ಲೆ ಗಾಂಪ ಕೈ ಕೊಸರಿ ಅವ್ರ ಸುತ್ತ ಗಿರ್ಕಿ ಹೊಡೀಲಿಕ್ಕೆ ಸುರು ಮಾಡಿದ.

''ತಾಂತ ಧಿನಕ ತೈತ ದಿನಕ
ನಾನು ನಿಮ್ಮ ಗಾಂಪ ಅಲ್ಲ!
ತೈಯ ಧಿನಕ ತೈತ ದಿನಕ
ನಾನು ಪೊಲ್ಯದ ಗಾಂಪ ಅಲ್ಲ!
ನಾನು ಪೊಲ್ಯದ ಗಾಂಪ ಅಲ್ಲ!!''

ಅಂತ ಪೈಗಳ ಸುತ್ತ ಹೇಳ್ತಾ ಗಿರಿ ಗಿರಿ ಸುತ್ತಿದ, ಪೈಗಳಿಗೆ ತಲೆ ತಿರ್ಗಿ ಕಣ್ಣು ಕತ್ಲೆ ಬಂದ ಹಾಗಾಗಿ ದಢಕ್ಕಂತ ಬಿದ್ರು.

ಅವ್ರು ಹಾಗೆ ಬಿದ್ದಿದ್ದು, ಜನ ಎಲ್ಲ ಒಟ್ಟಾಗಿ ಅವ್ರ ಮುಖಕ್ಕೆ ನೀರು ಹಾಕಿ ಎಬ್ಬಿಸುವ ತಂಕ. ಕಣ್ಣು ಬಿಟ್ಟು ನೋಡಿದಾಗ ದೇವ್ರ ಪೆಟ್ಟಿಗೆಯಲ್ಲಿ ಗಣ್ಪತಿ ವಿಗ್ರಹ, ಚಿನ್ನದ ಪ್ರಭಾವಳಿ, ನವರತ್ನದ ಹಾರ ಯಾವ್ದೂ ಇರ್ಲಿಲ್ಲ. ಹಾಗೆಯೇ ಗಾಂಪನೂ!

ಪಿ.ಬಿ. ಪ್ರಸನ್ನ
ವಿಧಾತ್ರಿ, ಮನೆ ನಂ. ೪, ೧೦ನೇ ಮುಖ್ಯರಸ್ತೆ, ಜೆ.ಪಿ. ನಗರ
ಡಿ ಬ್ಲಾಕ್, ಮೈಸೂರು-೫೭೦೦೦೮

## ಸಾದರ ಸ್ವೀಕಾರ

**ವ್ಯಾಖ್ಯಾನ ಭಾಸ್ಕರ ಮತ್ತೂರು ಕೃಷ್ಣಮೂರ್ತಿ**
(ಲೇ. ಮಾಲೆ) ಡಾ॥ ಜಿ.ಎಸ್. ಉಪಾಧ್ಯ
*ಪುಟ : ೭೦* *ಬೆಲೆ : ರೂ. ೪೦*
**ಸಾಹಿತ್ಯ ಬಳಗ**, ಮನುಶ್ರುತಿ, ಸಿ/೪೨/೨/೨
ನಂ. ೨೯, ವಾಸಿ, ನವಿ ಮುಂಬೈ - ೪೦೦ ೭೦೩

**ಪೂರ್ಣಿಮಾ** (ನೆನಪಿನ ಕೃತಿ)
*ಸಂ : ಕವಿತಾಕೃಷ್ಣ*
*ಪುಟ : ೮೮* *ಬೆಲೆ : ರೂ. ೪೦*
**ಪೂರ್ಣಿಮಾಭಿವಂದನ ಸಮಿತಿ**, ೨೪ನೇ ಅಡ್ಡರಸ್ತೆ, ಎಸ್ಐಟಿ ಬಡಾವಣೆ, ತುಮಕೂರು -೫೭೨ ೧೦೩

**ಎಕೂಪೆ ಫೆಬ್ರವರಿ** (ಲೇಖನಗಳು)
*ಸಂ : ಸುಗತ ಶ್ರೀನಿವಾಸರಾಜು*
*ಪುಟ : ೭೦* *ಬೆಲೆ : ರೂ. ೩೦*
**ಸಂಚಯ**, ನಂ. ೧೦೦, ೨ನೇ ಮುಖ್ಯರಸ್ತೆ
೬ನೇ ಬ್ಲಾಕ್, ೩ನೇ ಫೇಸ್, ೩ನೇ ಹಂತ, ಬನಶಂಕರಿ
ಬೆಂಗಳೂರು - ೫೬೦ ೦೮೫

**ಚಿತ್ತಾಟ** (ನೀಳ್ಗತೆ) *ಬಂದಗದ್ದೆ ರಾಧಾಕೃಷ್ಣ*
*ಪುಟ : ೭೮* *ಬೆಲೆ : ರೂ. ೩೦*
**ಪುಸ್ತಕ ಹೊಂಬಾಳೆ**, ಕೆಳದಿ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

**ಶಿಕ್ಷಣ ಸಿರಿ** (ವೀ. ವೀ. ಗಡಾದ ಅಭಿವಂದನ ಗ್ರಂಥ)
*ಸಂ : ಶಿವಶಂಕರ ಹಿರೇಮಠ, ಇತರರು*
*ಪುಟ : ೧೭೦* *ಬೆಲೆ : ರೂ. ೧೦೦*
**ಶ್ರೀ ಜಗದ್ಗುರು ತೋಂಟದಾರ್ಯಮಠ**
ಶ್ರೀ ವೀ. ವೀ. ಗಡಾದ ಅಭಿವಂದನ ಸಮಿತಿ, ಗದಗ

# ಸರ್ಕಾರಿ ಉದ್ಯಮಗಳ ನಷ್ಟಕ್ಕೆ ಕಾರಣಗಳನ್ನು ಹುಡುಕುತ್ತಾ...

ಬಹಳ ಹಿಂದಿನಿಂದಲೂ ನಮ್ಮಲ್ಲಿ ಖಾಸಗಿ ಮತ್ತು ಸಾರ್ವಜನಿಕ ಉದ್ಯಮಗಳ ಕುರಿತು ವಿಭಿನ್ನ ಅಭಿಪ್ರಾಯಗಳು ಇದ್ದೇ ಇವೆ. ಸಾರ್ವಜನಿಕ ಉದ್ಯಮವು 'ದಕ್ಷತೆ'ಯನ್ನು ಅಳವಡಿಸಿಕೊಳ್ಳಲು ಸಾಧ್ಯವಿಲ್ಲವೆಂದು, ಅದಕ್ಕಾಗಿಯೇ ಖಾಸಗಿ ಉದ್ಯಮಗಳ ರೀತ್ಯಾ ಲಾಭಗಳಿಸಲು ಅದಕ್ಕೆ ಅಸಾಧ್ಯವಾಗಿದೆ ಎಂದು – ಯಾವತ್ತೂ ಖಾಸಗೀಕರಣದ ಪರವಾದ ವಾದಿಗಳು ವಾದಿಸುತ್ತಲೇ ಬಂದಿದ್ದಾರೆ. 'ಉದ್ಯಮ'ವೊಂದರ ಲಾಭನಷ್ಟಗಳಿಗೂ ಮತ್ತು ಅದರ 'ಮಾಲಿಕತ್ವದ ಸ್ವರೂಪ'ಕ್ಕೂ ತಳುಕು ಹಾಕುವ ಈ ರೀತಿಯ ವಾದವು ಯಾವ ರೀತಿಯಲ್ಲೂ ಹುರುಳಿಲ್ಲದ್ದು.

'ಸಾರ್ವಜನಿಕ ಉದ್ಯಮ'ಗಳ ನಷ್ಟವನ್ನು ಎತ್ತಿ ಹಿಡಿದು ಮಾತನಾಡುವ ಈ ಖಾಸಗೀಕರಣ ಪರ ಸರದಾರರು ಖಾಸಗಿ ಕಂಪನಿಗಳು ಎಷ್ಟೇ ಲಾಭ ಗಳಿಸಿದರೂ ಸಾರ್ವಜನಿಕ ಉದ್ಯಮಗಳ ಸ್ಥಾಪನೆಯ ಹಿಂದಿರುವ ಉದಾತ್ತ ಆಶಯಗಳನ್ನು ಅಳವಡಿಸಿ ಕೊಳ್ಳಲು ಸಾಧ್ಯವಿಲ್ಲ ಎಂಬುದನ್ನು ಮಾತ್ರ ಮರೆ ಮಾಚಿಸಲು ಯತ್ನಿಸುತ್ತಾರೆ. ವಾಸ್ತವವಾಗಿ ಖಾಸಗಿ ಉದ್ಯಮಗಳು ತಮ್ಮ ಲಾಭಕ್ಕಾಗಿ ಮಾಡುವ ಯತ್ನಗಳ ಭಾಗವಾಗಿಯೇ, ಅಂದರೆ, ಖಾಸಗಿ ಕಂಪನಿಗಳ ಮತ್ತು ಬಂಡವಾಳಗಾರರ ಸಂಚಿನ ಫಲವಾಗಿಯೇ ಸಾರ್ವಜನಿಕ ಉದ್ಯಮಗಳು ನಷ್ಟ ಅನುಭವಿಸುವಂತಾಗುತ್ತವೆ. ಸಾರ್ವಜನಿಕ ಉದ್ಯಮಗಳ ಸಮರ್ಪಕ ಬೆಳವಣಿಗೆಗೆ ಉತ್ತೇಜನ ಸಿಕ್ಕಲ್ಲಿ ಖಾಸಗಿ ಬಂಡವಾಳವು ಮಣ್ಣು ತಿನ್ನದೇ ಬೇರೆ ವಿಧಿಯಿಲ್ಲ. ಆದ್ದರಿಂದ ಬಂಡವಾಳ ಶಾಹಿಯ ಸೇವೆಗೆಂದು ಅಧಿಕಾರ ಹಿಡಿಯುವ ಸರ್ಕಾರ ಗಳು ಮತ್ತು ಅದರ ನೀತಿ ನಿಯಮಾವಳಿಗಳು ಸಹಜವಾಗಿಯೇ ಸಾರ್ವಜನಿಕ ಉದ್ಯಮಗಳನ್ನು ಬೆಳೆಯದಂತೆ ಕಟ್ಟೆಚ್ಚರ ವಹಿಸುತ್ತಿರುತ್ತವೆ. ಬಂಡವಾಳ ಶಾಹಿ ವ್ಯವಸ್ಥೆಯಲ್ಲಿ ಸರ್ಕಾರವು 'ಬಂಡವಾಳದ ಸಾಮಾನ್ಯ ವ್ಯವಹಾರಗಳನ್ನು ನಿರ್ವಹಿಸುವ ಕಾರ್ಯಕಾರಿ ಸಮಿತಿ' ಮಾತ್ರವೇ ಆಗಿರುವುದರಿಂದ, ಅಂತಿಮವಾಗಿ ಸರ್ಕಾರವು ತನ್ನ ಉದ್ಯಮಗಳನ್ನು ತಾನೇ ಕತ್ತು ಹಿಚುಕಲು ಯತ್ನಿಸುವುದರ ಬದಲು ಬೇರೆ ವಿಧಿಯಿಲ್ಲವಾಗಿರುತ್ತದೆ.

> **ದೇಶದ ಬೆನ್ನೆಲುಬುಗಳೆಂದು**
> **ಪರಿಗಣಿಸಲಾದ ಸರಕಾರಿ**
> **ಉದ್ದಿಮೆಗಳು ಒಮ್ಮೆಲೇ ನಷ್ಟದ**
> **ಬಾಬುಗಳಾಗಿ ಬದಲಾದದ್ದು ಹೇಗೆ ?**
> **ಜಾಗತೀಕರಣ, ಉದಾರೀಕರಣ**
> **ಮತ್ತು ಖಾಸಗೀಕರಣಕ್ಕೆ ಭದ್ರವಾದ**
> **ತಳಹದಿ ಹಾಕಿಕೊಡುವ ಹುನ್ನಾರಕ್ಕೆ**
> **ಯಾರು ಹೊಣೆ ?**

**ಅಯ್ಯಪ್ಪ ಹೂಗಾರ್**

ಖಾಸಗಿ ಕಂಪನಿಗಳ ಜೊತೆಗೆ ಪೈಪೋಟಿ ನಡೆಸುವಲ್ಲಿ ಸರ್ಕಾರಿ ಉದ್ಯಮಗಳನ್ನು ಸನ್ನದ್ಧ ಗೊಳಿಸುವ ಬದಲು ಅವುಗಳನ್ನು 'ಕಳಪೆ' ಯನ್ನಾಗಿಸುವ ಮೊದಲ ಪ್ರಯತ್ನವೆಂಬಂತೆ – ಮಾರುಕಟ್ಟೆಯ ಬದಲಾಗುವ ಸ್ಥಿತಿಗಳಿಗೆ ತಕ್ಕಂತೆ ಅವುಗಳನ್ನು ಸಕಾಲದಲ್ಲಿ ಸನ್ನದ್ಧಗೊಳಿಸುವ ಗೋಜಿಗೆ ಸರ್ಕಾರಗಳು ಪ್ರಯತ್ನಿಸದಂತಾಗುತ್ತದೆ. ಈ ಪರಿಸ್ಥಿತಿಯಿಂದಾಗಿ ಅರ್ಧಂಬರ್ಧ ಹಾಳುಬಿದ್ದ ಮೇಲೆ, ಸರ್ಕಾರವು ಅವುಗಳ ನೆರವಿಗೆ ಧಾವಿಸುವ ಯೋಚನೆ ಮಾಡುತ್ತದೆ. ಆ ಚಿಂತನೆಯು ಒಂದು ಯೋಜನೆಯ ರೂಪವನ್ನು ಪಡೆದ ನಂತರ ಬರುವ ನೆರವು ಕೂಡಾ ಉದ್ಯಮದ ಎಲ್ಲಾ ಬೇಡಿಕೆಯನ್ನು ಈಡೇರಿಸಲು ಸಾಕಾಗುವುದಿಲ್ಲ. ವಾಸ್ತವವಾಗಿ ಈ ಬಗೆಯ ಕಾರಣ ಗಳಿಂದಾಗಿಯೇ ನಮ್ಮ ಬಹುತೇಕ ಸಾರ್ವಜನಿಕ ಉದ್ಯಮಗಳು ತ್ರಿಶಂಕುಗಳಾಗಿರುವುದು, ಇಲ್ಲವೇ ಅವುಗಳನ್ನು ತ್ರಿಶಂಕುಗಳನ್ನಾಗಿ ಮಾರ್ಪಡಿಸ ಲಾಗಿರುವುದು. ವಾಸ್ತವವಾಗಿ ಬಂಡವಾಳದ ಕೊರತೆ ಯಿಂದಾಗಿ ಮಾರುಕಟ್ಟೆಯ ಪೈಪೋಟಿಯಲ್ಲಿ ಸೋಲುವ ಇಂತಹ ಸ್ಥಿತಿಯಿಂದ ಒಂದೇ ಹೊಡೆತಕ್ಕೆ ಉದ್ದಿಮೆಗಳನ್ನು ಹೊರತರಲಾಗದ ಅಸಹಾಯಕನಂತೆ ಕೈ ಚೆಲ್ಲುವ ಸರ್ಕಾರದ ಅವಿವೇಕತನದಿಂದಾಗಿ ಉಂಟಾಗುವ ಸಾರ್ವಜನಿಕ ಉದ್ಯಮಗಳ 'ತ್ರಿಶಂಕು ಸ್ಥಿತಿಗತಿ'ಗಳಿಗೆ ಖಾಸಗೀಕರಣವಾದಿಗಳು ಬೇರೆಯದೇ ಗುಲ್ಲುಗಳೊಂದಿಗೆ ಸುಳ್ಳು ಪ್ರಚಾರದಲ್ಲಿ ನಿರತರಾಗುತ್ತಾರೆ. ಇಂತಹ ಗುಲ್ಲುಗಳಲ್ಲಿ ಪ್ರಮುಖವಾದದ್ದು 'ಕಾರ್ಮಿಕರ ಅದಕ್ಷತೆ' ಮತ್ತು 'ಸೋಮಾರಿತನ' ಮತ್ತು ಅಗತ್ಯಕ್ಕಿಂತ ಹೆಚ್ಚಿನ ಸಂಖ್ಯೆಯ ಕಾರ್ಮಿಕರು ಉದ್ಯೋಗ ಹೊಂದಿರುವುದು! ಸರ್ಕಾರವೂ ಕಾರ್ಮಿಕರಿಗೆ ಹೆಚ್ಚು ಶ್ರಮವಹಿಸುವಂತೆ ಬೋಧಿಸತೊಡಗುತ್ತದೆ ಮತ್ತು ನಷ್ಟ ಕಮ್ಮಿ ಮಾಡುವ ನೆಪದಲ್ಲಿ ಕಾರ್ಮಿಕರ ಸವಲತ್ತುಗಳಿಗೆ ಕತ್ತರಿ ಹಾಕುತ್ತದೆ. ಕೆಲವರ 'ಉದ್ಯೋಗ'ಕ್ಕೂ ಕೊಕ್ಕೆ ಹಾಕಲಾಗುತ್ತದೆ ಅಥವಾ ಕೆಲಸದಿಂದ 'ನಿವೃತ್ತಿ'ಗೊಳಿಸಲಾಗುತ್ತದೆ. ಆದರೆ, ಇಷ್ಟೆಲ್ಲಾ ಆದರೂ 'ಉದ್ದಿಮೆ'ಯ ನಷ್ಟ ಮುಂದುವರೆಯುತ್ತದೆ. ಆಗ ಸರ್ಕಾರ ತೆಗೆದುಕೊಳ್ಳುವ ಕ್ರಮ ಏನು ಗೊತ್ತೆ ? ಖಾಸಗೀಕರಣ ! ಅಂದರೆ, ಅದು ಅನೇಕ ವರ್ಷಗಳು ಸರ್ಕಾರದ ಹಣದಿಂದ, ಜನರ ಹಣದಿಂದ ಅಸ್ತಿತ್ವದಲ್ಲಿದ್ದು ಹಲವಾರು ಜನರಿಗೆ ಉದ್ಯೋಗ/ಜೀವನ ಕಲ್ಪಿಸಿ ಒಂದು ಕಾಲಘಟ್ಟದಲ್ಲಿ ಅತ್ಯುತ್ತಮ ಉತ್ಪಾದನೆಯಲ್ಲಿ ತೊಡಗಿದ್ದ ಉದ್ಯಮವನ್ನು ಸರ್ಕಾರ ಖಾಸಗಿ ಮಾಲಿಕರಿಗೆ ಮಾರಿ ಕೈತೊಳೆದುಕೊಳ್ಳುವ ಒಂದು ಕ್ರಮ. ಹೀಗೆಂದೇ ಖಾಸಗೀಕರಣದ ನಿಜವಾದ ಅರ್ಥವು 'ಜನತೆಯ ಮಾಲಿಕತ್ವ'ವನ್ನು ಜನತೆಯ ಮಾಲಿಕತ್ವದ ಹಕ್ಕನ್ನು ಖಾಸಗಿಯವರಿಗೆ ವಹಿಸಿ ಕೊಡುವುದೇ ಆಗಿದೆ. ಅಂದರೆ ಬಂಡವಳಿಗರಿಗೆ ವಹಿಸಿ ಕೊಡುವುದಾಗಿದೆ. ತಮಾಷೆಯೆಂದರೆ, ಯಾವ ಸರ್ಕಾರಿ ಉದ್ಯಮಗಳು ನಷ್ಟದವುಗಳೆಂದು, ಅವುಗಳನ್ನು ಮುಚ್ಚದ ಹೊರತು ಗತ್ಯಂತರವಿಲ್ಲ ವೆಂದು, ಒಟ್ಟಿನಲ್ಲಿ, ಆ ಉದ್ಯಮವೇ ನಿಷ್ಪ್ರಯೋಜಕ ವೆಂದು ಯಾರು ಗುಲ್ಲೆಬ್ಬಿಸುತ್ತಿರುತ್ತಾರೋ, ಅಂದರೆ ಆ ಖಾಸಗಿ ಬಂಡವಾಳಗಾರರು ಸರ್ಕಾರದ ಈ 'ನಷ್ಟಪೀಡಿತ', 'ನಿಷ್ಪ್ರಯೋಜಕ' ಉದ್ಯಮವನ್ನು ಕೊಳ್ಳಲು ಅತ್ಯುತ್ಸಾಹ ತೋರಿಸುತ್ತಾರೆ! ಅಷ್ಟೇ ಅಲ್ಲ, ಕೊಂಡಾದ ಮೇಲೆ ಅದನ್ನು ದಿಢೀರನೆ ಒಂದು ಭಾರಿ ಲಾಭದಾಯಕ ಉದ್ಯಮವನ್ನಾಗಿ ಪರಿವರ್ತಿಸಿ ಬಿಡುತ್ತಾರೆ! ಆದರೆ, ಅವರು ಎಂದಿಗೂ ಸಾಧಿಸಲಾಗ ದಂತಹ ಮಹತ್ವದ ವಿಷಯವೆಂದರೆ ಸಾರ್ವಜನಿಕ ಉದ್ಯಮಗಳಲ್ಲಿನ ಕಾರ್ಮಿಕರು ಅನುಭವಿಸುತ್ತಿರು ವಂತಹ ನ್ಯಾಯೋಚಿತ ಹಕ್ಕುಗಳನ್ನು ಖಾಸಗಿ ಉದ್ಯಮದ ವ್ಯಾಪ್ತಿಯಲ್ಲಿನ ಎಂತಹ ಉದ್ಯೋಗಿಗಳೂ ಅನುಭವಿಸಲಾರರು. ಖಾಸಗಿ ಭಾರಿ ಬಂಡವಾಳ ಗಾರರಿಗೆ ಎಷ್ಟಿದ್ದರೂ 'ಸಾಮಾಜಿಕ ನ್ಯಾಯ'ದ ಪರಿಕಲ್ಪನೆಗಳೆಂದರೆ ಅದು ಒಂದು ಅರ್ಥಹೀನವಾದ ವಿಷಯವೇ ಆಗಿರುತ್ತದಲ್ಲವೆ ? ಈ ಕಾರಣ ದಿಂದಾಗಿಯೇ ಕಾರ್ಮಿಕ ವರ್ಗವು ಯಾವತ್ತೂ ಖಾಸಗೀಕರಣದ ವಿರುದ್ಧ ಇರುತ್ತದೆ.

ಸ್ವಾತಂತ್ರ್ಯಾನಂತರ ಮಿಶ್ರ ಆರ್ಥಿಕತೆಯ ಹೆಸರಲ್ಲಿ ನಮ್ಮ ದೇಶದಲ್ಲಿ ಎರಡು ಬಗೆಯ ಉದ್ಯಮಗಳು ಅಸ್ತಿತ್ವಕ್ಕೆ ಬಂದವು. ಈಗಲೂ ಹಲವು ಸಾರ್ವಜನಿಕ ಉದ್ಯಮಗಳು ಖಾಸಗೀಕರಣವಾದಿಗಳ ಎಲ್ಲಾ ಗುಲ್ಲು-ಸುಳ್ಳುಗಳನ್ನೂ ಮೀರಿ ಲಾಭದಾಯಕವಾಗಿಯೇ ನಡೆಯುತ್ತಿವೆ. ಆದರೆ, ಈ ಎಲ್ಲವನ್ನೂ "ಬೊಕ್ಕಸಕ್ಕೆ

ಭಾರವೆಂದು ಜರೆದಾಗ ಸರ್ಕಾರಕ್ಕೆ ಉತ್ಪಾದನೆಯ ಗೊಡವೆ ಯಾಕಾದರೂ ಬೇಕು ?'' ಎಂಬ ಮುನ್ನುಡಿಯೊಂದಿಗೆ ಖಾಸಗೀಕರಣವಾದಿಗಳು ತಮ್ಮ 'ಸ್ವಾರ್ಥ', 'ಲಾಭ ಬಡುಕತನ'ಗಳಿಗೆ ಮತ್ತು ಕಾರ್ಮಿಕರ ಶೋಷಣೆಗೆ ಪಾವಿತ್ರ್ಯವನ್ನು ಪ್ರಾಪ್ತಗೊಳಿಸಿಕೊಳ್ಳುವಂತೆ ಮಾತಾಡುತ್ತಿದ್ದಾರೆ. ೧೯೮೦ರ ದಶಕದಲ್ಲಿ ಮೊಳಕೆಯೊಡೆದ ಈ ಪರಿಕಲ್ಪನೆ ೯೦ರ ದಶಕದ ಆರಂಭದಲ್ಲಿ ಜಾಗತೀಕರಣ ನೀತಿಗಳ ಹೇರಿಕೆಯೊಂದಿಗೆ ವರ್ಷಕ್ಕೆ ಅಷ್ಟಷ್ಟು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಸಾಗಿದೆ. ಈಗಾಗಲೇ ದೇಶಾದ್ಯಂತ ಹಲವಾರು ದೊಡ್ಡ ಸಾರ್ವಜನಿಕ ಉದ್ಯಮಗಳನ್ನು ಖಾಸಗೀಕರಣವು ನುಂಗಿ ನೀರು ಕುಡಿದಿದೆ.

ಲಕ್ಷಾಂತರ ಕಾರ್ಮಿಕರನ್ನು ಸ್ವಯಂನಿವೃತ್ತಿಯ ಹೆಸರಲ್ಲಿ ಉದ್ಯೋಗದಿಂದ ಹೊರದಬ್ಬಿದೆ. ಖಾಸಗೀಕರಣದ ಕಾರ್ಮಿಕರಿಗೆ ಉದ್ಯೋಗಕ್ಕೆ ಭದ್ರತೆಯೇ ಇರುವುದಿಲ್ಲ. ಅಲ್ಲದೆ ಖಾಸಗೀಕರಣದ ಪ್ರಕ್ರಿಯೆಯಲ್ಲಿ ಬಹುಪ್ರಿಯವಾದ ಉದ್ಯೋಗ ಪದ್ಧತಿಯೆಂದರೆ ಗುತ್ತಿಗೆ ಕಾರ್ಮಿಕರ ಪದ್ಧತಿಯಾದ್ದರಿಂದ ಅದರಿಂದ ಸೃಷ್ಟಿಸಲಾಗುವ ಉದ್ಯೋಗಗಳಲ್ಲಿ ಸೇರಿಕೊಳ್ಳುವವರಿಗೆ 'ನಿವೃತ್ತಿ ವೇತನ'ದಂತಹ ಮುಪ್ಪಿನ ಕಾಲದ ಸವಲತ್ತುಗಳು ಇರುವುದಾದರೂ ಹೇಗೆ ? 'ಲಾಭ'ವು ಅದರ ಮೂಲಮಂತ್ರವಾದ್ದರಿಂದ ಅದು ಕಾರ್ಮಿಕ ವರ್ಗದ ಜೀವನವನ್ನು ನೇರವಾಗಿ ಮಾರುಕಟ್ಟೆಯಡಿ ಬೆಸೆಯುತ್ತದೆ. ಹೀಗಾಗಿ ಕಾರ್ಮಿಕರಿಗೆ ಉತ್ಪಾದನೆಯ ಪ್ರಮಾಣವನ್ನು ಕಡ್ಡಾಯವೆಂದು ನಿಗದಿಗೊಳಿಸಲಾಗುವುದರಿಂದ ಕಾರ್ಮಿಕರು ಅನಿವಾರ್ಯವಾಗಿ ಹೆಚ್ಚು ಶ್ರಮವಹಿಸಿ ದುಡಿಯಬೇಕಾಗುತ್ತದೆ. ಖಾಸಗೀಕರಣವು ಅವೈಜ್ಞಾನಿಕ ಶ್ರಮ ಪದ್ಧತಿಯನ್ನು ಹೇರುವುದರ ಫಲವಾಗಿ ಅದು ನೇರವಾಗಿ ಕಾರ್ಮಿಕರ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ಸದ್ದಿಲ್ಲದಂತೆ ಸಾಗುವ ಖಾಸಗೀಕರಣವೆಂಬ ಮಾರಿಯ ಈ ದಾಳಿಯು ಕಾರ್ಮಿಕರ ಬದುಕನ್ನು ನರಕವಾಗಿಸಲು ಯತ್ನಿಸುತ್ತದೆ. ಅದು ಸದಾ ಕಾರ್ಮಿಕ ವರ್ಗದ ಸಂಘಟಿತ ಪ್ರಜ್ಞೆಯ ಮೇಲೆ ನಡೆಸುತ್ತಾ ಅವರನ್ನು ಅತಂತ್ರ ಸ್ಥಿತಿಗೆ ತಳ್ಳಿ ಅನವಶ್ಯಕ ಚಿಂತೆಯಲ್ಲಿ ಅವರು ಕಾಲ ಕಳೆಯುವಂತೆ ಪರಿಸ್ಥಿತಿಗಳನ್ನೇರ್ಪಡಿಸುತ್ತದೆ. ಹೀಗಾಗಿಯೇ ಸಂಘಟಿತ ಕಾರ್ಮಿಕ ವರ್ಗ ಯಾವತ್ತೂ ಖಾಸಗೀಕರಣವನ್ನು ವಿರೋಧಿಸುತ್ತದೆಯೇ ವಿನಾ ಖಾಸಗೀಕರಣವಾದಿಗಳು ಹೇಳುವಂತೆ 'ಸೋಮಾರಿತನ'ದ ಕಾರಣದಿಂದಲ್ಲ. ಆದರೆ, ಯಾವಾಗಲೂ ಈ ಸತ್ಯವನ್ನು ಮುಚ್ಚಿಡಲು ಬಂಡವಾಳಶಾಹಿ ವ್ಯವಸ್ಥೆ ಪ್ರಯತ್ನಿಸುತ್ತಲೇ ಇರುತ್ತದೆ. ವರ್ಗ ವಿಭಜಿತ ಸಮಾಜವೊಂದರಲ್ಲಿ ಪ್ರತ್ಯೇಕ ಘಟನೆಗಳನ್ನು ಆಯ್ದುಕೊಂಡು ಯಾವತ್ತೂ ವಿಭಿನ್ನ ರೀತಿಯಲ್ಲಿ ತರ್ಕಿಸಲು ವಾದ ಹೂಡಲು ಸಾಧ್ಯವಿರುವುದರಿಂದಾಗಿ ಬೂರ್ಜ್ವಾ ಬುದ್ಧಿಜೀವಿಗಳು ಹಲವಾರು ವಾದಗಳನ್ನು, ತರ್ಕಗಳನ್ನು ಸಮಾಜದ ಮುಂದಿಡುತ್ತಾ, ಖಾಸಗೀಕರಣದ 'ಮಾನವಪ್ರೇಮ'ವನ್ನು ಅದರ 'ಮುಕ್ತಾಮುಕ್ತತೆ'ಯನ್ನು, ಅದರೊಳಗೆ ಅಂತರ್ಗತವಾಗಿರುವ 'ಅಭಿವೃದ್ಧಿಯ ಕೀಲಿಕೈ'ಯನ್ನು ತೋರಿಸುತ್ತಲೇ ಇರುತ್ತಾರೆ. ಮಾಧ್ಯಮಗಳೂ ಬಂಡವಳಿಗರ ಕೈವಶವೇ ಆಗಿರುವುದರಿಂದ ಅವು ಕೂಡಾ ಈ ನಿಟ್ಟಿನಲ್ಲಿ ಅವಕ್ಕೆ ಅತ್ಯದ್ಭುತ ಸೇವೆ ಸಲ್ಲಿಸುತ್ತಿರುತ್ತವೆ.

**ಕರ್ನಾಟಕ ಸರ್ಕಾರಿ ಉದ್ಯಮಗಳ ಕತ್ತು ಹಿಚುಕುವ ಯತ್ನ**

ಇತ್ತೀಚೆಗೆ ಪ್ರಸಿದ್ಧ ಕನ್ನಡ ದಿನಪತ್ರಿಕೆಯ ವರದಿಗಾರರೊಬ್ಬರು ಕರ್ನಾಟಕದ ಸರ್ಕಾರಿ ಉದ್ಯಮಗಳ ಬಗ್ಗೆ 'ರೋಚಕ' ಸುದ್ದಿಯೊಂದನ್ನು ಬರೆದರು. ಅವರ ವರದಿಯ ಮೊದಲ ಪ್ರಶ್ನೆ, ''ನೀವು, ೩೪, ೬೫೫ ಕೋಟಿ ಬಂಡವಾಳ ಹೂಡಿದರೆ ಎಷ್ಟು ಲಾಭ ಬರಬೇಕೆಂದು ನಿರೀಕ್ಷಿಸುತ್ತೀರಿ ?'' ಎಂಬುದಾಗಿತ್ತು. ತೀರಾ ಇತ್ತೀಚಿನ ಅಂಕಿಅಂಶಗಳ ಆಧಾರದ ಮೇಲೆ ಕರ್ನಾಟಕ ಸರ್ಕಾರವು ತನ್ನ ಸ್ವಾಮ್ಯದ ಉದ್ದಿಮೆಗಳ ಮೇಲೆ ಶೇ. ೨೦.೩ರಷ್ಟು ಹೆಚ್ಚು ಬಂಡವಾಳ ಹೂಡಿದೆಯಂತೆ. ಅವರ ಆಧಾರದ ಪ್ರಕಾರ ೨೦೦೧-೦೨ರಲ್ಲಿ ೧೦,೫೦೬ ಕೋಟಿ ಮತ್ತು ೨೦೦೨-೦೩ರಲ್ಲಿ ೧೨,೬೭೩ ಕೋಟಿ ರೂಪಾಯಿಗಳನ್ನು ಹೂಡಲಾಗಿರುವುದರಿಂದ ಈ ಹೊತ್ತಿನ ರಾಜ್ಯ ಸರ್ಕಾರಿ ಸ್ವಾಮ್ಯದ ಉದ್ಯಮಗಳಲ್ಲಿ ಹೂಡಲಾಗಿರುವ ಒಟ್ಟು ಬಂಡವಾಳವು ೩೪,೬೫೫ ಕೋಟಿ ರೂಪಾಯಿಯಷ್ಟು. ಆದರೆ ಇಷ್ಟೆಲ್ಲಾ ಬಂಡವಾಳ ಹೂಡಿದಾಗ್ಯೂ ಕರ್ನಾಟಕ ಸರ್ಕಾರ ಅನುಭವಿಸುತ್ತಿರುವ ನಷ್ಟ ೪೧ ಕೋಟಿ ರೂಪಾಯಿಯಂತೆ.

ಆ ವರದಿಯ ಪ್ರಕಾರ ರಾಜ್ಯದಲ್ಲಿನ ಒಟ್ಟು ೯೦ ಸರ್ಕಾರಿ ಉದ್ದಿಮೆಗಳಲ್ಲಿ ೪೦ ಉದ್ದಿಮೆಗಳು ೪೯೮.೫೫ ಕೋಟಿ ನಿವ್ವಳ ಲಾಭ ಗಳಿಸಿದ್ದರೆ, ಉಳಿದ ಉದ್ದಿಮೆಗಳು ೫೩೯.೬೧ ಕೋಟಿ ನಿವ್ವಳ ನಷ್ಟ ಅನುಭವಿಸಿವೆ. ಅಂದರೆ ಸರ್ಕಾರದ ಬೊಕ್ಕಸಕ್ಕೆ ೪೧.೦೬ ಕೋಟಿ ರೂಪಾಯಿಗಳ ಕತ್ತರಿ. ಹಾಗೆಯೇ ಈ ಹಿಂದಿನ ಎಲ್ಲಾ ವರ್ಷಗಳಲ್ಲಿ ಅನುಭವಿಸಲಾದ ನಷ್ಟ ೨,೫೨೮ ಕೋಟಿ.




ಈ ಮಹನೀಯರು ಇನ್ನೊಂದು ಸ್ವಾರಸ್ಯಕರ ಅಂಶವನ್ನೂ ತಿಳಿಸುತ್ತಾರೆ. ೨೦೦೧-೦೨ರ ಸಾಲಿನಲ್ಲಿ ವಿವಿಧ ರೂಪದಲ್ಲಿ ಈ ಎಲ್ಲಾ ಉದ್ದಿಮೆಗಳು ನೀಡಿದ್ದ ತೆರಿಗೆ ೪೯೯.೬೫ ಕೋಟಿ ರೂಪಾಯಿಗಳಾದರೆ ೨೦೦೨-೦೩ರಲ್ಲಿ ಅಂದರೆ ಮಾರನೆಯ ವರ್ಷ ಕೇವಲ ೨೬೦.೧೧ ಕೋಟಿಗೆ ಇಳಿದಿರುವುದು! ತಮಗೆ ಲಭ್ಯವಾದ ಮಾಹಿತಿಗಳನ್ನು, ಅದರ ಹಿಂದಿನ ವಾಸ್ತವಿಕ ಸತ್ಯಗಳನ್ನು ವಿಶ್ಲೇಷಿಸುವ ಗೊಡವೆಗೇ ಅವರು ಹೋಗದೆ ನೇರವಾಗಿ ಈ ತೆರಿಗೆ ಇಳಿಕೆಯ ಬಗ್ಗೆ ಪ್ರಸ್ತಾಪಿಸುತ್ತಾರೆ. ಒಂದು ವರ್ಷದಲ್ಲಿ ಸರ್ಕಾರಕ್ಕೆ ಸಲ್ಲಬೇಕಾದ ತೆರಿಗೆಯಲ್ಲಿ (೪೯೯.೬೫-೨೬೦.೧೧) ೨೩೯.೫೪ ಕೋಟಿ ರೂಪಾಯಿ ಕಡಿತವೆಂದರೆ, ಅದಕ್ಕೆ ಕಾರಣವೇನು ಎಂದು ಯೋಚಿಸಲೂ ಅವರು ಹೋಗಿಲ್ಲ. ಯಾಕೆಂದರೆ ಖಾಸಗೀಕರಣವನ್ನು ಅವರು ಪ್ರೋತ್ಸಾಹಿಸುತ್ತಾರೋ ಇಲ್ಲವೋ ಒಟ್ಟಿನಲ್ಲಿ, ಸರ್ಕಾರಿ ಉದ್ಯಮಗಳನ್ನು ಹಳಿಯುವುದು ಮಾತ್ರ ತುಂಬಾ ಇಷ್ಟವೆನಿಸುವಂತೆ ಸುದ್ದಿಯನ್ನು ರೋಚಕಗೊಳಿಸಿ ಬರೆದಿದ್ದಾರೆ. ಆ ಮೂಲಕ ಅವರು ಖಾಸಗೀಕರಣ ಪರ ವಾದಿಗಳ ಪಾದ ಸೇವೆಯಲ್ಲಿ ತೊಡಗಿರುವುದಂತೂ ಸತ್ಯ ಎಂಬುದಕ್ಕೆ ಅವರು ಸಾದರಪಡಿಸಿರುವ 'ಆಧಾರ'ವೇ ಸಾಕ್ಷಿ.

ಕರ್ನಾಟಕ ಸರ್ಕಾರದ ಉದ್ಯಮಗಳು ಬೊಕ್ಕಸಕ್ಕೆ ಭಾರವಾಗಿರುವವೆಂದು ತೋರಿಸಿರುವ ಪ್ರಸಕ್ತ ವರದಿಗಾರರಿಗೆ ಆಧಾರವಾಗಿ ನಿಂತಿರುವುದು ರಾಜ್ಯ ಬಂಡವಾಳ ಹಿಂತೆಗೆತ ಮತ್ತು ರಾಜ್ಯ ಸರ್ಕಾರಿ ಸ್ವಾಮ್ಯದ ಉದ್ದಿಮೆಗಳ ಸುಧಾರಣಾ ಇಲಾಖೆಯ ೨೦೦೨-೦೩ರ ಅಂಕಿ ಅಂಶಗಳು. ಅಂದರೆ, ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಉದ್ದಿಮೆಗಳನ್ನು, ಅವು ಲಾಭದಾಯಕವಾಗಿರಲಿ ಇಲ್ಲದಿರಲಿ, ಒಟ್ಟಿನಲ್ಲಿ ಅವುಗಳನ್ನು ಖಾಸಗೀ ಬಂಡವಾಳಗಾರರಿಗೆ ಮಾರಬೇಕೆಂದು ಒತ್ತಡ ಹೇರಿದ 'ವಿಶ್ವಬ್ಯಾಂಕಿನ' ನಿರ್ದೇಶನಗಳಡಿಯಲ್ಲಿ ಸೃಷ್ಟಿಗೊಂಡ ಇಲಾಖೆಯ ಅಂಕಿ ಅಂಶಗಳಿವು ! ಈ ಇಲಾಖೆಯು ಜನ್ಮ ತಳೆದದ್ದೇ ೨೦೦೨ರ ಆಗಸ್ಟ್‌ನಲ್ಲಿ! ಇಂತಹದೊಂದು ಉದ್ದೇಶದೊಂದಿಗೆ – ತೀರಾ ಇತ್ತೀಚೆಗೆ ದಿಢೀರೆಂದು ಸೃಷ್ಟಿಗೊಂಡ ಸಂಸ್ಥೆಯೊಂದರ ಅಂಕಿ ಅಂಶಗಳನ್ನು ೫೦ ವರ್ಷಗಳಿಗೂ ಮೀರಿದ ಇತಿಹಾಸವುಳ್ಳ, ಕರ್ನಾಟಕ ಸರ್ಕಾರದ ಸ್ವಾಮ್ಯದಲ್ಲಿರುವ ಉದ್ದಿಮೆಗಳ ಮೇಲೆ ಹೇರುವುದು ಎಷ್ಟು ಸರಿ ?

ಕೊನೆಯ ಮಾತು : ಜಾಗತೀಕರಣ-ಉದಾರೀಕರಣ-ಖಾಸಗೀಕರಣದ ಈ ಕಾಲಾವಧಿಯಲ್ಲಿ ಸುಳ್ಳುಗಳಿಗೆ ರಂಗು ಬಳಿದು ಮಾರುವುದೂ – ಒಂದು ಉದ್ಯಮವಾಗಿ ಬೆಳೆಯುತ್ತಿದೆ. ಲಭ್ಯವಾಗುವ ಮಾಹಿತಿಯನ್ನು ವಾಸ್ತವಿಕತೆಯೊಂದಿಗೆ ತುಲನೆ ಮಾಡಿದಾಗ ಮಾತ್ರ ಈ ಸತ್ಯ ತಿಳಿಯಬಲ್ಲದು.

**ಅಯ್ಯಪ್ಪ ಹೂಗಾರ್**
೨೫/೧, ವಿನೋಬಾ ರಸ್ತೆ, ಜಯಲಕ್ಷ್ಮಿಪುರಂ
ಮೈಸೂರು - ೧೨





# ಡಿಜಿಟಲ್ ಭ್ರಮಾಲೋಕದ ಸೃಜನಶೀಲ ಕಲಾವಿದ ಸತ್ಯ



ಸೃಜನಾತ್ಮಕ ಕಲೆಯಾಗಿ ಪ್ರವರ್ಧಮಾನಕ್ಕೆ ಬರುತ್ತಿರುವ 'ಡಿಜಿಟಲ್ ಕಲಾ ಮಾಧ್ಯಮ' ಭ್ರಮಾಲೋಕದ ಕೊಡುಗೆಯಾಗಿ ಉಳಿಯುವಂತಹುದು. ಡಿಜಿಟಲನ್ನೇ ಸವಾಲಾಗಿ ಸ್ವೀಕರಿಸಿರುವ ಮೈಸೂರಿನ ಸತ್ಯ, ಶಾರದಾವಿಲಾಸ ಶಾಲೆಯಲ್ಲಿ ಐದನೇ ತರಗತಿ ಓದುವಾಗಲೇ ಬ್ಯಾನರ್ ರಚನೆ ಮಾಡುತ್ತಿದ್ದರು. ನಂತರ ಬೆಂಗಳೂರಿನ ಪಿ. ಎಂ. ರಾಜು ಬಳಿ ೧೯೭೧ರಿಂದ ನಾಲ್ಕು ವರ್ಷ ಕಲಿತರು. ಆಮೇಲೆ ಮುಂಬೈನ ರೈವಲ್ ಆರ್ಟ್ಸ್ ಮತ್ತು ಸೌಂಡ್ ಸ್ಟುಡಿಯೋಗಳಲ್ಲಿ ಅನುಭವ. ಪ್ರತಿಭೆಯಿಂದಾಗಿ ಕೇರಳ, ಆಂಧ್ರ ರಾಜ್ಯಗಳಿಂದ ವಿಶೇಷ ಕರೆ. ೧೯೮೪ರಲ್ಲಿ ಡಿಜಿಟಲ್ ತಂತ್ರ ಕಲಿಕೆಗೆ ಎಂಪೈರ್ ಸ್ಟುಡಿಯೋ ಮೀಸಲಾಯಿತು.

ದುಬಾರಿ ಕಲಿಕೆಯು ಅಸಾಧ್ಯವಾಯಿತು.

ವಂದೇ ಮಾತರಂ, ಹೂವು ಹಿಡಿದಿರುವ ಚಿತ್ರ, ನಿಸರ್ಗ, ಕನ್ಯಾಕುಮಾರಿ ಸಮುದ್ರತೀರ, ಅರಳಿದ ಹೂವುಗಳು, ಮೊದಲಾದ ಚಿತ್ರಗಳು ಕಣ್ ತಣಿಸುತ್ತವೆ.

ಖ್ಯಾತ ಕಲಾವಿದ ಎಂ. ಎಫ್. ಹುಸೇನರು ಇವರ ಚಿತ್ರಗಳನ್ನು ಕಂಡು ಪ್ರಶಂಸಿಸಿದ್ದಾರೆ. ಇವರ ಪ್ರಥಮ ಡಿಜಿಟಲ್ ಚಿತ್ರಕಲಾ ಪ್ರದರ್ಶನ ಇತ್ತೀಚೆಗೆ ಮೈಸೂರಲ್ಲಿ ಜರುಗಿತು.

- ಬಿ. ಎಂ. ರಾಜನ್
ಕಲಾ ವಿಮರ್ಶಕ
ಥಿಯೋಬಾಲ್ಡ್ ರಸ್ತೆ, ನಜರ್‌ಬಾದ್, ಮೈಸೂರು



*ಮಾಸಿ ವಿರೂಪವಾಗಿರುವ ಸುಂದರ ಚಿತ್ರವನ್ನು ಹಂತ ಹಂತವಾಗಿ ಡಿಜಿಟಲ್ ಮೂಲಕ ಮೂಲ ರೂಪಕ್ಕೆ ತರಬಹುದೆಂಬುದಕ್ಕೆ ತಿನೇ ಹಂತದ ಸಿದ್ಧತೆಯಲ್ಲಿರುವ ಕಲಾಕೃತಿ*



# ಓದುಗ ಲೋಕಕ್ಕೆ ವ್ಯಕ್ತಿ ವಿಕಸನ





**ಬಿಡುವಿನ ವೇಳೆಯ ಸದುಪಯೋಗ ಹೇಗೆ ?** — *ಕಮಲಾ ರಾಮಸ್ವಾಮಿ*

ನಾವು ಸಾಕಷ್ಟು ಸಮಯ ಪೋಲು ಮಾಡಿದರೂ 'ಅಯ್ಯೋ! ಟೈಂ ಎಲ್ಲಿದೆ ಮಾರಾಯ' ಅಂಥ ಬಡಬಡಿಸುತ್ತೇವೆ. ಸಿಕ್ಕ ಸಮಯವನ್ನು ಸಮರ್ಥವಾಗಿ, ಸೃಜನಾತ್ಮಕವಾಗಿ ಬಳಸಿಕೊಳ್ಳುವ ಮನೋಭಾವವಿದ್ದಲ್ಲಿ ಪ್ರತಿಕ್ಷಣ ಕೂಡ ಅಮೂಲ್ಯವಾದುದೆ. ಬಿಡುವಿನ ವೇಳೆಯಲ್ಲಿ ಕಾಲಹರಣ ಮಾಡುವ ಬದಲು ಈ ಪುಸ್ತಕ ಓದಿ ಸದುಪಯೋಗ ಪಡೆದುಕೊಳ್ಳಿ.

*ಡಾ|| ಪಿ. ಎಸ್. ಗೀತಾ* — **ಕಾಲೇಜು ವಿದ್ಯಾರ್ಥಿನಿಯರ ವ್ಯಕ್ತಿತ್ವ ವಿಕಾಸ ಹೇಗೆ ?**

ಕಾಲೇಜು ಅಂದಕೂಡಲೆ ಅಲ್ಲೊಂದು 'ಜೋಶ್' ಕಂಡುಬರುತ್ತದೆ. ಓದು, ಆತ್ಮೀಯರ ಒಡನಾಟ, ತುಂಟಾಟ ಅಲ್ಲಿ ಸಹಜ. ಈ ನಡುವೆ ವಿದ್ಯಾರ್ಥಿಗಳ ವ್ಯಕ್ತಿತ್ವ ಅಲ್ಲೆಲ್ಲಿಯೋ ಕಳೆದುಹೋಗಬಾರದು. ತಮ್ಮ ಬದುಕನ್ನು ಸುಂದರವಾಗಿ ರೂಪಿಸಿಕೊಳ್ಳಲು ಅವರು ಚಿಂತಿಸಬೇಕು. ಆ ಚಿಂತನೆಗೆ ಒತ್ತಾಸೆಯಾಗಿ ನಿಲ್ಲಬೇಕಾದವರು ಹೆತ್ತವರು ಮತ್ತು ಅಧ್ಯಾಪಕರು. ಇವರು ಮಕ್ಕಳ ಬಗ್ಗೆ ಸಹಾನುಭೂತಿಯಿಂದ ವರ್ತಿಸುವುದು ಅಗತ್ಯವಾಗುತ್ತದೆ. ಆ ದಿಸೆಯಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ.





**ಅನ್ಯೋನ್ಯ ದಾಂಪತ್ಯ ಹೇಗೆ ?** — *ಡಾ|| ಸಿ. ಆರ್. ಚಂದ್ರಶೇಖರ್*

ಗಂಡ-ಹೆಂಡತಿ ಪರಸ್ಪರ ಹೊಂದಿಕೊಂಡು ಪ್ರೀತಿ-ವಿಶ್ವಾಸದಿಂದ ಬಾಳಲು ಕಲಿಯಬೇಕು. ಇಲ್ಲದಿರೆ ದಾಂಪತ್ಯ ಸೂತ್ರ ಕಳೆದ ಗಾಳಿಪಟವಾಗುತ್ತದೆ. ಅಲ್ಲಿ ಯಾರಿಗೂ ನೆಮ್ಮದಿಯಿರುವುದಿಲ್ಲ. ದಾಂಪತ್ಯವನ್ನು ಅನ್ಯೋನ್ಯವಾಗಿಸಿ, ಪರಸ್ಪರ ಸಾಮರಸ್ಯದಿಂದ ಬಾಳುವುದು ಹೇಗೆ? ಸಾಮರಸ್ಯಕ್ಕೆ ಕುಂದುಂಟಾಗುವ ಸಂದರ್ಭ ಬಂದಾಗ ಏನು ಮಾಡಬೇಕು ? ಸಮಸ್ಯೆಗಳನ್ನು ಯಾರಲ್ಲಿ ಹೇಳಿಕೊಂಡು ಪರಿಹಾರಕ್ಕೆ ಪ್ರಯತ್ನಿಸಬೇಕು ? ಈ ಪುಸ್ತಕ ಓದಿ ತಿಳಿಯಿರಿ.

*ಡಾ|| ಸಿ. ಆರ್. ಚಂದ್ರಶೇಖರ್* — **ಮನಸ್ಸೇ ನೀ ಪ್ರಶಾಂತವಾಗಿರು**

ಮನಸ್ಸು ತಿಳಿಯಾದ ಪ್ರಶಾಂತ ಕೊಳದ ಹಾಗಿರಬೇಕು. ಅಲ್ಲಿ ಪುಟ್ಟದೊಂದು ಕಲ್ಲು ಬಿದ್ದರೂ ಅದು ಕದಡಿ ಬಗ್ಗಡವಾಗುತ್ತದೆ. ಮನಸ್ಸು ಗೊಂದಲದ ಗೂಡಾಗುತ್ತದೆ. ಹಾಗಾದರೆ ಇಂದಿನ ಈ ಗಡಿಬಿಡಿಯ ಜೀವನದಲ್ಲಿ ಮನಸ್ಸು ಪ್ರಶಾಂತವಾಗಿರಲು ಏನು ಮಾಡಬೇಕು ? ಏನಾದರೂ ಸರಳ ಕ್ರಮಗಳಿವೆಯೇ ? ಅವು ಯಾವುವು ಎಂಬುದನ್ನು ಕುರಿತ ಪುಸ್ತಕ ಇದು.





**ನಮ್ಮ ಆಹಾರ ಹೇಗಿರಬೇಕು ?** — *ಡಾ|| ನಾ. ಸೋಮೇಶ್ವರ*

'ಊಟ ಬಲ್ಲವನಿಗೆ ರೋಗವಿಲ್ಲ' ಅನ್ನುವ ಮಾತಿದೆ. ಆರೋಗ್ಯವಂತರಾಗಿರಲು ಉತ್ತಮ, ಹಿತಮಿತ ಆಹಾರ ಸೇವನೆ ಅಗತ್ಯ. ಯಾವುದನ್ನು ತಿನ್ನಬೇಕು ? ಯಾವುದನ್ನು ಬಿಡಬೇಕು ಎನ್ನುವ ಪರಿಜ್ಞಾನವಿಲ್ಲದಿದ್ದರೆ, ಸಿಕ್ಕಿದ್ದನ್ನು ಮುಕ್ಕಿದರೆ ದೇಹ ರೋಗದ ಗೂಡಾಗುತ್ತದೆ. ಹಾಗಾದರೆ ನಮ್ಮ ಆಹಾರ ಹೇಗಿರಬೇಕು ? ಸೇವನೆಯ ಮಧ್ಯೆ ಇರಬೇಕಾದ ಕಾಲದ ಅಂತರ ಎಷ್ಟು ? ಸಮತೂಕದ ಆಹಾರವೆಂದರೇನು ? ಯಾವ ಆಹಾರ ನಮಗೆ ಒಳ್ಳೆಯದು ? ಓದಿ ನೋಡಿ.

*ಡಾ|| ಜಾನಕಿ ಸುಂದರೇಶ್* — **ನೀವು ಚೆನ್ನಾಗಿ ಆಲೋಚಿಸಬಲ್ಲಿರಾ ?**

ಪ್ರತಿಯೊಂದು ಮನಸ್ಸು ಸಕಾರಾತ್ಮಕವಾಗಿ, ಸೃಜನಶೀಲವಾಗಿ ಆಲೋಚಿಸಲು ಕಲಿಯಬೇಕು. ಇದರಿಂದ ಜೀವನ, ಸಮಾಜ ಮತ್ತಷ್ಟು ಸಹ್ಯವಾಗಿ ಹೊಸ ಆವಿಷ್ಕಾರಗಳಿಗೆ ನಾಂದಿಯಾಗುತ್ತದೆ. ಇಂತಹ ಆರೋಗ್ಯಪೂರ್ಣ ಆಲೋಚನೆಗಳು ಯಾವುವು ? ನಕಾರಾತ್ಮಕ ಆಲೋಚನೆಗಳ ನಿವಾರಣೆ ಹೇಗೆ ? ಚೆನ್ನಾಗಿ ಆಲೋಚಿಸಲು ಬಯಸುತ್ತೀರಾ ? ಈ ಕೃತಿ ಓದಿ.

## ವ್ಯಕ್ತಿ ವಿಕಸನ ಮಾಲೆ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

ಡಾ|| ಎಂ. ಎಸ್. ತಿಮ್ಮಪ್ಪ
ಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾನಿಲಯ
ಅವರ ಅಧ್ಯಕ್ಷತೆ ಮತ್ತು
'ಪ್ರಸಕ್ತ ಪರಿಸ್ಥಿತಿಯಲ್ಲಿ ಮನೋವಿಕಾಸ ಹೇಗಿರಬೇಕು ?'
ಕುರಿತು ಉಪನ್ಯಾಸ

ಶ್ರೀ ನಾಗತಿಹಳ್ಳಿ ಚಂದ್ರಶೇಖರ
ಸಾಹಿತಿ ಮತ್ತು ಚಲನಚಿತ್ರ ನಿರ್ದೇಶಕ
ಅವರಿಂದ ಪುಸ್ತಕಗಳ ಅನಾವರಣ

ಡಾ|| ಸಿ. ಆರ್. ಚಂದ್ರಶೇಖರ್
ಮಾಲೆಯ ಸಂಪಾದಕ
ಅವರಿಂದ ಪ್ರಾಸ್ತಾವಿಕ ಭಾಷಣ

ಮಾಲೆಯ ಎಲ್ಲಾ ಲೇಖಕರು ಭಾಗವಹಿಸುತ್ತಾರೆ

**ಪುಸ್ತಕಗಳ ಅನಾವರಣ**

**ದಿನಾಂಕ 12-12-2004**
**ಭಾನುವಾರ ಬೆಳಿಗ್ಗೆ 10.30ಕ್ಕೆ**
**ಯವನಿಕಾ ಸಭಾಂಗಣ**
**ನೃಪತುಂಗ ರಸ್ತೆ, ಬೆಂಗಳೂರು**

ಎಲ್ಲರಿಗೂ ಹಾರ್ದಿಕ ಸ್ವಾಗತ

# ...ಮಾಲೆಯ ಪುಸ್ತಕಗಳ ಅರ್ಪಣೆ





**ನೀವು ಯಶಸ್ವೀ ಗೃಹಿಣಿಯೇ ?** — *ಶಾಂತಾ ನಾಗರಾಜ್*

'ಹೆಣ್ಣು ಮನೆಯ ಕಣ್ಣು' ಎಂಬುದೊಂದು ಮಾತಿದೆ. ಸಂಸಾರ ಸುಸೂತ್ರವಾಗಿ ಸಾಗಲು ಅವಳ ಕೊಡುಗೆ ಅಪಾರ. ಆದರೆ ಹಲವು ಒತ್ತಡಗಳ ನಡುವೆ ಸಿಕ್ಕ ಗೃಹಿಣಿ ಮನಸ್ಸಿನ ಸ್ಥಿಮಿತತೆ ಕಳೆದುಕೊಂಡು ಒದ್ದಾಡಬೇಕಾದ ಸಂದರ್ಭಗಳು ಉಂಟಾಗಬಹುದು. ಅಂಥ ಒದ್ದಾಟದಿಂದ ಹೊರಬಂದು ಯಶಸ್ವಿ ಗೃಹಿಣಿಯಾಗಲು ಬಯಸಿದ್ದೀರಾ ? ಈ ಕೃತಿ ಓದಿ.

*ಡಾ|| ಕೆ. ಆರ್. ಶ್ರೀಧರ್* — **ವೃದ್ಧಾಪ್ಯವನ್ನು ನಿಭಾಯಿಸುವುದು ಹೇಗೆ ?**

ವೃದ್ಧಾಪ್ಯವನ್ನು ಗೆದ್ದವರಾರ್‍ದ್ದೇಳಿ ? ಅದೊಂದು ಸಹಜ ಕ್ರಿಯೆ. ಆದರೆ ಅದರೊಳಗೆ ಸಿಕ್ಕಿ ನೋವಿನಿಂದ ನರಳುವವರೇ ಹೆಚ್ಚು. ಮುದಿತನ ಶಾಪವಲ್ಲ, ವ್ಯಕ್ತಿಯ ಜೀವನದಲ್ಲಿ ಅದೊಂದು ಅವಸ್ಥೆ. ವೃದ್ಧಾಪ್ಯವನ್ನು ಸಹ್ಯವಾಗಿಸಿಕೊಂಡು, ಜೀವನದ ಅಂತ್ಯಕಾಲವನ್ನು ಸುಖಮಯವಾಗಿಸಿಕೊಂಡು ಚಟುವಟಿಕೆಯಿಂದಿರುವ ನಿಟ್ಟಿನಲ್ಲಿ ಈ ಕೃತಿ ಅತ್ಯುಪಯುಕ್ತ.





**ಯಶಸ್ವೀ ಜೀವನಕ್ಕೆ ನೀಲಿನಕ್ಷೆ** — *ವೈ. ಜಿ. ಮುರಳೀಧರ*

ಜೀವನದಲ್ಲಿ ಯಶಸ್ವಿಯಾಗಬೇಕು ಎಂದು ಎಲ್ಲರೂ ಹಂಬಲಿಸುತ್ತಾರೆ. ಯಶಸ್ಸಿನ ಬೆನ್ನು ಹತ್ತುತ್ತಾರೆ. ಇದು ಮನುಷ್ಯ ಸಹಜ ಹಂಬಲ. ಆದರೆ, ಯಶಸ್ಸು ಯಾರದೇ ಅನುಗ್ರಹದಿಂದ ಪುಕ್ಕಟೆ ದೊರಕುವಂಥದಲ್ಲ. ಎದುರಾಗುವ ಸೋಲುಗಳನ್ನು ನಿಭಾಯಿಸಿಕೊಂಡು, ಸತತ ಪ್ರಯತ್ನದಿಂದ ಯಶಸ್ವೀ ಜೀವನಕ್ಕೆ ಹೇಗೆ ಅಡಿಯಿಡಬಹುದು ಎಂಬುದನ್ನು ವಿವರಿಸುವ ಕೃತಿ.

*ಅರವಿಂದ ಚೊಕ್ಕಾಡಿ* — **ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುವುದು ಹೇಗೆ ?**

ಪರೀಕ್ಷೆ ಮಕ್ಕಳಿಗೆ ಪೆಡಂಭೂತದಂತೆ ಕಾಡುತ್ತದೆ. ಅದು ಬಂತೆಂದರೆ ಇನ್ನಿಲ್ಲದ ಆತಂಕ, ಭಯ ಆವರಿಸಿ ಮನಸ್ಸು ಖಿನ್ನವಾಗುತ್ತದೆ. ಅಂತಹ ಪರೀಕ್ಷೆಯನ್ನು ಯಶಸ್ವಿಯಾಗಿ ನಿಭಾಯಿಸುವುದು ಹೇಗೆ ? ಶಿಕ್ಷಕರು, ಹೆತ್ತವರು ಯಾವ ರೀತಿಯಲ್ಲಿ ಈ ಪರೀಕ್ಷಾ ಭೀತಿಯನ್ನು ನಿವಾರಿಸಲು ಸಹಾಯಕವಾಗಬಹುದು ? ಹಲವು ಸಲಹೆಗಳಿರುವ ಇದನ್ನು ಓದಿ.





**ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ ?** — *ಡಾ|| ಕಿಕ್ಕೇರಿ ವೀರನಾರಾಯಣ*

ಮಕ್ಕಳ ಮನಸ್ಸು ಸದಾ ಹೊಸತನಕ್ಕೆ ತುಡಿಯುತ್ತಾ ಕ್ರಿಯಾಶೀಲವಾಗಿರುವಂಥದು. ಅಂತಹ ಮನಸ್ಸುಗಳಿಗೆ ನಾವು ಬರೀ ಓದು ಬರೆಹವನ್ನಷ್ಟೆ ಹಚ್ಚಿದರೆ ಅವು ಏಕತಾನತೆಯಿಂದ ನರಳುತ್ತವೆ. ಓದಿನ ಜೊತೆ ಜೊತೆಗೆ ಸೃಜನಶೀಲ ಮಾಧ್ಯಮಗಳಲ್ಲೂ ಅವರನ್ನು ತೊಡಗಿಸಿಕೊಳ್ಳುವ ಸಹೃದಯತೆ ಇರಬೇಕು. ಯಾವುವು ಆ ಸೃಜನಶೀಲ ಮಾಧ್ಯಮಗಳು ? ಪುಸ್ತಕ ಓದಿ.

*ಅರವಿಂದ ಚೊಕ್ಕಾಡಿ* — **ಯಶಸ್ವೀ ಶಿಕ್ಷಕರಾಗುವುದು ಹೇಗೆ ?**

'ಶಿಕ್ಷಕರು ನಾಳಿನ ಯಶಸ್ವೀ ಪ್ರಜೆಗಳ ರೂವಾರಿಗಳು' ಎನ್ನುವ ಮಾತಿದೆ. ತಿದ್ದಿ, ತೀಡಿ, ಅವರನ್ನು ಪ್ರೋತ್ಸಾಹಿಸಿ ಅವರ ಬುದ್ಧಿಯನ್ನು ಸೌಜನ್ಯದಿಂದ ಒರೆಹಚ್ಚುವ ಗುಣ ಶಿಕ್ಷಕರಲ್ಲಿರಬೇಕು. ಎಳವೆಯಲ್ಲೇ ಕುಡಿ ಚಿವುಟಿ ಹಾಳುಗೆಡವಬಾರದು. ಹಾಗಾದರೆ ಯಶಸ್ವೀ ಶಿಕ್ಷಕರಾಗಲು ಏನು ಮಾಡಬೇಕೆನ್ನುತ್ತೀರ ? ಇಲ್ಲಿವೆ ನೋಡಿ ಅಂತಹ ಹಲವು ಸರಳ ಸೂತ್ರಗಳು.

*ಆಯಾ ಕ್ಷೇತ್ರಗಳಲ್ಲಿ ಅನುಭವಿಗಳಾದ, ಸಮರ್ಥ ಲೇಖಕರು ರಚಿಸಿರುವ 12 ಕೃತಿಗಳು*
*– ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ*

...ತಲಾ ರೂ. 40 ಬೆಲೆಯ, ರೂ. 480 ಮೌಲ್ಯದ ಪುಸ್ತಕಗಳು ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 350ಕ್ಕೆ ಲಭ್ಯ ! ಅನಾವರಣ ದಿನಾಂಕದ ನಂತರ ಈ ರಿಯಾಯಿತಿ ಲಭ್ಯವಿಲ್ಲ

...ರಿಯಾಯಿತಿ ಬೆಲೆ ಜೊತೆಗೆ ಅಂಚೆ ವೆಚ್ಚ ರೂ. 30 ಸೇರಿಸಿ ನಮಗೆ ಎಂ.ಓ/ಡಿ.ಡಿ. ಕಳಿಸಿ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001
ದೂರವಾಣಿ/ಫ್ಯಾಕ್ಸ್ : 22203580/81/82
E-mail : nkp@bgl.vsnl.net.in
website : www.navakarnatakabooks.com

ಗಾಂಧಿನಗರ, ಬೆಂಗಳೂರು - 560 009
22251382

ಕೆ. ಎಸ್. ರಾವ್ ರಸ್ತೆ, ಮಂಗಳೂರು - 575 001
2441016

ರಾಮಸ್ವಾಮಿ ವೃತ್ತ, ಮೈಸೂರು - 570 024
2424094

ಸ್ಟೇಷನ್ ರಸ್ತೆ, ಗುಲ್ಬರ್ಗಾ - 585 102
224302



ಯಶೋಧ-ಕೃಷ್ಣ (ಮೈಸೂರು ಸಾಂಪ್ರದಾಯಿಕ ಕಲೆ)

# ವರ್ತಮಾನಕ್ಕೆ ಪುರಾತನದ ಛಾಯೆ ತರುವ ಕಲಾವಿದ ಆನಂದ್



**ಮೂ**ಲತಃ ತಮಿಳುನಾಡಿನವರಾದ ಆನಂದ ಚೆನ್ನೈನ ಚೆಟ್ಟಿನಾಡು ವಿದ್ಯಾಶ್ರಮ ಮತ್ತು ಮೈಸೂರಿನ ಕಾವಾದಲ್ಲಿ ಕಲಾಭ್ಯಾಸ ನಡೆಸಿದ್ದಾರೆ. ಮೈಸೂರು ಮತ್ತು ತಂಜಾವೂರು ಸಾಂಪ್ರದಾಯಿಕ ಕಲಾ ಪ್ರಕಾರದಲ್ಲಿ ನುರಿತವರು. ಸಾವಿರಕ್ಕೂ ಹೆಚ್ಚು ಕಲಾಕೃತಿಗಳನ್ನು ರೂಪಿಸಿರುವ ಆನಂದ್ ಅನೇಕ ಬಹುಮಾನಗಳನ್ನು ಪಡೆದಿದ್ದಾರೆ. ತಮ್ಮ ಕಲಾಕೃತಿಗಳ ರಚನೆಗೆ ಪುರಾತನ ವಸ್ತು ಮತ್ತು ವ್ಯಕ್ತಿಗಳನ್ನೇ ಆಯ್ದುಕೊಳ್ಳುವ ಆನಂದ್ ಈಗ ಮೈಸೂರಿನಲ್ಲಿ ವಾಸವಾಗಿದ್ದಾರೆ.

■ ಎಚ್. ಮಂಜುನಾಥ್
'ಮುಂದಲ ಹಟ್ಟಿ', ಸಿದ್ದರಾಮನ ಹುಂಡಿ, ಯಡಕೊಳ ಅಂಚೆ, ಮೈಸೂರು



ಪೊಟರೆಯೊಳಗಿರುವ ತನ್ನ ಮರಿಗೆ ಗುಟುಕು ನೀಡುತ್ತಿರುವ ಹಕ್ಕಿ (ಜಲವರ್ಣ)



ಗುಡ್ಡಗಾಡು ಪ್ರದೇಶ (ಜಲವರ್ಣ)



# ಉಗುರಿನ ಮೇಲೊಂದು ಸುತ್ತು

ಸುಬ್ರಹ್ಮಣ್ಯ ಎಸ್. ಆರ್.

ಉಗುರಿಗೂ ಹಲ್ಲಿಗೂ ಆದೇನು ನಂಟನ್ನು ಗಂಟುಹಾಕಿದ್ದಾರೋ ತಿಳಿಯದು! ಎರಡೂ ಕೂಡ ನನ್ನ ಪ್ರಾಥಮಿಕ ಶಾಲಾ ಅಧ್ಯಾಪಕರ ಪರೀಕ್ಷೆಗೊಳಪಡುತ್ತಿದ್ದುದಂತು ಹೌದು! ಬೆಳಿಗ್ಗೆ ಒಂಭತ್ತೂವರೆಗೆ ಶಾಲಾ ಅಂಗಳದಲ್ಲಿ ಕೈಗಳನ್ನು ಮುಂಚಾಚಿ ಹಲ್ಲು ಕಿರಿದುಕೊಂಡು ನಾವು ನಿಂತಾಗ ಅಧ್ಯಾಪಕರು ಅವುಗಳನ್ನು ನೋಡಿ ಸುಖಿಸುತ್ತಿದ್ದರು! ಹಲ್ಲು, ಉಗುರು ಶುಚಿಯಾಗಿಲ್ಲದಿದ್ದರೆ ಬೆತ್ತದ ರುಚಿಯನ್ನೂ ತೋರಿಸುತ್ತಿದ್ದರು. ಅಧ್ಯಾಪಕರು ತೋರಿಸಿಕೊಟ್ಟ ಈ ಹಲ್ಲು ಉಗುರುಗಳ ನಂಟು ನನ್ನ ಮಟ್ಟಿಗೆ ಅವುಗಳ ನಿರಂತರ ಬೆಸುಗೆಗೇ ಕಾರಣವಾಯಿತು. ನನ್ನ ಬೆರಳು ಮೀರಿ ಬಂದ ಉಗುರುಗಳು ಹಲ್ಲುಗಳ ಸಂಪರ್ಕಕ್ಕೆ ಹಾತೊರೆಯುತ್ತಿದ್ದವು. ಹಲ್ಲುಗಳ ಸಂಪರ್ಕಕ್ಕೆ ಉಗುರು ತಲುಪಿದ ಕೂಡಲೇ ಅವುಗಳ ನಾಮಾವಶೇಷ ಮಾಡಿಬಿಡುತ್ತಿದ್ದವು ಈ ಹಲ್ಲುಗಳು. ಈ ನನ್ನ ಉಗುರುಗಳಾದರೂ, ಹಲ್ಲುಗಳೆಂಬ ರಾಕ್ಷಸರ ಸಂದುಗೊಂದುಗಳಲ್ಲಿ ಅಡಗಿ ಕುಳಿತು ಕಿರಿಕಿರಿಯುಂಟುಮಾಡಿ ಕೊನೆಗೆ ಬ್ಲೇಡೋ, ಗುಂಡು ಸೂಜಿಯೋ ಬಂದು ಹಲ್ಲುಗಳ ಸಂದುಗೊಂದುಗಳನ್ನು ಶುಚಿ ಮಾಡಬೇಕಾಗುತ್ತಿತ್ತು. ಹೀಗಾಗಿ ನನ್ನ ಉಗುರುಗಳು ಗ್ಯಾರೇಜುಗಳಲ್ಲಿರುವ ವಾಹನಗಳಂತೆ ಯಾವಾಗಲೂ "under repair" ಸ್ಥಿತಿಯಲ್ಲೇ ಇರುತ್ತಿದ್ದವು. ಇದರಿಂದಾಗಿ ದಿನವಹಿ ಉಗುರನ್ನು ನೋಡುತ್ತಿದ್ದ ನನ್ನ ಅಧ್ಯಾಪಕರಿಗಂತೂ ದಿಗಿಲನ್ನೂ ಆಶ್ಚರ್ಯವನ್ನೂ ಏಕಕಾಲಕ್ಕೆ ಹುಟ್ಟಿಸುತ್ತಿದ್ದವು. ಕ್ಷಣಕ್ಕೊಂದು ಆಕಾರವನ್ನು ಪಡೆಯುತ್ತಿರುತ್ತಿದ್ದ ನನ್ನ ಉಗುರುಗಳಿಂದಾಗಿ ಅಧ್ಯಾಪಕರಿಗೆ ನಮ್ಮ ತಾಲೂಕಿನ ಎಲ್ಲ ಗ್ರಾಮಗಳ ನಕ್ಷೆಯನ್ನು ನನ್ನ ಕೈಯಲ್ಲೇ ನೋಡುವ ಭಾಗ್ಯ ಉಂಟಾಗುತ್ತಿತ್ತು!

ಹಾಗೆ ನೋಡಿದರೆ ಉಗುರು ಕಚ್ಚುವುದಕ್ಕೂ ಚಿಂತನಾಶಕ್ತಿಗೂ ಗಾಢ ಸಂಬಂಧವಿದೆ ಎಂದು ಉಗುರು ಕಚ್ಚುವ ನಾನು ಧೈರ್ಯವಾಗಿ ಹೇಳಬಲ್ಲೆ! ತೀವ್ರವಾದ ಆಲೋಚನಾ ಲಹರಿಯಲ್ಲಿ ಉಗುರು ಕಚ್ಚುವ ಪ್ರಕ್ರಿಯೆ ಕಂಡುಬರುವುದು ತೀರಾ ಸಾಮಾನ್ಯ. ಹಲ್ಲಿನ ಮೂಲಕ ಉಗುರಿನ ಅಂಗಾಂಶಕ್ಕೆ ಒತ್ತಡ ಬೀಳುವಾಗ ಮಿದುಳಿನ ಚಿಂತನಾ ವಿಭಾಗ ಕ್ರಿಯಾಶೀಲವಾಗುತ್ತದೆ. ನೀವೇ ಬೇಕಾದರೆ ಉಗುರು ಕಚ್ಚಿ ಆಲೋಚನೆಗೆ ಚಾಲನೆ ನೀಡಿ ಇದನ್ನು ಪರೀಕ್ಷಿಸಿಕೊಳ್ಳಿ! ಆದ್ದರಿಂದ ಉಗುರು ಕಚ್ಚುವ ನನ್ನಂತಹವರನ್ನು ಬುದ್ಧಿವಂತರೆಂದು ಕರೆಯಲಡ್ಡಿ ಇಲ್ಲ – ಅಡ್ಡಿ ಏನು ಬಂತು? ಕರೆಯಲೇಬೇಕು! ಚಿಂತಿಸುವುದೇ ಬುದ್ಧಿವಂತರ ಲಕ್ಷಣವಲ್ಲವೆ? ಆದರೆ ಇದನ್ನೆಲ್ಲಾ ನನ್ನಂತಹ ಪುಟಗೋಸಿಗಳು ಹೇಳಿದರೆ ಯಾರೂ ನಂಬಲಾರರು. ಏನಿದ್ದರೂ ಅಧಿಕೃತವಾಗಿ ಕಂಡುಹಿಡಿದು ವಿಜ್ಞಾನಿಗಳು ಹೇಳಬೇಕು! ಯಾಕಿನ್ನೂ ಈ ಕುರಿತು ವಿಜ್ಞಾನಿಗಳು ಬಾಯಿಬಿಟ್ಟಿಲ್ಲ? ಯಾರಾದರೂ ಉಗುರುಕಚ್ಚುವ ವಿಜ್ಞಾನಿಯಾದರೂ ಇದನ್ನು ಹೇಳ ಬಹುದಾಗಿತ್ತು. ಬಹುಶಃ ಅವರಿಗೆ ಉಗುರುಕಚ್ಚಲೇ ಪುರುಸೊತ್ತು ಇರಲಿಕ್ಕಿಲ್ಲ, ಇನ್ನು ಈ ಕುರಿತು ಅವರು ಆಲೋಚನೆಯನ್ನಾದರೂ ಹೇಗೆ ಮಾಡಿಯಾರು? ಇಲ್ಲಿ ಇನ್ನೂ ಒಂದು ಸೋಜಿಗವೆಂದರೆ ಅವರು ಈ ಕುರಿತು ಆಲೋಚನೆ ಮಾಡಬೇಕಾದರೆ ಉಗುರು ಕಚ್ಚಿಯೇ ಆಗಬೇಕಷ್ಟೆ? – ಇಲ್ಲಿಗೆ ವೃಕ್ಷಬೀಜ ನ್ಯಾಯ ವಾಯಿತು. ಹೋಗಲಿ, ನನ್ನಂತಹ ಬುದ್ಧಿವಂತ ಈ ವಿಷಯ ಈಗ ಹೇಳಿದ ಮೇಲೆ ಇನ್ನಾದರೂ ಉಗುರು - ಹಲ್ಲು - ಮಿದುಳುಗಳ ಸರಪಣಿ ಕ್ರಿಯೆಯಲ್ಲಡಗಿರುವ ಚಿಂತನಾ ಲಹರಿಯ ಕುರಿತು ವಿಜ್ಞಾನಿಗಳು ಸಂಶೋಧಿಸುತ್ತಾರೋ ಏನೋ ಕಾದು ನೋಡಬೇಕು!

ಈ ಉಗುರಿಗೆ ನಿಜಕ್ಕೂ ಗೌರವ ಕೊಡುವ ಅಗತ್ಯವಿದೆಯೆಂಬುದು ನನ್ನ ಖಚಿತ ಅಭಿಪ್ರಾಯ. ಯಾಕೆಂದರೆ, ಇದು ನಮ್ಮ ಆಯುಷ್ಯವನ್ನು ಗಣನೆಗೇ ತೆಗೆದುಕೊಳ್ಳದೆ ಸರ್ವಕಾಲಕ್ಕೂ ಬೆಳೆಯುತ್ತಲೇ ಇರುತ್ತದೆ ಮತ್ತು ತನ್ನ ಬಣ್ಣವನ್ನು ಬದಲಾಯಿಸಿಕೊಳ್ಳದೆ ಒಂದೇ ತೆರನಾಗಿರುತ್ತದೆ. ಕೂದಲಿನಂತೆ ವರ್ಷಗಳು ಉರುಳುತ್ತಾ ಹೋದಂತೆ ತನ್ನ ಬಣ್ಣ ಬದಲಾಯಿಸಿಕೊಂಡು ನಿಮ್ಮ ವಯಸ್ಸನ್ನು ಜಗಜ್ಜಾಹೀರು ಮಾಡಿ ನಿಮ್ಮ ಮಾನ ಹರಾಜು ಹಾಕುವ ಕೆಲಸವನ್ನು ಉಗುರು ಎಂದಿಗೂ ಮಾಡದು. ತಲೆಯ ಮೇಲೆ ಕುಳಿತು ನಿಮ್ಮ ಮಾನವನ್ನೇ ತೆಗೆಯುವ ತಲೆಕೂದಲು ಮೇಲೋ, ಎಲ್ಲೋ ನಿಕೃಷ್ಟವಾದ ಸಂದುಗಳಲ್ಲಿ ಕುಳಿತು ನಿಮ್ಮ ಅಂದಕ್ಕೊಂದು ಮೆರುಗನ್ನು ಕೊಡುವ ಉಗುರು ಮೇಲೋ, ನೀವೇ ನಿರ್ಧರಿಸಿಕೊಳ್ಳಿ. ಅಂತೂ ಹೆಂಗಸರು ವಯಸ್ಸನ್ನು ಬಿಟ್ಟುಕೊಡದ ಉಗುರನ್ನೇ ನೆಚ್ಚಿಕೊಂಡಾರೆಂಬುದರಲ್ಲಿ ಎರಡು ಮಾತಿಲ್ಲ. ಈ ವಿಚಾರಕ್ಕೆ ಬಂದರೆ ಶ್ರೀರಾಮನೂ ಉಗುರಿನ ಪಕ್ಷಪಾತಿ ಎಂದೇ ಹೇಳಬೇಕು. ಶೂರ್ಪನಖಿಯನ್ನು ಅವಮರ್ಯಾದೆ ಗೊಳಿಸಲು ಶ್ರೀರಾಮ ಆಕೆಯ ಮೂಗನ್ನು ಆಯ್ಕೆ ಮಾಡಿದ್ದನೇ ಹೊರತು ಉಗುರನ್ನಲ್ಲ! ಇದು ಶ್ರೀರಾಮನ ಉಗುರಿನ ಮೇಲಿನ ಗೌರವವನ್ನು ತೋರಿಸುತ್ತದೆ. ಆಕೆಯೂ ಅಷ್ಟೆ, ಮೂಗು ಕೊಯ್ದು

ಲಕ್ಷ್ಮಣನನ್ನು ತನ್ನ ಉಗುರುಗಳಿಂದ ಏನೂ ಘಾಸಿಗೊಳಿಸದೆ ಗೋಳಿಡುತ್ತಾ ನಡೆದುಬಿಟ್ಟಳು. ಇದೇ ಒಂದು ಚೋದ್ಯ! ಕತ್ತರಿಸಿದ ಮೇಲೆ ಮತ್ತೆ ಮತ್ತೆ ಮೊನಚಾಗಿ ಬೆಳೆದು ಬರುವ ಉಗುರು ತ್ರೇತಾಯುಗದಲ್ಲಿ ಮಂಕಾಗಿ ಹೋದದ್ದೇಕೊ? ಇರಲಿ ಬಿಡಿ, ಉಗುರೋ ಮೂಗೋ ಅಂತೂ ಶೂರ್ಪನಖಿಗೆ ನಖಾಘಾತವಾದದ್ದಂತು ನಿಜ. ಬಹಳ ಹಿಂದೆ ಉಗುರನ್ನು ಮರ್ಯಾದೆಯ ಒಂದು ಸಾಧನವಾಗಿಯೂ ಪರಿಗಣಿಸುತ್ತಿದ್ದರೆಂದು ಕಾಣುತ್ತದೆ. ಹಿಂದೆ ಹಳ್ಳಿಗಳಲ್ಲಿ ಕುಲದ ಆಚಾರಗಳನ್ನು ಮೀರಿ ನಡೆದವರಿಗೆ ತಲೆಬೋಳಿಸಿ ಉಗುರು ತೆಗೆಸಿ ಗುಡಿಕಟ್ಟೆ ಸುತ್ತಿಸಿ ಕುಲಗುರುಗಳಿಗೆ ದಕ್ಷಿಣೆ ಕೊಡಿಸಿ ದೋಷದಿಂದ ಮುಕ್ತಿ ಪಡೆಯುವಂತಹ ವ್ಯವಸ್ಥೆ ಚಾಲ್ತಿಯಲ್ಲಿತ್ತು ಎಂದು ನನ್ನಜ್ಜಿಗೆ ಅವರಜ್ಜಿ ಹೇಳುತ್ತಿದ್ದರಂತೆ.

ಇಂತಹ ಉಗುರನ್ನು ಸೌಂದರ್ಯ ವರ್ಧನೆಗೆ ಉಪಯೋಗಿಸುವಲ್ಲಿ ನಮ್ಮ ಹಿಂದಿನ ಕವಿಗಳು ಹಿಂದೆ ಬೀಳಲಿಲ್ಲ. ರಾಮಾಯಣ, ಜೈಮಿನಿಭಾರತ, ಗಿರಿಜಾಕಲ್ಯಾಣ ಮುಂತಾದ ಕಾವ್ಯಗಳಲ್ಲಿ ಕವಿಗಳು ಯುವತಿಯರ ಉಗುರನ್ನು ವಿವಿಧ ತೆರನಾಗಿ ಕತ್ತರಿಸಿ ಬಣ್ಣ ಹಾಕಿ ಬಿಟ್ಟಿದ್ದಾರೆ. 'ಕೂರುಗುರ್', 'ಕೊಂಕುಗುರ್', 'ಕೊನೆವುಗುರ್', 'ಸೆಳ್ಳುಗುರ್'. ಮೊದಲೇ ಕವಿಗಳು ಕಲ್ಪನಾ ಲಹರಿಯ ವಿಹರಿಗಳು. ನನ್ನ ಸಂಶಯ ಪ್ರಕೃತಿ ಹೇಳುವ ಪ್ರಕಾರ ಹಿಂದಿನ ಸ್ತ್ರೀಯರು ಅಷ್ಟೊಂದು ರಸಿಕರೇನೂ ಅಲ್ಲದ ಕಾರಣ ಅವರು ಉಗುರುಗಳನ್ನು ಕತ್ತರಿಸಿ ಕೊಂಡು ಅದಕ್ಕೆ ಬಣ್ಣವನ್ನು ಕೊಡುತ್ತಿದ್ದಿರಲಾರರು. ಬದಲಾಗಿ ಈ ರಸಿಕ ಕವಿಗಳು ಕುಳಿತಲ್ಲೇ ವನಿತೆಯರ ಉಗುರುಗಳನ್ನು ವಿವಿಧ ವಿನ್ಯಾಸಗಳಲ್ಲಿ ಕತ್ತರಿಸಿ ಅದಕ್ಕೆ ಬಣ್ಣವನ್ನು ಲೇಪಿಸಿದ್ದಾರೆ! ಆಮೇಲೆ ವನಿತೆಯರ ಉಗುರು ಕನ್ನಡಿಯಂತೆ ಎಂದು ಬಣ್ಣಿಸಿ ಸಂತೋಷಿಸಿದ್ದಾರೆ. ಇವುಗಳನ್ನೋದಿದ ರಸಿಕ ವನಿತೆಯರು ತಮ್ಮ ಉಗುರುಗಳನ್ನು ಮಾರ್ಪಡಿಸಹೊರಟರೋ ಅಥವಾ ರಸಿಕ ಪುರುಷರು ತಮ್ಮ ವನಿತೆಯರ ಉಗುರುಗಳನ್ನು ಮಾರ್ಪಡಿಸಹೊರಟರೋ ಗೊತ್ತಿಲ್ಲ. ಆದ್ದರಿಂದ ನೈಲ್‌ಪಾಲಿಷ್ ಕಂಪೆನಿಯವರು ಹಿಂದಿನ ಮಹಾಕವಿಗಳಿಗೆ ಚಿರಋಣಿಗಳಾಗಿರಬೇಕು. ನೈಲ್‌ಪಾಲಿಷ್ ನನಗೆ ನನ್ನ ನಾದಿನಿಯೋರ್ವಳ ಸಂಗತಿಯನ್ನು ನೆನಪಿಸುತ್ತದೆ. ಆಕೆ ತನ್ನ ಉದ್ದುದ್ದವಾಗಿ ಬೆಳೆಸಿದ ಉಗುರುಗಳಿಗೆ ನೈಲ್‌ಪಾಲಿಷ್ ಹಾಕಿ 'ಭಾವಾ ನನ್ನ ಕೈ ಚೆಂದ ಕಾಣಿಸುತ್ತಿದೆಯಾ?' ಎಂದು ಪ್ರಶ್ನಿಸಿದಳು. ಅವಳನ್ನು ಕೀಟಲೆ ಮಾಡುವ ಉದ್ದೇಶದಿಂದ ನಾನು 'ಬಣ್ಣವೇನೋ ಚೆನ್ನಾಗಿದೆ. ಆದರೆ ಈ ನಿನ್ನ ಎಡದ ಕೈ ಬೆರಳಿನ ಉಗುರುಗಳ ಸಂದುಗಳಲ್ಲಿ ಅದೇನೇನು ಕಲ್ಮಶಗಳು ದಿನವಹಿ ಸೇರ್ಪಡೆಯಾಗುತ್ತಿವೆಯೋ?' ಎಂದು ಒಂದು ರೀತಿಯಾಗಿ ಹೇಳಿದಾಗ ಆಕೆಗೆ ಬಂದ ಕೋಪ ಬಹುಶಃ ನಖಶಿಖಾಂತವೆಂದರೆ ಸರಿ ಹೋಗಬಹುದೇನೊ!

ಒಟ್ಟಿನಲ್ಲಿ ಉಗುರನ್ನು ಕಡೆಗಣಿಸುವಹಾಗಿಲ್ಲ. ಇದಕ್ಕೆ ವಿಷಯೆಯ ಉಗುರೇ ಸಾಕ್ಷಿ. 'ಚಂದ್ರಹಾಸ ಚರಿತ್ರೆ'ಯಲ್ಲಿ ವರ್ಣಿತವಾದಂತೆ –

''ಶ್ರೀಮತು ಮಂತ್ರಿ ದುಷ್ಟಬುದ್ಧಿ ಮದನಗೆ
ನೇಮಿಸಿ ಕಳುಹಿದ ಕಾರ್ಯ
ಸೀಮೆಗರಸು ಇವನಹನು ಕಾಣುತ ಶೀಘ್ರ
ವಿಷವ ಕೊಡುವುದುತ್ತಮವು''

ಎಂಬ ಕಾಗದದ 'ವಿಷವ' ಎಂಬ ಪದದ ಕೊನೆಯಕ್ಷರವನ್ನು ವಿಷಯೆ ತನ್ನ ಕಿರುಬೆರಳಿನ ಉಗುರಿನ ತುದಿಯಿಂದ, ತನ್ನ ಕಣ್ಣಿನ ಕಾಡಿಗೆಯನ್ನುಪಯೋಗಿಸಿ 'ವಿಷಯೆ' ಕೊಡುವುದುತ್ತಮವು ಎಂದು ಬದಲಾಯಿಸುತ್ತಾಳೆ. ಮೂಲತಃ ಉಗುರು ನಂಜಿಗೆ ಕಾರಣ ಎಂದರೆ, ಉಗುರು ದೇಹಕ್ಕೆ ತಾಗಿದರೆ ನಂಜಾಗುತ್ತದೆ. ಆದರೆ ಇಲ್ಲಿ ದುಷ್ಟಬುದ್ಧಿಯ ನಂಜು ತುಂಬಿದ ಕಾಗದವನ್ನು ಅಮೃತವಾಗಿ ಮಾರ್ಪಡಿಸಿದ್ದೇ ಉಗುರು! ಪುರಾಣದಲ್ಲಿ ಉಗುರು ಲೇಖನಿಯಾಗಿ ಕಾರ್ಯಾಚರಿಸಿ ವಿಜೃಂಭಣೆಯ ಮದುವೆ ನಡೆದುಹೋಗಿ ದುಷ್ಟಬುದ್ಧಿಯ ದುಷ್ಟತನಕ್ಕೇ ಸವಾಲಾಗಿ ಹೋಗುವಷ್ಟು ಬೆಳೆದಿದೆ. ಹಾಗಿರುವಾಗ ಉಗುರು ಯಃಕಶ್ಚಿತ್ ಅಂತೂ ಖಂಡಿತ ಅಲ್ಲ. ನಮ್ಮ ಪೋಲಿಸರಿಗಂತೂ ಈ ಉಗುರು ಎಂದಿಗೂ ಕೇವಲವಾಗಿ ಕಾಣುವುದಿಲ್ಲ. ಆಪಾದಿತರ ವಿಚಾರಣೆಯಲ್ಲಿ ಪೋಲಿಸರಿಗೆ ವಿಶೇಷವಾದ ಉಪಚಾರಕ್ಕೆ ಸಿಗುವುದೇ ಈ ಉಗುರು!

ಇಂದಿನ ತರುಣಿಯರು ಹಿಂದಿನವರಂತೆ ನಾಚಿಕೆಯಾಗುವಾಗ ಕೈಉಗುರು ಕಡಿಯಲೋ, ಇಲ್ಲವೇ ಕಾಲುಗುರನ್ನು ನೆಲ ಕೆರೆಯಲೋ ಉಪಯೋಗಿಸದೆ ತಮ್ಮ ಉಗುರುಗಳನ್ನು ಒಂದು ಅಸ್ತ್ರವಾಗಿ ಉಪಯೋಗಿಸುತ್ತಾರೆ. ಬಸ್ಸಿನಲ್ಲಿ ಸಂಚರಿಸುವಾಗ ಹುಡುಗರ ಉಪಟಳ ಮೇರೆಮೀರಿದರೆ ಹುಡುಗಿಯರ ಉಗುರು ಭರ್ಜಿಯಂತೆ ಕಾರ್ಯಾಚರಿಸುವಾಗ ಹುಡುಗರು ಗಪ್‌ಚುಪ್ ಆಗಿಬಿಡುವುದನ್ನು ನಾನು ಹಲವು ಸಲ ಗಮನಿಸಿದ್ದೇನೆ. ಈ ಹುಡುಗರು ಕೋಪದ ಕಣ್ಣುಗಳಿಂದ ತರುಣಿಯರ ಉಗುರನ್ನು ನೋಡಿ ಸುಟ್ಟು ಕಪ್ಪಾಗಿಸಲು ಇವರಿಗೆ ಗಾಂಧಾರಿಯ ಕಣ್ಣೂ ಇಲ್ಲವಾಗಿ ಹೋಯ್ತಲ್ಲ ಪಾಪ! ಆದ್ದರಿಂದ ಈಗ ಹುಡುಗರು ಉಪಟಳ ಕೊಡುವ ಮೊದಲು ಹುಡುಗಿಯರ ಕೈಯಲ್ಲಿ ಉಗುರುಗಳಿವೆಯೇ ಇಲ್ಲವೇ ಎಂಬುದನ್ನು ಅವಲೋಕಿಸಿಯೇ ಮುಂದುವರಿಯುತ್ತಾರೆ. ಹೀಗಾಗಿ ಹುಡುಗಿಯರಿಗೆ ಉಗುರು ಆತ್ಮವಿಶ್ವಾಸದ ಪ್ರತೀಕವಾದರೆ ಅದೇ ಹುಡುಗರಿಗೆ ಎಚ್ಚರಿಕೆಯ ಸಾಧನವಾಗಿರುತ್ತದೆ. ಆದರೆ ಇದು ಸಾಂದರ್ಭಿಕವಾಗಿ ಮಾತ್ರ. ಇದರ ಹೊರತಾಗಿ ಹೇಳುವುದಾದರೆ ಹುಡುಗಿಯರ ಸುಕೋಮಲ ಬೆರಳುಗಳಲ್ಲಿರುವ ಸುಂದರ ಉಗುರುಗಳು ಹುಡುಗರ ಕಣ್ಮನಗಳಿಗೆ ಆನಂದವನ್ನುಂಟುಮಾಡುವ ಸಾಧನವಾಗಿರುತ್ತದೆ. ಆದರೆ ಭಾರತದ ಬಡ ಹೆಣ್ಣುಮಕ್ಕಳ ಉಗುರುಗಳು ಅದೆಲ್ಲೋ ಕಾರ್ಖಾನೆಗಳ ಇಲ್ಲವೇ ಭೂಮಿಯ ಕೂಲಿನಾಲಿ ಮಾಡುತ್ತಾ ಕೂಳನ್ನರಸುವುದರಲ್ಲೇ ತಲ್ಲೀನವಾಗಿ ಕಲ್ಮಶಗಳ ಗೂಡಾಗಿ ಆರೋಗ್ಯವನ್ನೇ ಹದಗೆಡಿಸುವುದೂ ಕೂಡ ಸತ್ಯ. ಅಂತೂ ಉಗುರು ಬೆಳೆಸಿಕೊಂಡ ಹುಡುಗಿಯರು ಸೇಫ್ ಆಗಿರುತ್ತಾರೆನ್ನುವುದು ನಿತ್ಯಸತ್ಯ – ಸುಮ್ಮನೇ ಬಂದಿಲ್ಲ ಗಾದೆ ''ಉಗುರಿಂದ ಹೋಗುವುದಕ್ಕೆ ಕೊಡಲಿ ಬೇಕೆ?'' ಗಾದೆಯೇನೋ ಉಗುರನ್ನು ಶಸ್ತ್ರಕ್ಕೆ ಸಮನಾಗಿ ಪರಿಗಣಿಸಿದೆ. ಆದರೆ ಹಿರಣ್ಯಕಶಿಪುವಿನ ವಿಷಯದಲ್ಲಿ ವಿಷ್ಣು ಮಾತ್ರ ಉಗುರನ್ನು ಶಸ್ತ್ರವೂ ಅಲ್ಲ, ಅಸ್ತ್ರವೂ ಅಲ್ಲ ಎಂದು ಪರಿಗಣಿಸುತ್ತಾ ಉಗುರಿನಿಂದಲೇ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗಿದು ಕೊಂದುಬಿಡುತ್ತಾನೆ. ಬ್ರಹ್ಮನು ಈ ವಿಷಯದಲ್ಲಿ ಉಗುರಿನ ಪರ ವಕಾಲತ್ತು ವಹಿಸಿ ಹಿರಣ್ಯಕಶಿಪುವಿನ ಜೀವ ಉಳಿಸಲಿಲ್ಲ! ಅಂತೂ ಉಗುರಿಗೆ ದಕ್ಕಬೇಕಾದ ಸ್ಥಾನಮಾನ ಸಿಗದೆ ಎಡಬಿಡಂಗಿಯಂತಾಯ್ತು. ಇರಲಿ ಬಿಡಿ, ಒಂದು ವೇಳೆ ಮನುಷ್ಯರಿಗೂ ಹುಲಿಬೆಕ್ಕುಗಳಂತೆ ಬೇಕೆಂದಾಗ ಹೊರಗೆಳೆದುಕೊಂಡು, ಬೇಡವಾದಾಗ ಒಳಗೆ ಸೆಳೆದು ಕೊಳ್ಳುವಂತಹ ಉಗುರು ಇರುತ್ತಿದ್ದರೆ ಏನಾಗುತ್ತಿತ್ತು? ಆ ಸೌಲಭ್ಯವಿಲ್ಲದಿದ್ದರೆ ಬೇಡ, ಅದರ ಬದಲಾಗಿ ಕಂಠಕ್ಕಾದರೂ ಹುಲಿಯುಗುರನ್ನು ಧರಿಸಿ ಕೊಳ್ಳೋಣವೆಂದು ಕೆಲವರು ಧರಿಸಿಕೊಳ್ಳುತ್ತಾರೆ – ದುಷ್ಟಶಕ್ತಿಯ ನಿವಾರಣಾರ್ಥವಾಗಿ ಎಂದು ಪ್ರತೀತಿ! ಸ್ವತಃ ಮನುಷ್ಯನೇ ದುಷ್ಟಶಕ್ತಿಯಾಗಿ ದುರ್ಬಲರನ್ನು ಕಾಡುತ್ತಿರುವುದಕ್ಕೆ ಯಾವ ಉಗುರು ಪ್ರತಿಬಂಧಕವಾದೀತೋ?

ಈ ಉಗುರಿಗೆ ಎಲ್ಲಿಯಾದರೂ ಸ್ವಲ್ಪ ತಾಗಿತೋ ಶನಿ ವಕ್ಕರಿಸಿತೆಂದೇ ಲೆಕ್ಕ. ಮೊನ್ನೆ ತೋಟದಲ್ಲಿ ಅದೇನೋ ಮಾಡುತ್ತಿದ್ದಾಗ ಒಂದು ಕಲ್ಲು ನನ್ನ ಕಾಲಿನ ಹೆಬ್ಬೆರಳಿನ ಉಗುರಿನ ಬುಡಕ್ಕೆ ಬಿತ್ತು. ಅಲ್ಲಿಂದಲೇ ಆರಂಭವಾಯ್ತು ದುರ್ದೆಸೆ, ನನಗೆ ಮಾತ್ರವಲ್ಲ ನಿಮಗೂ ಕೂಡ. ಯಾಕೆಂದರೆ ನಾನು ಈ ಪ್ರಬಂಧ ಬರೆಯಲು ಹೊರಟದ್ದೇ ನನ್ನ ಉಗುರಿನ ಬುಡಕ್ಕೆ ಕಲ್ಲು ಬಿದ್ದಮೇಲೆ! ಹಗಲೂ ರಾತ್ರಿ ಸೆಳೆತ ಉಂಟಾಗಿ ನನ್ನ ದೈನಂದಿನ ಚಟುವಟಿಕೆಯೇ ನಿಂತುಬಿಟ್ಟಾಗ ನಮ್ಮ ಮನೆಯ ಧನ್ವಂತರಿಯಾದ ನನ್ನಜ್ಜ ನನ್ನ ಬೆರಳಿಗೆ ಆಗಾಗ ಎಳ್ಳನ್ನು ಅರೆದು ಹಚ್ಚಿ ನೋವನ್ನು ಗುಣಗೊಳಿಸಿದ ನೆನಪು ನನಗೆಂದಿಗೂ ಮರೆತುಹೋಗಲಾರದು. ಬೆರಳು ಮೀರಿದ ಉಗುರನ್ನು ಮನೆಯ ಹಿರಿಯರು ಎಂದಿಗೂ ಬೆಳೆಯಗೊಡುವುದಿಲ್ಲ. ಅಷ್ಟೇ ಅಲ್ಲ, ತೆಗೆದ ಉಗುರನ್ನು ಮನೆಯ ಒಳಗಡೆ ಹಾಕಿ ದರಿದ್ರ ಉಂಟುಮಾಡಬೇಡಿ, ಹೊರಗೆಸೆಯಿರಿ ಎಂದು ಆಜ್ಞಾಪಿಸುತ್ತಾರೆ. ಸೂಕ್ಷ್ಮವಾಗಿ ನೋಡಿದರೆ, ಈ ಉಗುರುಗಳು ಆಹಾರ ಪದಾರ್ಥಗಳೊಡನೆ ಸೇರಿ ನಮ್ಮ ದೇಹವನ್ನು ಪ್ರವೇಶಿಸಿ ಅನಾರೋಗ್ಯವುಂಟುಮಾಡಿ ಏರುಪೇರಾದೀತೆಂಬ ಮುಂದಾಲೋಚನೆಯೇ ಈ ಆಜ್ಞೆಯ ಹಿಂದಿದೆ ಎಂಬುದು ಮನವರಿಕೆಯಾಗುತ್ತದೆ. ಆದ್ದರಿಂದಲೇ ಈ ಉಗುರನ್ನು ಹೆಚ್ಚು ಬೆಳೆಯಿಸಿದಷ್ಟೂ ಅಪಾಯಕಾರಿಯಾಗುವ ಸಂಭವವಿದೆ, ಬೆರಳಿನಂಚಿಗೇ ಇದನ್ನು ನಿಲ್ಲಿಸಿಬಿಡುವುದೊಳಿತು ಅಲ್ಲವೆ?




ಸುಬ್ರಹ್ಮಣ್ಯ ಎಸ್. ಆರ್.
ಚೊಕ್ಕಾಡಿ, ನೇಣಾರು ಮನೆ, ಚೊಕ್ಕಾಡಿ ಅಂಚೆ, ಸುಳ್ಯ ತಾಲ್ಲೂಕು–೫೭೪೨೧೨

# ಈಶಾನ್ಯ ರಾಜ್ಯಗಳು : ಸೆರಗಿನ ಕೆಂಡ

ಪ್ರೊ॥ ಶಿವರಾಮಯ್ಯ

ಸಶಸ್ತ್ರ ಸೇನಾಪಡೆ ವಿಶೇಷ ಕಾಯ್ದೆ ಜಾರಿಯಲ್ಲಿರುವ ಈಶಾನ್ಯ ರಾಜ್ಯಗಳ ಸ್ಥಿತಿ ಈಗ ಸೆರಗಿನಲ್ಲಿ ಕೆಂಡ ಕಟ್ಟಿಕೊಂಡು ತಾಯಿ ತನ್ನ ಹಸುಗೂಸಿಗೆ ಹಾಲುಣಿಸುತ್ತಿರುವಂತಾಗಿದೆ. ಭಾರತ ಈಶಾನ್ಯಕ್ಕಿರುವ ಸಪ್ತ ಸೋದರ ರಾಜ್ಯಗಳಾದ ಅಸ್ಸಾಂ, ಅರುಣಾಚಲ, ನಾಗಾಲ್ಯಾಂಡ್, ಮಣಿಪುರ, ಮಿಜೋರಾಂ, ತ್ರಿಪುರ ಹಾಗೂ ಮೇಘಾಲಯಗಳಲ್ಲಿ ಹಿಂಸಾಚಾರ ಭುಗಿಲೆದ್ದು ಅಮಾಯಕ ಜನರ ಮಾರಣ ಹೋಮ ನಡೆಯುತ್ತಿದೆ. ಕಳೆದ ೩-೪ ತಿಂಗಳಿನಿಂದ ಮಣಿಪುರದಲ್ಲಿ ಘರ್ಷಣೆಗಳು ನಿಲುಗಡೆಯಾಗಿಲ್ಲ, ಅದಕ್ಕೆ ಇತ್ತೀಚಿನ ಸೇರ್ಪಡೆಯೆಂದರೆ ಅಸ್ಸಾಂ ಮತ್ತು ನಾಗಾಲ್ಯಾಂಡ್ ಸೇರಿದಂತೆ ಅಕ್ಟೋಬರ್ ಮೊದಲ ವಾರದಲ್ಲಿ ಸಂಭವಿಸಿದ ಸರಣಿ ಬಾಂಬ್ ಸ್ಫೋಟ. ಇದರಿಂದ ಸುಮಾರು ೭೦ ಜನಕ್ಕಿಂತ ಮೇಲ್ಪಟ್ಟು ಅಸು ನೀಗಿ, ನೂರಾರು ಜನರು ಗಾಯಗೊಂಡಿದ್ದಾರೆ. ಜೊತೆಗೆ ದಿನಬೆಳಗಾದರೆ ಬಂದ್, ಮುಷ್ಕರ, ಧರಣಿ, ರಸ್ತೆತಡೆ, ಮೆರವಣಿಗೆ ಮುಂತಾದ ಗಲಭೆಗಳಿಂದ ಅಲ್ಲಿನ ಜನಜೀವನ ಅಸ್ತವ್ಯಸ್ತಗೊಳ್ಳುತ್ತಿದೆ.

ಸಶಸ್ತ್ರ ಸೇನಾಪಡೆ ಕಾಯ್ದೆಯನ್ನು ಜಾರಿಯಲ್ಲಿಟ್ಟು ಭಯೋತ್ಪಾದನೆಯನ್ನು ದಮನಗೊಳಿಸುತ್ತೇವೆ ಎಂಬ ಮಾತು ಮಣಿಪುರದ ನಿದರ್ಶನ ನೋಡಿದರೆ ವಿಪರೀತ ಹಾಗೂ ವ್ಯರ್ಥ ಸಾಹಸವೆಂದು ಸಾಬೀತಾಗಿದೆ. ಬ್ರಿಟಿಷರ ಕಾಲದ ಈ ಕಾಯ್ದೆ ಅನ್ವಯ ಯಾವುದೇ ವ್ಯಕ್ತಿಯನ್ನು ವಾರಂಟ್ ಇಲ್ಲದೆ ಬಂಧಿಸಬಹುದು, ಗುಮಾನಿ ಬಂದರೆ ಗುಂಡಿಕ್ಕಿ ಸಾಯಿಸಬಹುದು ಮತ್ತು ವಿಚಾರಣೆ ಇಲ್ಲದೆ ಸೆರೆಮನೆಯಲ್ಲಿ ಕೊಳೆಹಾಕಬಹುದು. ಇಂಥ ಕಾಯ್ದೆಯನ್ನು ಮಣಿಪುರದಲ್ಲಿ ಕಳೆದ ೪೦-೫೦ ವರ್ಷಗಳಿಂದಲೂ ಜಾರಿಯಲ್ಲಿಡಲಾಗಿದೆ. ಆದರೆ ಇಲ್ಲಿನ ಬಂಡುಕೋರರನ್ನು ದಮನಗೊಳಿಸಲು ಸಾಧ್ಯವಾಗಲಿಲ್ಲ. ತದ್ವಿರುದ್ಧವಾಗಿ ಸೇನಾಪಡೆ ನಾಗರಿಕರನ್ನು ಮಾತ್ರ ಹರಿದು ತಿನ್ನುತ್ತಿದೆ. ಉದಾಹರಣೆಗೆ, ಕಳೆದ ಜುಲೈ ೧೦ರಂದು ಅಸ್ಸಾಂ ರೈಫಲ್ಸ್ ಪಡೆಯ ಹವಲ್ದಾರರು ಇಲ್ಲಿನ ಪ್ರಗತಿಪರ ಸಂಘಟನೆಯೊಂದರ ಕಾರ್ಯಕರ್ತೆ ಮನೋರಮಾ ದೇವಿ ಎಂಬ ಯುವತಿಯನ್ನು ಎಳೆದೊಯ್ದು, ಅವಳ ಮೇಲೆ ಅತ್ಯಾಚಾರ ನಡೆಸಿ, ನಂತರ ಗುಂಡಿಟ್ಟು ಕೊಂದು ಹೆಣವನ್ನು ಕಾಡಿನಲ್ಲಿ ಒಗೆದುದರ ಪರಿಣಾಮವಾಗಿ ಮಣಿಪುರ ಇನ್ನೂ ಹತ್ತಿ ಉರಿಯುತ್ತಿದೆ. ಜನ ಬೀದಿಗಿಳಿದು ಸಶಸ್ತ್ರಸೇನಾಪಡೆಯನ್ನು ವಾಪಸು ಕರೆದುಕೊಳ್ಳಿ ಎಂದು ಕೇಂದ್ರದ ವಿರುದ್ಧ ಪ್ರತಿಭಟಿಸುತ್ತಿದ್ದಾರೆ. ನಗ್ನ ಮಹಿಳೆಯರು ಸೇನಾ ಕಚೇರಿಗಳ ಮುಂದೆ ಪ್ರತಿಭಟನೆ, ಧರಣಿ ಸತ್ಯಾಗ್ರಹ ನಡೆಸಿದ್ದಾರೆ. ಕಳೆದ ೪೦ ವರ್ಷಗಳ ದೀರ್ಘಾವಧಿಯಲ್ಲಿ ಬಂಡುಕೋರರನ್ನು ನಿಯಂತ್ರಿಸಲಾಗದ ಈ ಸೇನಾಪಡೆ ಇಲ್ಲಿ ನಿಷ್ಪ್ರಯೋಜಕವಲ್ಲವೆ? ಅದನ್ನು ಹಿಂದೆ ಕರೆಯಿಸಿಕೊಳ್ಳಲು ಏನು ಅಡ್ಡಿ? ಎಂದು ಸಾರ್ವಜನಿಕರು ಕೇಳುತ್ತಿದ್ದಾರೆ. ಒಟ್ಟಾರೆ ಬೇಲಿಯೇ ಎದ್ದು ಹೊಲ ಮೇದಂತೆ ಸೇನಾ ವಿಶೇಷ ಕಾಯಿದೆಯಿಂದ ಅಲ್ಲಿ ವಿರುದ್ಧ ಪರಿಣಾಮಗಳಾಗುತ್ತಿವೆ. ಗುಮಾನಿಯ ಮೇಲೆ ಇದುವರೆಗೆ ೩೩ ಜನ ನಾಗರಿಕರನ್ನು ಹತ್ಯೆ ಮಾಡಲಾಗಿದೆ.

ಇಂಥ ಒಂದು ನಿದರ್ಶನ ಕಣ್ಣೆದುರು ಇರುವಾಗ ನಮ್ಮ ಗೃಹ ಸಚಿವರು ಹೇಳುವ ಸಶಸ್ತ್ರ ಸೇನಾಪಡೆಯನ್ನು ಹೆಚ್ಚಿಸುವ ಕ್ರಮ ದೂರದೃಷ್ಟಿ ಇಲ್ಲದ ಮಾತಾಯಿತು. ಜೊತೆಗೆ ಅವರ ಪ್ರಸ್ತಾವವನ್ನು ಈಶಾನ್ಯ ರಾಜ್ಯಗಳ ಉಲ್ಫಾ, ಬೋಡೋ, ನಾಗಾ ಮುಂತಾದ ವಿಮೋಚನಾ ಸಂಘಟನೆಗಳು ಸಾರಾಸಗಟಾಗಿ ಈಗಾಗಲೇ ತಿರಸ್ಕರಿಸಿವೆ.

ಬಂಡುಕೋರರು ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಒಂದೆಡೆ ಸೇರಿ ಸಂಧಾನಕ್ಕೆ ಬಾರದೆ ಯಾವ ಸಮಸ್ಯೆಯೂ ಇತ್ಯರ್ಥವಾಗುವುದಿಲ್ಲ. ಅಸಲಿ ಮಾತೆಂದರೆ ಈ ನಿಟ್ಟಿನ ಬಂಡಾಯಗಳು ನೆನ್ನೆ ಮೊನ್ನೆಯಿಂದ ಹುಟ್ಟಿ ಬಂದವುಗಳಲ್ಲ. ಅವುಗಳ ಇತಿಹಾಸದ ಬೇರುಗಳು ಬ್ರಿಟಿಷರ ಆಳ್ವಿಕೆಗೂ ಚಾಚಿಕೊಳ್ಳುತ್ತವೆ. ಆದ್ದರಿಂದ ಮೊದಲು ಸಮಸ್ಯೆಯ ಮೂಲವನ್ನು ಈಗ ಪತ್ತೆಹಚ್ಚಬೇಕಾಗಿದೆ. ಅದರ ಪರಿಶೀಲನೆಗಾಗಿ ಇಂಡಿಯಾ ಭೂ ವಿವರಣೆಯತ್ತ ಕಣ್ಣು ಹಾಯಿಸಬೇಕು. ಅದರಲ್ಲಿ ಅರಣ್ಯ ಹಾಗೂ ಖನಿಜ ಸಂಪನ್ಮೂಲಗಳು ಎಲ್ಲೆಲ್ಲಿ ಯಥೇಚ್ಛ ದೊರೆಯುತ್ತವೆಯೋ ಅಲ್ಲಲ್ಲಿಯೇ ಬಂಡಾಯಗಳು, ಗಲಭೆಗಳು, ಸಾವು-ನೋವು ಕೊನೆಯಿಲ್ಲದೆ ಜರುಗಿವೆಯಲ್ಲ ಯಾಕೆ ಎಂದು ನಾವು ಗಮನಿಸಿ ನೋಡಬೇಕು. ಹಾಗೆ ನೋಡಿದರೆ ಈಶಾನ್ಯ ರಾಜ್ಯಗಳಲ್ಲಿ ನಮ್ಮ ಪಶ್ಚಿಮ ಘಟ್ಟಗಳಲ್ಲಿದ್ದಂತೆಯೇ ಅಕ್ಷಯ ಅರಣ್ಯ ಸಂಪತ್ತಿರುವುದು ಕಂಡುಬರುತ್ತದೆ. ಜೊತೆಗೆ ಅಸ್ಸಾಂ ರಾಜ್ಯದಲ್ಲಿ ಸಾಕಷ್ಟು ಪೆಟ್ರೋಲಿಯಂ ದೊರೆಯುತ್ತದೆ. ಬ್ರಹ್ಮಪುತ್ರಾ ಮತ್ತು ಅದರ ಉಪನದಿಗಳ ಪಾತ್ರಗಳಲ್ಲಿ ಸಮೃದ್ಧ ಬೆಳೆ ಬೆಳೆಯುತ್ತದೆ. ಅಲ್ಲಿ ಜಗತ್ಪ್ರಸಿದ್ಧ ಟೀ ಎಸ್ಟೇಟುಗಳಿವೆ. ಜೊತೆಗೆ ವೈವಿಧ್ಯಮಯವಾದ ಭಾಷೆ ಸಂಸ್ಕೃತಿ ಕಲೆಗಳ ತವರಾಗಿವೆ. ಇಷ್ಟೆಲ್ಲ ಇದ್ದೂ ಯಾಕೆ ಜನ ದಂಗೆ ಏಳುತ್ತಿದ್ದಾರೆ? ಎಂದು ಪ್ರಶ್ನಿಸಿದರೆ ಉತ್ತರ ಅಷ್ಟೇನೂ ಕಷ್ಟಕರವಲ್ಲ. ಪ್ರಪಂಚದ ಇತರೆಡೆಗಳಲ್ಲಿರುವಂತೆಯೇ ಈಶಾನ್ಯ ರಾಜ್ಯಗಳ ದಟ್ಟಾರಣ್ಯಗಳಲ್ಲಿಯೂ ವಿವಿಧ ಬುಡಕಟ್ಟುಗಳಿಗೆ ಸೇರಿದ ಆದಿವಾಸಿ ಗಿರಿಜನರೂ, ೧೨ ಗುಂಪುಗಳಾಗಿ ಒಡೆದಿರುವ ನಾಗಾ ಬುಡಕಟ್ಟುಗಳೂ ವಾಸಿಸುತ್ತಿವೆ. ಅನಾದಿ ಕಾಲದಿಂದಲೂ ಇವರು ಅರಣ್ಯ ಸಂಪನ್ಮೂಲಗಳ ಮೇಲೆ ಅವಲಂಬಿತರಾಗಿ ಬದುಕು ಸಾಗಿಸುತ್ತಿದ್ದರು. ಹೀಗಿರುತ್ತ ಕೊಳ್ಳೆಗಾಗಿ ಬಂದ ವಸಾಹತುಶಾಹಿ ಬ್ರಿಟಿಷರು ಅವರ ನೆಮ್ಮದಿಯ ಬದುಕಿಗೆ ಕೊಳ್ಳಿ ಇಟ್ಟರು. ಅವರು ಮಾಡಿದ ಕೆಲಸ ಜೇನುಹುಟ್ಟಿಗೆ ಹೊಗೆ ಕೊಟ್ಟಂತಾಗಿ ಬುಡಕಟ್ಟುಗಳು ಕೆಣಕಲ್ಪಟ್ಟವು. ನಾಗಾ ಜನರು ಸ್ವಾಭಿಮಾನಿಗಳಾಗಿ ಆತ್ಮರಕ್ಷಣೆಗಾಗಿ ಸಾಂಪ್ರದಾಯಿಕ ಅಸ್ತ್ರಗಳನ್ನು ಹಿಡಿದರು. ಆದರೆ ಬ್ರಿಟಿಷರ ಬಂದೂಕಿನ ಎದುರು ಅವರ ಬಿಲ್ಲು, ಬಾಣ, ಭರ್ಜಿಗಳು ನಿಲ್ಲಲು ಸಾಧ್ಯವೆ? ಹೀಗೆ ಬಂಡೆದ್ದ ನಾಗಾಗಳನ್ನು ದಮನ ಮಾಡಲು ೧೯೪೨ರಲ್ಲಿಯೇ ಸಶಸ್ತ್ರ ಸೇನಾಪಡೆ ವಿಶೇಷ ಕಾಯ್ದೆಯನ್ನು ಬ್ರಿಟಿಷರು ಜಾರಿಗೊಳಿಸಿದರು. ಪ್ರತಿಭಟಿಸಿದವರು ಬಂದೂಕಿಗೆ ಬಲಿಯಾದರು. ಉಳಿದವರು ಹೆದರಿ, ಅಸಹಾಯಕರಾಗಿ ಬ್ರಿಟಿಷ್ ದೊರೆಗಳ ಬೃಹತ್ ಕಾಫಿ, ಟೀ ಎಸ್ಟೇಟುಗಳಲ್ಲಿ ಪಶುಗಳಂತೆ ದುಡಿದರು. ಮತ್ತು ಅಸ್ಸಾಮಿನ ಪೆಟ್ರೋಲಿಯಂ ಬಾವಿಗಳನ್ನು ತೋಡಿದರು. ಅದಕ್ಕೆ ಅವರು ಕೊಡುತ್ತಿದ್ದ ಕೂಲಿ ಅರೆಹೊಟ್ಟೆ, ಅರೆಬಟ್ಟೆಗೂ ಸಾಲುತ್ತಿರಲಿಲ್ಲ. ಕಾರ್ಮಿಕ ಸಂಘಟನೆಗಳನ್ನು ಮೊಳಕೆಯಲ್ಲಿಯೇ ಚಿವುಟಿ ಹಾಕಲಾಗುತ್ತಿತ್ತು. ಅಂತೂ ಅವ್ಯಾಹತವಾಗಿ ಈ ರಾಜ್ಯಗಳ ಮರಮುಟ್ಟು ಸಾಮಾನುಗಳು, ಟೀಸೊಪ್ಪು, ಪೆಟ್ರೋಲಿಯಂ ವಸ್ತುಗಳು ಕೊಳ್ಳೆ ಹೋದವು. ಬ್ರಿಟಿಷ್ ಕಂಪನಿಗಳು ಬಲಿತವು.

ಇಂತಿರುತ್ತ ೧೯೪೭ರಲ್ಲಿ ರಾಷ್ಟ್ರಕ್ಕೆ ಸ್ವಾತಂತ್ರ್ಯವೂ ಲಭಿಸಿತು. ಬ್ರಿಟಿಷರೂ ಹೋದರು. ಆದರೆ ಯಾರಿಗೆ ಬಂತು ಸ್ವಾತಂತ್ರ್ಯ? ತದನಂತರ ಅಭಿವೃದ್ಧಿಯ ಹೆಸರಿನಲ್ಲಿ ಬೃಹತ್ ಕಾಮಗಾರಿಗಳು ಆರಂಭಗೊಂಡವು. ದೊಡ್ಡ ದೊಡ್ಡ ಅಣೆಕಟ್ಟುಗಳು; ಉದ್ದುದ್ದ ರಸ್ತೆಗಳು; ಆಳಕ್ಕೆ ಸಿಡಿದ ಅದುರು ನಿಕ್ಷೇಪದ ಗಣಿಗಳು; ಕಡಿದುರುಳಿಸಿದ ನಾಟಾ ಕಾಡುಗಳು; ಒತ್ತುವರಿಯಾದ ಕಾಫಿ, ಟೀ ಎಸ್ಟೇಟುಗಳು; ಒಟ್ಟಾರೆಯಾಗಿ ರಾಷ್ಟ್ರದ ಇತರೆಡೆಗಳಲ್ಲಾದಂತೆಯೇ ಈಶಾನ್ಯ ರಾಜ್ಯಗಳಲ್ಲೂ ಅಭಿವೃದ್ಧಿ ಕಾಮಗಾರಿಗಳು ಶುರುವಾದವು. ಈ ಎಲ್ಲದರ ಪರಿಣಾಮ ಏನಾಯಿತೆಂದರೆ ಬ್ರಿಟಿಷರ ಕಾಲಕ್ಕೂ ಕಡೆಯಾಗಿ ಬುಡಕಟ್ಟು ಜನರ ಶೋಷಣೆ ಮುಂದುವರೆಯಿತು. ಅವರನ್ನು ರಕ್ಷಿತಾರಣ್ಯ ಕಾಯ್ದೆಗಳ ನೆಪದಲ್ಲಿ ಅಲ್ಲಿಂದ ಎತ್ತಂಗಡಿ ಮಾಡಲಾಯಿತು; ಅಣೆಕಟ್ಟುಗಳ ನೆಲೆಯಿಂದ ಒಕ್ಕಲೆಬ್ಬಿಸಲಾಯಿತು; ಎಸ್ಟೇಟುಗಳಲ್ಲಿ ಜೀತಗಾರರನ್ನಾಗಿ ದುಡಿಸಲಾಯಿತು; ಉಳುವವನಿಗೆ ಭೂಮಿ ಇನ್ನೂ ಕನಸಾಗಿಯೇ ಉಳಿಯಿತು. ಈ ನೊಗಭಾರ ಎಳೆಯಲಾರದ ಕೆಲವು

> ಕೇಂದ್ರ ಗೃಹಮಂತ್ರಿ ಶಿವರಾಜ್ ಪಾಟೀಲ್ ಗಲಭೆ ಪೀಡಿತ ಪ್ರದೇಶಗಳಿಗೆ ಭೇಟಿ ನೀಡಿ ಈಶಾನ್ಯ ರಾಜ್ಯಗಳ ಉಗ್ರರ ನಿಗ್ರಹಕ್ಕೆ ಏಕರೂಪ ಕ್ರಮ ಕೈಗೊಳ್ಳುವುದಾಗಿ ತಿಳಿಸಿದ್ದಾರೆ. ಅವರ ಪ್ರಕಾರ, ಈ ದಿಕ್ಕಿನಲ್ಲಿ ಕಾಡುತ್ತಿರುವ ಭಯೋತ್ಪಾದನೆಯನ್ನು ಹತ್ತಿಕ್ಕಲು ಸೌಹಾರ್ದ ಸಂಬಂಧ ನಿರ್ಮಾಣ, ಉಗ್ರರ ನಿಗ್ರಹಕ್ಕೆ ಎಲ್ಲ ನೆರವು ಹಾಗೂ ಸಶಕ್ತ ಸೇನಾಪಡೆಯ ಬಲವನ್ನು ಹೆಚ್ಚಿಸುವುದು ಮುಂತಾಗಿ ಅದೇ ಹಳೇ ರಾಗವಾಗಿದೆ.

ಪ್ರಗತಿಪರ ಜನರು ಪ್ರತಿರೋಧ ಒಡ್ಡಲು ಆರಂಭಿಸಿದರು, ಅರೆ ಊಳಿಗಮಾನ್ಯ ಶೋಷಣೆಯ ವಿರುದ್ಧ ಬಂಡೆದ್ದರು. ಅವರೊಟ್ಟಿಗೆ ನೆರೆಯ ರಾಷ್ಟ್ರಗಳಾದ ಬಾಂಗ್ಲಾ, ಬರ್ಮಾ, ಚೀನಾ, ನೇಪಾಳ ಮತ್ತಿತರ ಕಡೆಯಿಂದ ಒಳನುಸುಳಿದ ಬಂಡುಕೋರರು, ಉಗ್ರರು, ನಿರ್ವಸಿತರು ಬೆರೆತುಹೋದರು. 'ನಮ್ಮನ್ನೂ ಮನುಷ್ಯರೆಂದು ತಿಳಿದು ಬದುಕಲು ಬಿಡಿ' ಎಂಬ ಸ್ಥಾಯಿ ಕೂಗು ಮೊಳಗಿತು. ಆದರೂ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಆರಂಭದಲ್ಲಿಯೇ ಎಚ್ಚೆತ್ತುಕೊಳ್ಳದೆ ಉಪೇಕ್ಷೆ ಮಾಡಿ, ಆಮೇಲೆ ಅವರಿಗೆ ಉಗ್ರವಾದಿಗಳು ಎಂಬ ಹಣೆಪಟ್ಟಿ ಕಟ್ಟಿ ಸಶಸ್ತ್ರಪಡೆಯಿಂದ ಹತ್ತಿಕ್ಕಲು ಹೊರಟರು. ಈಗ ಪರಿಸ್ಥಿತಿ ಇನ್ನಷ್ಟು ಹದಗೆಡುತ್ತಿದೆ. ಅತ್ತ ಹಗಲಲ್ಲಿ ಬಂದೂಕು ಹೊತ್ತು, ಜನನಿಬಿಡ ಪ್ರದೇಶಗಳತ್ತ ಬಾಂಬ್‌ಗಳನ್ನೆಸೆದು ಪರಾರಿಯಾಗುವ ಬಂಡುಕೋರರು, ಇತ್ತ ಅವರು ಸಿಗದಿದ್ದರೂ ಗುಮಾನಿ ಮೇಲೆ ನಾಗರಿಕರತ್ತ ಬಂದೂಕು ತಿರುಗಿಸುವ ಸಶಸ್ತ್ರಪಡೆ. ಅಂತೂ ಪರಿಸ್ಥಿತಿ ಕೈಮೀರಿ ಹೋಗುತ್ತಿದೆ. ಅವರು ಜನರ ಸಹಾನುಭೂತಿಯನ್ನು ಕಳೆದುಕೊಂಡಂತೆಲ್ಲಾ ಇವರ ಎನ್‌ಕೌಂಟರ್ ಹತ್ಯೆಗಳು ಇಮ್ಮಡಿಯಾಗುತ್ತಿವೆ.

ಹೀಗಾದರೆ ಸೌಹಾರ್ದ ಸಂಬಂಧ ನಿರ್ಮಾಣ ಹೇಗೆ? ಆದರೂ ಕೈಚೆಲ್ಲಿ ಕೂರಲು ಬಾರದು. ಮತ್ತಷ್ಟು ಮಾನಹಾನಿ, ಇನ್ನಷ್ಟು ಪ್ರಾಣಹಾನಿ ಯಾವ ಕಾರಣಕ್ಕೂ ಸಲ್ಲದು. ಆಂಧ್ರ ಸರ್ಕಾರ ಈಗಾಗಲೇ ತನ್ನ ರಾಜ್ಯದ ನಕ್ಸಲ್ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಆ ಮುಖಂಡರ ಜೊತೆಗೆ ಪೂರ್ವಷರತ್ತಿಲ್ಲದ (೧೫-೧೦-೨೦೦೪) ಮಾತುಕತೆಗೆ ತಯ್ಯಾರಿ ನಡೆಸುತ್ತಿದೆ. ಇದೇ ಮಾದರಿಯನ್ನನುಸರಿಸಿ ಈಶಾನ್ಯ ರಾಜ್ಯಗಳು ಅಲ್ಲಿನ ವಿಮೋಚನಾ ಸಂಘಟನೆಗಳಾದ ಉಲ್ಫಾ, ಬೋಡೋ, ನಾಗಾ ಮುಂತಾದ ನಾಯಕರೊಂದಿಗೆ ಪೂರ್ವಷರತ್ತಿಲ್ಲದೆ ಮಾತುಕತೆ ಆರಂಭಿಸುವುದು ಸೂಕ್ತ. ಇತರೆಡೆಗಳಲ್ಲಿರುವಂತೆಯೇ ಇಲ್ಲಿ ಕೂಡ ಭೂಮಿ ಒಡೆತನದ ಪ್ರಶ್ನೆಯೇ ಮುನ್ನೆಲೆಗೆ ಬರುವುದುಂಟು. ಮುಖ್ಯವಾಗಿ ಉಳುವವನಿಗೇ ಭೂಮಿ; ಜೀತಪದ್ಧತಿ ರದ್ದು; ಕೋರ್ಟು ಆದೇಶದ ಪ್ರಕಾರ ದಿನಕೂಲಿ; ಅಸ್ಪೃಶ್ಯತೆಯ ಆಚರಣೆ ವಿರುದ್ಧ ಕಟ್ಟುನಿಟ್ಟಿನ ಕ್ರಮ; ಅರಣ್ಯವಾಸಿಗಳ ಎತ್ತಂಗಡಿಗೆ ತಡೆ; ಬುಡಕಟ್ಟು ಜನರು ಆರಂಭಮಾಡುತ್ತಿರುವ ಹೊಲಗದ್ದೆಗಳಿಗೆ ಹಕ್ಕುಪತ್ರ ವಿತರಣೆ; ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸಿಕೊಳ್ಳಲು ಪರವಾನಿಗೆ, ಇತ್ಯಾದಿ ಸಮಸ್ಯೆಗಳನ್ನು ಮೊದಲು ಪರಿಹರಿಸಿಕೊಳ್ಳಬೇಕು. ಇವೆಲ್ಲವೂ ಸಂವಿಧಾನ ಚೌಕಟ್ಟಿನಲ್ಲಿ ಈಗಾಗಲೇ ಕೊಡಮಾಡಿರುವ ಹಕ್ಕು ಬಾಧ್ಯತೆಗಳೇ.

ಆದ್ದರಿಂದ ಅವುಗಳನ್ನು ನಮ್ಮ ಪ್ರಭುತ್ವ ಕಟ್ಟುನಿಟ್ಟಾಗಿ ಜಾರಿಗೊಳಿಸಿದರೆ ಸಾಕು. ಈಗ ಬಂಡುಕೋರರ ಸಂಘಟನೆಗಳೂ ಸಹ ತಮ್ಮ ಕಾಠಿಣ್ಯ ಮುಖಮುದ್ರೆಯನ್ನು ಸ್ವಲ್ಪ ಮೃದುಗೊಳಿಸಿಕೊಂಡು ಮಾತುಕತೆಗೆ ಸಹಕರಿಸಬೇಕು. ಇಲ್ಲವಾದರೆ ಈಶಾನ್ಯ ರಾಜ್ಯಗಳಲ್ಲಿಯೂ ಇನ್ನೊಂದು ಕಾಶ್ಮೀರ, ಇನ್ನೊಂದು ತೆಲಂಗಾಣ ತಲೆ ಎತ್ತುತ್ತವೆ. ಮುಖ್ಯವಾಗಿ ಈ ವಿಮೋಚನಾ ಸಂಘಟನೆಗಳ ಹಾಗೂ ಸಶಸ್ತ್ರಪಡೆಗಳ ನಡುವೆ ಆಪಾದನೆಗಾಗಿ ಹೊಕ್ಕು ಬಳಕೆಯಾಗುತ್ತಿರುವ 'ಅದು ಇಂಡಿಯನ್ ಆರ್ಮಿ' ಮತ್ತು 'ಇವರು ಬಂಡುಕೋರರು' ಎಂಬ ಪಾರಿಭಾಷಿಕ ಮತ್ತು ಅನೈತಿಕ ಭಾಷಾಪ್ರಯೋಗ ನಿಂತುಹೋಗಿ ಪರಸ್ಪರ ಸೌಹಾರ್ದಯುತ ವಾತಾವರಣ ನಿರ್ಮಾಣವಾಗಬೇಕು.

ಹಾಗೆಯೇ ಭಾರತ ಸರ್ಕಾರ ತನ್ನ ನೆರೆಹೊರೆಯ ರಾಷ್ಟ್ರಗಳೊಂದಿಗೆ ಮಾತುಕತೆ ನಡೆಸಿ ಬಾಂಗ್ಲಾ, ಮೈನ್ಮಾರ್, ಚೀಣಾ, ನೇಪಾಳ – ಮುಂತಾದ ರಾಷ್ಟ್ರಗಳತ್ತಣಿಂದ ನುಸುಳಿಬರುವ ಭಯೋತ್ಪಾದಕರನ್ನೂ, ನಿರ್ವಸಿತರನ್ನೂ ಮತ್ತು ರವಾನೆಯಾಗುವ ಅಕ್ರಮ ಶಸ್ತ್ರಾಸ್ತ್ರಗಳನ್ನೂ ಪ್ರತಿಬಂಧಿಸಿ ತಡೆಯುವತ್ತ ಗಂಭೀರ ಪ್ರಯತ್ನ ಮಾಡಬೇಕು. ಇದೆಲ್ಲಾ ಸರಿಯೇ. ಆದರೂ ಸಮಸ್ಯೆ ಬಗೆಹರಿದೀತು ಎನ್ನುವ ಗ್ಯಾರಂಟಿ ಇಲ್ಲ. ಯಾಕೆಂದರೆ ಎಷ್ಟೆಲ್ಲಾ ಸಮಸ್ಯೆಗೆ ಮೂಲಭೂತ ಕಾರಣ ಆಸ್ತಿ ಹಕ್ಕು. ಎಂದರೆ 'ಉಳುವವನೇ ಭೂಮಿಗೆ ಒಡೆಯ' ಎಂಬ ಕಾಯಿದೆಯ ಸುತ್ತ ಸಮಸ್ಯೆ ಗಿರಕಿ ಹೊಡೆಯುತ್ತಿದೆ. ಸ್ವಾತಂತ್ರ್ಯ ಬಂದರೂ ಈ ಅರೆಊಳಿಗಮಾನ್ಯ ವ್ಯವಸ್ಥೆಯ ಅಂಡು ಅಲುಗಾಡಲಿಲ್ಲ. ಇನ್ನು ಮೇಲಾದರೂ ನಮ್ಮ ಪಾರ್ಲಿಮೆಂಟು ಆಸ್ತಿ ಹಕ್ಕಿಗೆ ಮಿತಿ ಒಡ್ಡುವ ತಿದ್ದುಪಡಿಯನ್ನು ತಂದು ಸಂವಿಧಾನವನ್ನು ತಿದ್ದಿ ಕಾನೂನು ಮಾಡಿ ಜಾರಿಗೊಳಿಸಿದರೆ ಮಾತ್ರ ಇದು ಬಗೆಹರಿಯುವ ಸಮಸ್ಯೆ. ಆದರೆ ಇಷ್ಟೊಂದು ಧಾರ್ಷ್ಟ್ಯ ಮತ್ತು ನೈತಿಕತೆ ನಮ್ಮ ಪ್ರಭುತ್ವಕ್ಕೆ ಉಂಟೆ? ಇಲ್ಲವಾದರೆ ಭಾರತಾಂಬೆಯ ಮಡಿಲಲ್ಲಿ ಧಗಧಗಿಸುವ ಈ ಉರಿಕೆಂಡವನ್ನು ನಂದಿಸುವ ಬಗೆ ಹೇಗೆ?

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ
ನಾಗರಬಾವಿ, ಬೆಂಗಳೂರು-೫೬೦ ೦೭೨

## ಬುದ್ಧನಿರಲಿಲ್ಲ!

ಮನೆಯ ಪಡಸಾಲೆಯೊಳಗೆ
ತೂಕಡಿಸುತ್ತ ಭ್ರಮೆಗಳ ಗೂಡಿನಲ್ಲಿ
ಬದುಕನ್ನು ಬೆಳೆಸಬಯಸಿದ್ದೆ
ಆಗ ಬುದ್ಧನಿರಲಿಲ್ಲ!

ಅಂಧಸತ್ವದ ಕಾವಿಧಾರಿಗಳಿಗೆ
ಹೆಗಲು ಕೊಟ್ಟು, ಬಹುಪರಾಕು ಹೇಳುತ್ತಲೇ
ಕುರಿಯಂತೆ ಕುಣಿದಾಡುತ್ತಿದ್ದೆ
ಆಗ ಬುದ್ಧನಿರಲಿಲ್ಲ!

ಹುಸಿ ಪ್ರತಿಷ್ಠಿತರ ಕೊಂಕು, ರಾಗ, ದ್ವೇಷ,
ಅಸೂಯೆಗಳಿಗೆ ಬತ್ತಳಿಕೆಯಾಗಿದ್ದೆ
ಆಗ ಬುದ್ಧನಿರಲಿಲ್ಲ!

ಹರಕು ಹಂದರದಲ್ಲಿ ಮಾನವೀಯತೆಗಳಿಗೆ
ಉರುಲು ಹಾಕುವುದನ್ನು ಕಂಡು
ನಿಸ್ಸಹಾಯಕ ಹೇಳವನಾಗಿದ್ದೆ
ಆಗ ಬುದ್ಧನಿರಲಿಲ್ಲ!

ಇವೆಲ್ಲದರ ಹಂಗು ಹರಿದುಕೊಂಡು
ಈಗ ನಿತ್ಯ ಮನುಷ್ಯ ಸಂಬಂಧಿಯಾಗಿದ್ದೇನೆ
ಈ ಪ್ರಜ್ವಲತೆಯಲ್ಲಿ ಬುದ್ಧನಿದ್ದಾನೆ,
ನನ್ನಲ್ಲಿ ಬೋಧಿವೃಕ್ಷ ನಗುತ್ತಿರುತ್ತದೆ ಸದಾ....

**ಮಂಜು ಶೆಟ್ಟರ್**
C/O ಈರಪ್ಪ ಎಂ. ಕಂಬಳಿ
ಡಿ-೧೫೪, ಜೀವನ ಭೀಮಾನಗರ
ಬೆಂಗಳೂರು - ೫೬೦ ೦೭೫



ಡಾ|| ನಿರಂಜನಾರಾಧ್ಯ ವಿ. ಪಿ.

ಬಡವರಿಗೆ, ಹಿಂದುಳಿದ ವರ್ಗದವರಿಗೆ ಶಿಕ್ಷಣ ನೀಡಬೇಕೆಂಬ ಕನಿಕರದ ಮಾತುಗಳನ್ನು ನಾವು ಕೇಳುತ್ತೇವೆ. ಆದರೆ ಇದು ಕನಿಕರದಿಂದಾಗಲಿ ಅಥವಾ ಘನ ಸೇವೆಯಿಂದಾಗಲಿ ಮಾಡಬೇಕಾದ ಕೆಲಸವಲ್ಲ. ಶಿಕ್ಷಣ ಮಾನವನ ಆಜನ್ಮಸಿದ್ಧ ಹಕ್ಕು. ಈ ಹಕ್ಕು ಪ್ರತಿಯೊಬ್ಬ ಮಾನವನ ಜೀವಿಸುವ ಹಕ್ಕಿನ ಭಾಗವಾಗಿರುತ್ತದೆ. ಆದ್ದರಿಂದಲೇ ಶಿಕ್ಷಣವನ್ನು ಜೀವನದಿಂದ ಪ್ರತ್ಯೇಕಿಸಲು ಸಾಧ್ಯವಾಗದಿರುವುದು.

ಸಾರ್ವತ್ರಿಕ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಬೇಡಿಕೆ ಸ್ವಾತಂತ್ರ್ಯ ಚಳವಳಿಯ ಭಾಗವಾಗಿ ಬೆಳೆದುಬಂದ ಬೇಡಿಕೆ. ಈ ಬೇಡಿಕೆಯ ಹಿಂದೆ ಸಾಕಷ್ಟು ತ್ಯಾಗ ಬಲಿದಾನವಿರುವುದು ಅನೇಕ ಗೆಳೆಯರಿಗೆ, ಅದರಲ್ಲೂ ವಿಶೇಷವಾಗಿ ರಾಜಕೀಯ ನೇತಾರರಿಗೆ ತಿಳಿದಿಲ್ಲ. ಈ ಕಾರಣದಿಂದಾಗಿ ಶಾಲಾ ಶಿಕ್ಷಣದ ಸಾರ್ವತ್ರೀಕರಣದ ಬಗ್ಗೆ ಮಾತನಾಡುವಾಗ, ಅಯ್ಯೋ ಪಾಪ ! ಬಡವರಿಗೆ, ಹಿಂದುಳಿದ ವರ್ಗದವರಿಗೆ ಶಿಕ್ಷಣ ನೀಡಬೇಕೆಂಬ ಕನಿಕರದ ಮಾತುಗಳನ್ನು ನಾವು ಕೇಳುತ್ತೇವೆ. ಆದರೆ ಇದು ಕನಿಕರದಿಂದಾಗಲಿ ಅಥವಾ ಘನ ಸೇವೆಯಿಂದಾಗಲಿ ಮಾಡಬೇಕಾದ ಕೆಲಸವಲ್ಲ. ಶಿಕ್ಷಣ ಮಾನವನ ಆಜನ್ಮಸಿದ್ಧ ಹಕ್ಕು. ಈ ಹಕ್ಕು ಪ್ರತಿಯೊಬ್ಬ ಮಾನವನ ಜೀವಿಸುವ ಹಕ್ಕಿನ ಭಾಗವಾಗಿರುತ್ತದೆ. ಆದ್ದರಿಂದಲೇ ಶಿಕ್ಷಣವನ್ನು ಜೀವನದಿಂದ ಪ್ರತ್ಯೇಕಿಸಲು ಸಾಧ್ಯವಾಗದಿರುವುದು.

ಈ ಸತ್ಯವನ್ನು ಮನಗಂಡ ನಮ್ಮ ರಾಷ್ಟ್ರೀಯ ನಾಯಕರು ಸ್ವತಂತ್ರ ಭಾರತಕ್ಕೊಂದು ಸಂವಿಧಾನವನ್ನು ರಚಿಸುವಾಗ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒಂದು ಕಾಲಮಿತಿ ಕಾರ್ಯಕ್ರಮವನ್ನಾಗಿ ಸಂವಿಧಾನದಲ್ಲಿ ಸೇರಿಸಿದರು. ಸಂವಿಧಾನದಲ್ಲಿದ್ದ ಏಕೈಕ ಕಾಲಮಿತಿ ಕಾರ್ಯಕ್ರಮವೆಂದರೆ ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಸಂವಿಧಾನ ಪ್ರಾರಂಭವಾದ ೧೦ ವರ್ಷದ ಒಳಗಾಗಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವುದು. ಉದ್ಯೋಗ ಒದಗಿಸಲಿಕ್ಕಾಗಲಿ ಅಥವಾ ಬಡತನ ನಿರ್ಮೂಲನೆಗಾಗಲಿ ನಾವು ಈ ರೀತಿಯ ಕಾಲಮಿತಿ ಕಾರ್ಯಕ್ರಮಗಳನ್ನು ಯೋಜಿಸಲಿಲ್ಲ. ಆದರೆ ಶಿಕ್ಷಣ ಮಾನವನ ಬದುಕಿನ ಕನಿಷ್ಠ ಅಗತ್ಯವೆಂದು ಮನಗಂಡ ನಾವು ಶಾಲಾ ಶಿಕ್ಷಣಕ್ಕೆ ಮೊದಲನೇ ಆದ್ಯತೆ ನೀಡಿದೆವು.

ಆದರೆ ಸಂವಿಧಾನ ಜಾರಿಯಾದ ೧೦ ವರ್ಷದ ಒಳಗಾಗಿ ಎಲ್ಲರಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಲು ನಮ್ಮಿಂದಾಗಲಿಲ್ಲ. ನಂತರ ಕೊಠಾರಿ ಆಯೋಗದ ಶಿಫಾರಸ್ಸಿನಂತೆ ೧೯೭೬ರ ವೇಳೆಗೆ ಎಲ್ಲರಿಗೂ ಶಿಕ್ಷಣ ನೀಡುವ ಭರವಸೆಯನ್ನು ೧೯೬೮ರ ರಾಷ್ಟ್ರೀಯ ಶಿಕ್ಷಣ ನೀತಿಯು ಜನರ ಮುಂದಿಟ್ಟಿತು. ೧೯೭೬ಕ್ಕಲ್ಲ ೧೯೮೬ರ ಅಂತ್ಯಕ್ಕೂ ನಾವು ಶಿಕ್ಷಣ ನೀಡಲು ಸಾಧ್ಯವಾಗಲಿಲ್ಲ. ಸಮಸ್ಯೆಯ ಗಾತ್ರ ಮತ್ತು ಆಳವನ್ನು ಮನಗಂಡ ಸರ್ಕಾರವು ೧೯೯೫ರ ವೇಳೆಗೆ ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವುದಾಗಿ ತನ್ನ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ (೧೯೮೬) ಪ್ರಕಟಿಸಿತು. ಈ ನೀತಿಯನ್ನು ಜಾರಿಗೊಳಿಸಲು ಕ್ರಿಯಾ ಯೋಜನೆಯನ್ನೂ ಕೂಡ ಸಿದ್ಧಪಡಿಸಿತು. ಈ ಮಧ್ಯೆ ೧೯೯೦ರಲ್ಲಿ ಜಾಗತಿಕಮಟ್ಟದ ಶೈಕ್ಷಣಿಕ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದ ಭಾರತವು ೨೦೦೦ದ ವೇಳೆಗೆ ''ಎಲ್ಲರಿಗೂ ಶಿಕ್ಷಣ'' ನೀಡುವ ಘೋಷಣೆಗೆ ಸಹಿಮಾಡಿ ಜಾರಿಗೊಳಿಸುವುದಾಗಿ ಒಪ್ಪಿತು. ಆದರೆ, ಆದದ್ದೇನು ? ಈ ಎಲ್ಲ ಕಾಲಮಿತಿಗಳು ಕೇವಲ ಘೋಷಣೆಗಳಾಗಿಯೇ ಉಳಿದವು. ಮಕ್ಕಳ ಮತ್ತು ಸಮುದಾಯದ ಪಾಲಿಗೆ ಶಿಕ್ಷಣವಂತೂ ಕನಸಾಗಿಯೇ ಉಳಿಯಿತು.

ಈ ಮಧ್ಯೆ ಶಿಕ್ಷಣವನ್ನು ಒಂದು ಮೂಲಭೂತ ಹಕ್ಕೆಂದು ಘೋಷಿಸಿದ ಸರ್ವೋಚ್ಚ ನ್ಯಾಯಾಲಯವು (೧೯೯೩) ದೇಶದ ಎಲ್ಲ ನಾಗರಿಕರೂ ಶಿಕ್ಷಣ ಪಡೆಯಲು ಮೂಲಭೂತ ಹಕ್ಕನ್ನು ಹೊಂದಿದ್ದಾರೆಂಬ ಐತಿಹಾಸಿಕ ತೀರ್ಪನ್ನು ನೀಡಿತು.

# ಶಾಲೆಗಳು ರಾಜಕೀಯ ಪಕ್ಷಗಳ ಶಾಖಾ ಕಚೇರಿಗಳಾಗಬೇಕೆ ?



ಇದನ್ನಾಧರಿಸಿ ಸಂವಿಧಾನಕ್ಕೆ ಸೂಕ್ತ ತಿದ್ದುಪಡಿಯನ್ನು ಮಾಡಲಾಯಿತು.

ಸಂವಿಧಾನದ ೮೬ನೇ ತಿದ್ದುಪಡಿ ಕಾಯ್ದೆಯಂತೆ ಶಿಕ್ಷಣ ಇಂದು ಮೂಲಭೂತ ಹಕ್ಕು. ಸಂವಿಧಾನದ ಜೀವಿಸುವ ಹಕ್ಕಿನ (ಪರಿಚ್ಛೇದ ೨೧) ನಂತರ ಶಿಕ್ಷಣದ ಹಕ್ಕನ್ನು ಮೂಲಭೂತ ಹಕ್ಕೆಂದು ಸಾರುವ ಹೊಸ ಪರಿಚ್ಛೇದ (೨೧ಎ)ವನ್ನು ಸೇರಿಸಲಾಯಿತು. ಈ ಹಕ್ಕಿನ ಉಲ್ಲಂಘನೆ ಶಿಕ್ಷಾರ್ಹ ಅಪರಾಧ.

ಈ ಹೊಸ ಬೆಳವಣಿಗೆಯು ದೇಶದೆಲ್ಲೆಡೆ ಈ ಚರ್ಚೆಯ ಹೊಸ ಅಲೆಯನ್ನೆಬ್ಬಿಸಿತು. ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೊಂದು ಹೊಸ ಆಯಾಮ ತಂದುಕೊಟ್ಟಿತ್ತು. ಈ ಬೇಡಿಕೆಗೆ ಸ್ಪಂದಿಸಿದ ಸರ್ಕಾರವು ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಸರ್ವಶಿಕ್ಷಣ ಅಭಿಯಾನ ಎಂಬ ವಿಶೇಷ ಯೋಜನೆಯನ್ನು ದೇಶಾದ್ಯಂತ ಜಾರಿಗೊಳಿಸಿತು.

ನಮ್ಮ ರಾಜ್ಯದಲ್ಲಿಯೂ ಸರ್ವ ಶಿಕ್ಷಣ ಅಭಿಯಾನ ಜಾರಿಯಲ್ಲಿದೆ. ಇದರಂತೆ ೨೦೧೦ಕ್ಕೆ ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಗುಣಾತ್ಮಕ ಶಿಕ್ಷಣ ನೀಡುವ ಗುರಿಯ ಜೊತೆ ಜೊತೆಗೆ ಲಿಂಗ ತಾರತಮ್ಯ, ಸಾಮಾಜಿಕ ತಾರತಮ್ಯ ಮತ್ತು ಪ್ರಾದೇಶಿಕ ತಾರತಮ್ಯವನ್ನು ತೊಡೆದುಹಾಕುವ ಗುರಿಯನ್ನು ಹೊಂದಲಾಗಿದೆ. ಈ ಗುರಿಯ ಈಡೇರಿಕೆಗಾಗಿ ಸರ್ವಶಿಕ್ಷಣ ಅಭಿಯಾನ ಪೂರ್ಣವಾಗಿ ಸಮುದಾಯವನ್ನು ಅವಲಂಬಿಸಿದೆ. ಆದ್ದರಿಂದಲೇ ಸಮುದಾಯದ ಭಾಗವಹಿಸುವಿಕೆ ಸರ್ವಶಿಕ್ಷಣ ಅಭಿಯಾನದ ಕೇಂದ್ರ ಬಿಂದು. ಯೋಜನೆ, ಅನುಷ್ಠಾನ, ಮೇಲುಸ್ತುವಾರಿ ಮತ್ತು ಮೌಲ್ಯಮಾಪನ ಕ್ರಿಯೆಗಳಲ್ಲಿ ಸಮುದಾಯ ಸಕ್ರಿಯವಾಗಿ ಭಾಗವಹಿಸಬೇಕೆಂಬುದು ಸರ್ವಶಿಕ್ಷಣ ಅಭಿಯಾನದ ಮೂಲ ಆಶಯ.

ಈ ಎಲ್ಲ ಕಾರಣಗಳನ್ನು ಮನಗಂಡ ರಾಜ್ಯ ಸರ್ಕಾರವು ರಾಜ್ಯದಲ್ಲಿ ಶಾಲಾ ಶಿಕ್ಷಣದ ಸ್ಥಿತಿ-ಗತಿಯ ಅಧ್ಯಯನಕ್ಕಾಗಿ ಶಿಕ್ಷಣ ಕಾರ್ಯ ಪಡೆಯೊಂದನ್ನು ೨೦೦೦ದಲ್ಲಿ ರಚಿಸಿತು. ಅಣು ವಿಜ್ಞಾನಿಯೊಬ್ಬರನ್ನು ಶಾಲಾಶಿಕ್ಷಣದ ಕಾರ್ಯಪಡೆಯ ಅಧ್ಯಕ್ಷರನ್ನಾಗಿಸುವ ಸರ್ಕಾರದ ಮೂರ್ಖತನದ ಬಗ್ಗೆ ನಮ್ಮ ವಿರೋಧವಿದ್ದಾಗ್ಯೂ, ಕೆಲವು ಶಿಫಾರಸ್ಸುಗಳು ಅರ್ಥಪೂರ್ಣವೆಂಬುದು ನಮ್ಮ ಅಭಿಪ್ರಾಯ. ಅಂತಹ ಒಂದು ಶಿಫಾರಸ್ಸು ರಾಜ್ಯದ ಎಲ್ಲಾ ಸರ್ಕಾರಿ ಕಿರಿಯ/ಹಿರಿಯ ಮತ್ತು ಪ್ರೌಢಶಾಲೆಗಳಲ್ಲಿ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ ರಚನೆಯನ್ನು ಕುರಿತಾದದ್ದು.

ಈ ಶಿಫಾರಸ್ಸಿನಂತೆ ಇಲಾಖೆಯ ಅಧಿಕಾರಿಗಳು, ನಾಡಿನ ಶಿಕ್ಷಣ ತಜ್ಞರು, ಶಿಕ್ಷಕರು ಮತ್ತು ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರದೊಂದಿಗೆ ಕೈಜೋಡಿಸಿ ಸರ್ಕಾರಿ ಆದೇಶದನ್ವಯ ರಾಜ್ಯದ ಎಲ್ಲಾ ಕಿರಿಯ/ಹಿರಿಯ ಮತ್ತು ಪ್ರೌಢಶಾಲೆಗಳಲ್ಲಿ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳನ್ನು ರಚಿಸಿದರು. ಈ ಪ್ರಕ್ರಿಯೆಯ ಪ್ರಜಾಸತ್ತಾತ್ಮಕ ಮೌಲ್ಯಗಳಿಗನುಗುಣವಾಗಿ ನಡೆಯಿತು. ಅದರಂತೆ ಸಾಮಾನ್ಯ ಪಾಲಕರ ಸಭೆಯಿಂದ ಆಯ್ಕೆಯಾದ ಒಂಭತ್ತು ಪಾಲಕ ಪ್ರತಿನಿಧಿಗಳು ತಮ್ಮಲ್ಲಿಯೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಂಡ ನಂತರ ಪದನಿಮಿತ್ತ ಹಾಗೂ ನಾಮನಿರ್ದೇಶನ ಸದಸ್ಯರನ್ನು ಸಮಿತಿಯಲ್ಲಿ ಸೇರಿಸಿಕೊಳ್ಳುವುದರ ಮೂಲಕ ಎಸ್.ಡಿ.ಎಂ.ಸಿ.ಯನ್ನು ರಚಿಸಿಕೊಳ್ಳುವುದು.

ಈ ರೀತಿ ಪ್ರಜಾಸತ್ತಾತ್ಮಕವಾಗಿ ರಚನೆಯಾದ ಎಸ್.ಡಿ.ಎಂ.ಸಿ.ಗಳು ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಕೆಲಸ ನಿರ್ವಹಿಸುತ್ತಿರುವ ಈ ಸಮಿತಿಗಳು ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಉತ್ತಮ ಕೆಲಸಗಳನ್ನು ಕೈಗೊಂಡಿವೆ. ಪರಿಣಾಮವಾಗಿ ಶಾಲಾ ಶಿಕ್ಷಣದ ಸಾರ್ವತ್ರೀಕರಣ ಪ್ರಕ್ರಿಯೆಯಲ್ಲಿ ಹೊಸ ಆಶಾಕಿರಣವೊಂದು ಮೂಡಿದೆ. ಸಮುದಾಯದ ಸಹಭಾಗಿತ್ವದಲ್ಲಿ ಶಾಲಾ ಶಿಕ್ಷಣದ ಸಾರ್ವತ್ರೀಕರಣ ಪ್ರಕ್ರಿಯೆಯನ್ನು ಸಾಕಾರಗೊಳಿಸಬಹುದೆಂಬ ಹೊಸ ಹುರುಪು ಸಾರ್ವತ್ರೀಕರಣ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿರುವ ಗೆಳೆಯರಲ್ಲಿ ಕಾಣಿಸತೊಡಗಿದೆ. ಈ ಮಧ್ಯೆ ಸಾರ್ವಜನಿಕ ಶಿಕ್ಷಣ ಇಲಾಖೆಯ ನೀತಿ ಯೋಜನಾ ಘಟಕವು ರಾಷ್ಟ್ರೀಯ ಕಾನೂನು ಶಾಲೆಯ ಮಗು ಮತ್ತು ಕಾನೂನು ಕೇಂದ್ರದ ಸಹಯೋಗದೊಂದಿಗೆ ನಡೆಸಿರುವ ಎಸ್.ಡಿ.ಎಂ.ಸಿ.ಯ ಮೌಲ್ಯ ಮಾಪನ ಅಧ್ಯಯನವು ಇದನ್ನು ಮತ್ತಷ್ಟು ಪುಷ್ಟೀಕರಿಸುತ್ತದೆ.

ಒಟ್ಟಾರೆ ಸಾರ್ವತ್ರೀಕರಣ ಪ್ರಕ್ರಿಯೆಯಲ್ಲಿ ಹೊಸ ಆಶಾಭಾವನೆಯೊಂದು ಮೂಡುತ್ತಿರುವ ಈ ಕಾಲಘಟ್ಟದಲ್ಲಿ ಸರ್ಕಾರದ ಇತ್ತೀಚಿನ ತೀರ್ಮಾನ ಇವೆಲ್ಲವನ್ನೂ ಕೊಚ್ಚಿಹೋಗುವಂತೆ ಮಾಡಿದೆ. ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಅಣಕಿಸುವಂತಿರುವ ಈ ತೀರ್ಮಾನ ಜನರ ಸಾರ್ವಭೌಮತ್ವವನ್ನು ಪ್ರಶ್ನಿಸುವಂತಿದೆ.

ದಿನಾಂಕ ೭-೮-೨೦೦೪ರ ಸರ್ಕಾರಿ ಪತ್ರದಲ್ಲಿ ಎಸ್.ಡಿ.ಎಂ.ಸಿ.ಗಳನ್ನು ರಚಿಸುವ ಅಧಿಕಾರವನ್ನು ಸ್ಥಳೀಯ ಶಾಸಕರಿಗೆ ನೀಡಲಾಗಿದೆ. ಅಂದರೆ ಪಾಲಕರ ಪಟ್ಟಿಯಿಂದ ಶಾಸಕರು ತೀರ್ಮಾನಿಸುವ ೯ ಜನರು ಪಾಲಕ ಪ್ರತಿನಿಧಿಗಳು ಸದಸ್ಯರಾಗಲಿದ್ದು ಅದರಲ್ಲಿ ಒಬ್ಬ ಅಧ್ಯಕ್ಷರನ್ನು ಶಾಸಕರೇ ನಾಮ ನಿರ್ದೇಶನ ಮಾಡುತ್ತಾರೆ. ಇಷ್ಟು ಸಾಲದೆಂಬಂತೆ ಸ್ವತಃ ಶಾಸಕರೇ ಪ್ರೌಢಶಾಲಾ ಎಸ್.ಡಿ.ಎಂ.ಸಿ.ಗಳ ಅಧ್ಯಕ್ಷರಾಗಿರುತ್ತಾರೆ.

ಇದು ಪ್ರಜಾಪ್ರಭುತ್ವ ವ್ಯವಸ್ಥೆಯ ವಿಪರ್ಯಾಸ. ಸರ್ವಾಧಿಕಾರ, ಭೂಮಾಲಿಕತ್ವ ಮತ್ತು ಪಾಳೆಗಾರಿಕೆ ಪದ್ಧತಿಯ ಮೂಲತತ್ವವಾಗಿರುವ ಈ ನೀತಿಯು ನಮಗೆ ಫ್ಯಾಸಿಸಂನ್ನು ಜ್ಞಾಪಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಂಬಿಕೆಯಿಟ್ಟಿರುವ ಯಾವ ನಾಗರಿಕನೂ ಇದನ್ನು ಒಪ್ಪಲಾರ.

ಸಾರ್ವತ್ರೀಕರಣದ ಮೂಲ ವಾರಸುದಾರರಾದ ಶಿಕ್ಷಕರು, ಸಮುದಾಯ ಮತ್ತು ಮಕ್ಕಳು ಒಟ್ಟಿಗೆ ಬರುತ್ತಿರುವ ಈ ಸಂದರ್ಭದಲ್ಲಿ ಸರ್ಕಾದ ಈ ಅವಿವೇಕದ ನಿರ್ಧಾರವು ಜನರ ಸಾರ್ವಭೌಮತ್ವವನ್ನು ಪ್ರಶ್ನಿಸುತ್ತದೆ. ಪಕ್ಷರಾಜಕೀಯವನ್ನು ಶಾಲೆಗಳಲ್ಲಿ ಹುಟ್ಟು ಹಾಕುವ ಮೂಲಕ ಸಾರ್ವತ್ರೀಕರಣ ಪ್ರಕ್ರಿಯೆಯನ್ನು ಮೊಟಕುಗೊಳಿಸಿ ಪ್ರಜಾಪ್ರಭುತ್ವಕ್ಕೆ ತಿಲಾಂಜಲಿಯಿಟ್ಟು ಸರ್ವಾಧಿಕಾರಿ ವ್ಯವಸ್ಥೆಗೆ ಬುನಾದಿ ಹಾಕಿ ತನ್ನದೇ ಆದ ಓಟ್ ಬ್ಯಾಂಕ್ ಒಂದನ್ನು ಸೃಷ್ಟಿಸಿಕೊಳ್ಳುವ ಹುನ್ನಾರ ಇದಾಗಿದೆ. ಇದನ್ನು ನಾಗರಿಕ ಸಮಾಜ ಒಕ್ಕೊರಲಿನಿಂದ ಖಂಡಿಸಬೇಕು. ಪ್ರಜಾಸತ್ತೆಯ ಉಳಿವಿಗಾಗಿ ಹೋರಾಡಬೇಕಾದ ಅನಿವಾರ್ಯತೆ ಬಂದಿದೆ. ಶಾಲೆಗಳನ್ನು ಪಕ್ಷರಾಜಕೀಯದಿಂದ ದೂರ ಉಳಿಸಬೇಕಾದ ಈ ಹೋರಾಟದಲ್ಲಿ ಎಲ್ಲ ಪ್ರಗತಿಪರ ಶಕ್ತಿಗಳ ಬೆಂಬಲ ನಿರ್ಣಾಯಕವಾಗಲಿದೆ. ಶಾಲೆಗಳು ಕಲಿಕೆಯ ಪ್ರಾಥಮಿಕ ಕೇಂದ್ರಗಳಾಗಿ ಉಳಿಯಬೇಕೆ ಹೊರತು ಯಾವುದೇ ರಾಜಕೀಯ ಪಕ್ಷಗಳ ಶಾಖಾ ಕಚೇರಿಗಳಾಗಬಾರದು.

**ಡಾ|| ನಿರಂಜನಾರಾಧ್ಯ ವಿ.ಪಿ.**
ಹಿರಿಯ ಸಂಶೋಧನಾಧಿಕಾರಿ, ಮಗು ಮತ್ತು ಕಾನೂನು ಕೇಂದ್ರ,
ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು - ೫೬೦ ೦೭೨

## ಅದು ಲಖನೌ ಅಲ್ಲ

ಶೋಕದಲ್ಲಿ ಕಣ್ಣೀರು ಹರಿಯುತ್ತಿತ್ತೇ ವಿನಃ ರಕ್ತವಲ್ಲ
ಇದು ಬೇರಾವುದೋ ಜಾಗೆಯಿರಬಹುದು ಲಖನೌ ಅಂತೂ ಅಲ್ಲ!

ಇಲ್ಲಿ ನಾಲಿಗೆಗಿಂತ ಮೊದಲು ಚೂರಿಗಳೇ ಮಾತಾಡುತ್ತವೆ
ಇದು ಮೀರ್ 'ಅನೀಸ್'–'ಆತಸ್'ರ ಸಂಭಾಷಣೆಯಂತೂ ಅಲ್ಲ.

ಎರಡು ಸಂಪ್ರದಾಯಗಳ ಗಾಯದಿಂದ ಹರಿಯುತ್ತಿದೆ ರಕ್ತ
ಸ್ವಲ್ಪ ಗಮನಿಸಿ ಇದು 'ಇಸ್ಲಾಮ'ದ ರಕ್ತವಂತೂ ಅಲ್ಲ.

ನಿಮಗೆ ಹೊಳೆವ ಸೂಕ್ತ ಹೆಸರು ಕೊಡಿ ಇದಕೆ
ನೆತ್ತರಿನೊಳಗೆ ನೀವು ಮಾಡಿದ್ದು 'ವಜೂ'* ಅಂತೂ ಅಲ್ಲ

ನಿಮ್ಮ ನಿಲುವಂಗಿಯ ಅಂಚಿನಿಂದ ನೀವು ಆರಿಸುತ್ತಿರುವುದು
ನಿಮ್ಮ ಕನಸುಗಳ ದೀಪವಲ್ಲದೆ ಬೇರೇನೂ ಅಲ್ಲ.

ನನ್ನದೆಂದು ತಿಳಿದು ನೀವು ಲೂಟಿ ಮಾಡಿದ ವಸ್ತು
ಓ ನೆರೆಯವರೆ ಅದು ನಿಮ್ಮ ಮರ್ಯಾದೆಯಲ್ಲದೆ ಬೇರೇನೂ ಅಲ್ಲ.

ಮೂಲ : ಕೈಫಿ ಆಜ್ಮಿ, ಕನ್ನಡಕ್ಕೆ : ವಿಭಾ

* [illegible] ಮಾಡುವ ಮೊದಲು ಮುಸಲ್ಮಾನ ಬಂಧುಗಳು ಕೈ-ಮುಖ ತೊಳೆದುಕೊಳ್ಳುವದು.

# ಉನ್ನತ ಶಿಕ್ಷಣದ ವಿಭಿನ್ನ ಸವಾಲುಗಳು

ಉನ್ನತ ಶಿಕ್ಷಣವು ಮುಖ್ಯ ಸವಾಲುಗಳನ್ನು ಎದುರಿಸುತ್ತಿದೆ. ಅದಕ್ಕೆ ಕಾರಣವಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶಿಕ್ಷಣವನ್ನು ಸಾಮಾಜಿಕ ಪ್ರಗತಿಗೆ ಪೂರಕವೆಂದು ಭಾವಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಂಬಿದ್ದವು. ಆದುದರಿಂದ ಶೀಘ್ರಗತಿಯಲ್ಲಿ ವಿಶ್ವವಿದ್ಯಾಲಯಗಳು, ಕಾಲೇಜುಗಳು ಬೆಳೆದವು. ಈಗ ಮುನ್ನೂರು ವಿಶ್ವವಿದ್ಯಾಲಯಗಳು, ಹದಿಮೂರು ಸಾವಿರ ಕಾಲೇಜುಗಳಲ್ಲಿ ಎಂಬತ್ತೆಂಟು ಲಕ್ಷ ಜನರು ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಇದರಲ್ಲಿ ಶೇಕಡ ೪೦ರಷ್ಟು ವಿದ್ಯಾರ್ಥಿಗಳು ಹಿಂದುಳಿದವರು ಮತ್ತು ಶೇಕಡ ೩೫ರಷ್ಟು ಮಹಿಳೆಯರು. ಹೀಗೆ ಅಗಾಧವಾಗಿ ಕಾಲೇಜುಗಳು ಬೆಳೆದಾಗ ಕಟ್ಟಡ, ಗ್ರಂಥಾಲಯ, ಸಂಶೋಧನೆ, ಅಧ್ಯಾಪಕರಿಗೆ ಸರಿಯಾದ ಸಂಬಳ, ನೌಕರರಿಗೆ ಭರವಸೆ ಎಲ್ಲಾ ಕೊರತೆಯಾಗಿ ಕಾಲೇಜು ಶಿಕ್ಷಣ ಸೊರಗಿತು.

ಉನ್ನತ ಶಿಕ್ಷಣಕ್ಕೆ ಇಷ್ಟೊಂದು ಬೇಡಿಕೆ ಬಂದಾಗ ಸರ್ಕಾರಕ್ಕೆ ಇದನ್ನು ನಿಭಾಯಿಸಲಾಗಲಿಲ್ಲ. ಸರ್ಕಾರ ಮೂಕವಾಗಿ ಪ್ರತಿಸ್ಪಂದಿಸದೇ ಕುಳಿತಾಗ ಸ್ವಯಂ ಸಂಸ್ಥೆಗಳು, ದಾನಿಗಳು, ಸೇವಾ ಮನೋಭಾವವುಳ್ಳವರು ತಮ್ಮ ತಮ್ಮ ಪರಿಸರದಲ್ಲಿ ಕಾಲೇಜುಗಳನ್ನು ಸ್ಥಾಪಿಸಿ ಸಮಾಜದ ಆಕಾಂಕ್ಷೆಗೆ ಸ್ಪಂದಿಸಿದರು. ಸರ್ಕಾರಕ್ಕೆ ಎಲ್ಲವನ್ನು ಭರಿಸುವ ಆರ್ಥಿಕ ಶಕ್ತಿಯಾಗಲಿ ಅಥವಾ ಮನೋಭಾವವಾಗಲಿ ಇಲ್ಲವೆಂದಲ್ಲ. ಹಾಗೆ ನೋಡಿದರೆ ಒಂದು ಸರ್ಕಾರ ಶಿಕ್ಷಣಕ್ಕೆ ಒತ್ತುಕೊಡದಿದ್ದರೆ ಅದು ಸಮಾಜದ ಚಿಂತನೆಯಿಂದ ದೂರ ಉಳಿದಿದೆ ಎಂದರ್ಥ. ಆದರೆ ಸರ್ಕಾರಕ್ಕೆ ಒಂದು ಜವಾಬ್ದಾರಿ ಇಲ್ಲವೇ? ಸಂವಿಧಾನದ ಪೀಠಿಕೆಯಲ್ಲಿ ಹೇಳಿರುವ ಸಾಮಾಜಿಕ ನ್ಯಾಯದ ಪರಿಕಲ್ಪನೆಗಳು ಏನಾದವು? ನಮ್ಮ ದೇಶದಲ್ಲಿ ೩೦೦ ವಿಶ್ವವಿದ್ಯಾನಿಲಯಗಳು, ೧೩,೧೫೦ ಕಾಲೇಜುಗಳು, ೮೮ಲಕ್ಷ ವಿದ್ಯಾರ್ಥಿಗಳು ಮತ್ತು ೪,೨೭,೦೦೦ ಅಧ್ಯಾಪಕರು ತಮ್ಮನ್ನು ಈ ಉನ್ನತ ಶಿಕ್ಷಣದ ಮಹಾಯಜ್ಞದಲ್ಲಿ ತೊಡಗಿಸಿಕೊಂಡಿದ್ದಾರೆ. ಒಂದು ಸಮೀಕ್ಷೆಯ ಪ್ರಕಾರ ಇದರಲ್ಲಿ ಖಾಸಗಿಯವರ ಪಾತ್ರವೇ ಸುಮಾರು ಶೇಕಡ ೬೦ರಷ್ಟು. ಕರ್ನಾಟಕದ ಅಂಕೆಸಂಖ್ಯೆಗಳನ್ನು ನೋಡಿದರೆ ೧೫೧ ಸರ್ಕಾರಿ ಕಾಲೇಜುಗಳು, ೩೦೦ ಅನುದಾನಿತ ಕಾಲೇಜುಗಳು ಮತ್ತು ೪೮೧ ಅನುದಾನರಹಿತ ಕಾಲೇಜುಗಳಿವೆ. ಒಟ್ಟು ೩,೪೯,೦೮೪ ವಿದ್ಯಾರ್ಥಿಗಳು ಮತ್ತು ೨,೭೧,೪೫೩ ವಿದ್ಯಾರ್ಥಿನಿಯರು ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಇವರಲ್ಲಿ ೫೪,೧೨೫ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಜಾತಿಗಳಿಗೆ ಸೇರಿದವರು. ಈ ಮಹಾಯಜ್ಞದಲ್ಲಿ ೧೫,೩೯೬ ಅಧ್ಯಾಪಕರು ಮತ್ತು ೧೧,೦೭೮ ಶಿಕ್ಷಕೇತರರು ಕೆಲಸ ಮಾಡುತ್ತಿದ್ದಾರೆ. ಈ ಉನ್ನತ ಶಿಕ್ಷಣಕ್ಕಾಗಿ ಸುಮಾರು ೨೯೯.೧೨ ಕೋಟಿ ರೂಪಾಯಿಗಳನ್ನು ಖರ್ಚುಮಾಡಿದರೆ ವಿದ್ಯಾರ್ಥಿಗಳ ಫೀಜಿನಿಂದ ೧೩.೬೫ ಕೋಟಿ ರೂಪಾಯಿಗಳು ಸರ್ಕಾರಕ್ಕೆ ಜಮಾ ಆಗುತ್ತವೆ.

ಸರ್ಕಾರವು ಇತ್ತೀಚಿನ ದಿನಗಳಲ್ಲಿ ಉನ್ನತ ಶಿಕ್ಷಣದ ಹೊಣೆಯಿಂದ ನುಣುಚಿಕೊಳ್ಳಲು ಪ್ರಯತ್ನಿಸುತ್ತಿದೆ. ಕೆಲವು ತಪ್ಪು ಗ್ರಹಿಕೆಗಳು ಇದಕ್ಕೆ ಕಾರಣವಾಗಿವೆ: ಅದರಿಂದ ಆರ್ಥಿಕ ಪ್ರಗತಿ ಆಗುವುದಿಲ್ಲವೆಂಬುದು ಉನ್ನತ ಶಿಕ್ಷಣದ ಮೇಲಿರುವ ಪ್ರಮುಖ ಆಪಾದನೆ. ಆದರೆ ಅನೇಕ ಮುಂದುವರೆದ ಮತ್ತು ಮುಂದುವರೆಯುತ್ತಿರುವ ರಾಷ್ಟ್ರಗಳ ಪ್ರಗತಿಯನ್ನು ಅವಲೋಕಿಸಿದರೆ ಶೇಕಡ ೨೦ರಷ್ಟು ಆರ್ಥಿಕ ಬೆಳವಣಿಗೆಗೆ ಉನ್ನತ ಶಿಕ್ಷಣ ಕಾರಣ ಎಂಬುದು ಸಾಬೀತಾಗಿದೆ. ಇದನ್ನು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಗಣನೆಗೆ ತೆಗೆದುಕೊಳ್ಳಬೇಕು. ಪ್ರಾಥಮಿಕ ಶಿಕ್ಷಣವು ತನ್ನ ಹೊಣೆ, ಉನ್ನತ ಶಿಕ್ಷಣವಲ್ಲ ಎಂದು ಸರ್ಕಾರ ಪದೇ ಪದೇ ಹೇಳುತ್ತಿದೆ. ಇದು ಶಿಕ್ಷಣದ ಬಗ್ಗೆ ಇರಬೇಕಾದ ಸಮಗ್ರ ಚಿಂತನೆ ಅಲ್ಲ. ಒಂದು ರಾಷ್ಟ್ರದ ಸಮುದಾಯಕ್ಕೆ ಪರಿಪಕ್ವ ಚಿಂತನೆ ಮೂಡಿರುವುದಕ್ಕೆ ಉನ್ನತ ಶಿಕ್ಷಣದ ಪಾಲು ಮಹತ್ವಪೂರ್ಣದ್ದಾಗಿರುತ್ತದೆ. ಪ್ರಾಥಮಿಕ ಶಿಕ್ಷಣವು ಒಂದು ಚಲನೆಯನ್ನು ಉಂಟುಮಾಡಬಹುದು, ಚಿಂತನೆಯನ್ನಲ್ಲ. ಈ ಬಡ ಭಾರತಕ್ಕೆ ಕೇವಲ ಪ್ರಾಥಮಿಕ ಶಿಕ್ಷಣವೇ ಸಾಕು ಎಂಬ ವಾದವು ನಮ್ಮ ಪ್ರಗತಿಗೆ ಮಾರಕವಾದುದು. ಕೇವಲ ಪ್ರಾಥಮಿಕ ಶಿಕ್ಷಣದಿಂದ ಆರ್ಥಿಕ ಪ್ರಗತಿ ಸಾಧ್ಯವಿಲ್ಲ ಎಂಬುದು ಅನೇಕ ರಾಷ್ಟ್ರಗಳ ಅನುಭವವಾಗಿದೆ. ಜಾಗತೀಕರಣದ ಈ ಸಂದರ್ಭದಲ್ಲಿ ಉನ್ನತ ಶಿಕ್ಷಣವು ಅನೇಕ ರೀತಿಯ ಸವಾಲುಗಳನ್ನು ಎದುರಿಸುತ್ತಿರುವಾಗ ಎಲ್ಲರಿಗೂ ಪ್ರಾಥಮಿಕ ಶಿಕ್ಷಣವನ್ನು ಒದಗಿಸಿದ ನಂತರ ಉನ್ನತ ಶಿಕ್ಷಣದ ಬಗ್ಗೆ ಚಿಂತಿಸೋಣ ಎಂಬ ಸರ್ಕಾರದ ನಿಲುವು ಸಾಧುವಲ್ಲ. ಅಲ್ಲದೆ, ಉನ್ನತ ಶಿಕ್ಷಣಕ್ಕೆ ಧನಸಹಾಯ ನಿಲ್ಲಿಸಿದರೆ ಆ ಹಣವು ಪ್ರಾಥಮಿಕ ಶಿಕ್ಷಣಕ್ಕೆ ವ್ಯಯವಾಗುತ್ತದೆ ಎಂಬುದು ಹುರುಳಿಲ್ಲದ್ದು.

ಉನ್ನತ ಶಿಕ್ಷಣವು ಅನಿವಾರ್ಯವೇ ಆದರೆ ಅದು ಖಾಸಗಿ ವಲಯಕ್ಕೆ ಹೋಗಲಿ. ಅದು ಸರ್ಕಾರದ ಆದ್ಯತೆಯಲ್ಲ ಎಂಬ ವಾದವೂ ಇದೆ. ಸರ್ಕಾರವು ತನ್ನ ಬಂಡವಾಳವನ್ನು ಹಿಂತೆಗೆಯಲು ಆರಂಭಿಸಿದ ಹಿನ್ನೆಲೆಯೇ ಇದು. ತಾನು ತೆರವು ಮಾಡಿದ ಸ್ಥಳವನ್ನು ಖಾಸಗಿಯವರು ತುಂಬಲಿ ಎಂಬುದು ಸರ್ಕಾರದ ಧೋರಣೆ. ಆದರೆ ಎಲ್ಲರಿಗೂ ತಿಳಿದಿರುವಂತೆ ಖಾಸಗಿ ವಲಯಕ್ಕೆ ಬೇಕಾಗಿರುವುದು ಲಾಭ, ಸ್ವಹಿತ ಮತ್ತು ತಕ್ಷಣದ ಉಪಯೋಗ.

ಸರ್ಕಾರವು ಇತ್ತೀಚಿನ ದಿನಗಳಲ್ಲಿ
ಉನ್ನತ ಶಿಕ್ಷಣದ ಹೊಣೆಯಿಂದ
ನುಣುಚಿಕೊಳ್ಳಲು ಪ್ರಯತ್ನಿಸುತ್ತಿದೆ.
ಕೆಲವು ತಪ್ಪು ಗ್ರಹಿಕೆಗಳು ಇದಕ್ಕೆ ಕಾರಣವಾಗಿವೆ :
ಅದರಿಂದ ಆರ್ಥಿಕ ಪ್ರಗತಿ ಆಗುವುದಿಲ್ಲವೆಂಬುದು
ಉನ್ನತ ಶಿಕ್ಷಣದ ಮೇಲಿರುವ ಪ್ರಮುಖ
ಆಪಾದನೆ. ಆದರೆ ಅನೇಕ ಮುಂದುವರೆದ
ಮತ್ತು ಮುಂದುವರೆಯುತ್ತಿರುವ
ರಾಷ್ಟ್ರಗಳ ಪ್ರಗತಿಯನ್ನು ಅವಲೋಕಿಸಿದರೆ
ಶೇಕಡ ೨೦ರಷ್ಟು ಆರ್ಥಿಕ ಬೆಳವಣಿಗೆಗೆ
ಉನ್ನತ ಶಿಕ್ಷಣ ಕಾರಣ ಎಂಬುದು ಸಾಬೀತಾಗಿದೆ.
ಇದನ್ನು ಕೇಂದ್ರ ಸರ್ಕಾರ ಮತ್ತು ರಾಜ್ಯ
ಸರ್ಕಾರಗಳು ಗಣನೆಗೆ ತೆಗೆದುಕೊಳ್ಳಬೇಕು.
ಪ್ರಾಥಮಿಕ ಶಿಕ್ಷಣವು ತನ್ನ ಹೊಣೆ, ಉನ್ನತ
ಶಿಕ್ಷಣವಲ್ಲ ಎಂದು ಸರ್ಕಾರ
ಪದೇ ಪದೇ ಹೇಳುತ್ತಿದೆ. ಇದು
ಶಿಕ್ಷಣದ ಬಗ್ಗೆ ಇರಬೇಕಾದ
ಸಮಗ್ರ ಚಿಂತನೆ ಅಲ್ಲ.

■

**ಡಾ|| ಜಯಪ್ರಕಾಶ ಮಾವಿನಕುಳಿ**

ಆದುದರಿಂದಲೇ ಇಂಥ ವಲಯಗಳಲ್ಲಿ ಶ್ರೇಷ್ಠತೆ ಮತ್ತು ನ್ಯಾಯಪರತೆ ಒಟ್ಟಿಗೆ ಹೋಗಲು ಸಾಧ್ಯವಿಲ್ಲ. ಸೀಮಿತ ಕ್ಷೇತ್ರಗಳಲ್ಲಿ ಮಾತ್ರ ಖಾಸಗಿ ವಲಯ ತನ್ನ ಶ್ರೇಷ್ಠತೆಯನ್ನು ಸಾಧಿಸಬಹುದೇ ವಿನಾ ಸಾರ್ವತ್ರಿಕ ಕ್ಷೇತ್ರಗಳಲ್ಲಿ ಅದರ ಶ್ರೇಷ್ಠತೆಯನ್ನು ಸಾಧಿಸಿದ ದಾಖಲೆಗಳು ಅಪರೂಪ. ಶಿಕ್ಷಣವನ್ನು ಖಾಸಗಿ ವಲಯಕ್ಕೆ ಕೊಟ್ಟ ಫಿಲಿಪ್ಪೈನ್ಸ್, ಲ್ಯಾಟಿನ್ ಅಮೆರಿಕಾದ ಮತ್ತು ಇತರ ದೇಶಗಳಲ್ಲಿ ಉನ್ನತ ಶಿಕ್ಷಣವನ್ನು ಖಾಸಗಿ ವಲಯದವರೇ ನೋಡಿಕೊಳ್ಳುತ್ತಿದ್ದಾರೆ. ಆದರೂ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಉನ್ನತವಾದುದೇನನ್ನೂ ಸಾಧಿಸಲಾಗಿಲ್ಲ. ಆದರೆ ಕೊರಿಯಾ ಮತ್ತು ಜಪಾನ್ ದೇಶಗಳಲ್ಲಿ ಖಾಸಗಿ ವಲಯದವರದೇ ಪ್ರಾಬಲ್ಯವಿದ್ದು ಉನ್ನತ ಶಿಕ್ಷಣದಲ್ಲಿ ಶ್ರೇಷ್ಠತೆಯನ್ನೇನೋ ಸಾಧಿಸಿದ್ದಾರೆ. ಯುರೋಪ್ ಮತ್ತು ಉತ್ತರ ಭಾರತದಲ್ಲಿ ಉನ್ನತ ಶಿಕ್ಷಣದಿಂದಾಗಿಯೇ ಉನ್ನತ ಪ್ರಗತಿ ಆಗಿರುವುದು ಸಮೀಕ್ಷೆಗಳಿಂದ ಸ್ಪಷ್ಟವಾಗಿದೆ.

ಕೆಲವರು ಖಾಸಗೀಕರಣವನ್ನು ಮೆಚ್ಚುತ್ತಾರೆ, ವ್ಯಾಪಾರೀಕರಣವನ್ನು ದ್ವೇಷಿಸುತ್ತಾರೆ. ವಾಸ್ತವದಲ್ಲಿ ಈ ಎರಡೂ 'ಕರಣ'ಗಳಲ್ಲಿ ವ್ಯತ್ಯಾಸವೇನೂ ಇಲ್ಲ. ಹೆಚ್ಚು ಬೇಗ ಹೆಚ್ಚು ಲಾಭ ಮಾಡುವುದು ಇವುಗಳ ಒಟ್ಟಾರೆಯ ಉದ್ದೇಶ, ಗುರಿ. ನಷ್ಟದ ಪ್ರಶ್ನೆಯೇ ಇಲ್ಲಿ ಉದ್ಭವವಾಗುವುದಿಲ್ಲ. ಹೀಗಾದಾಗ ಜ್ಞಾನ ಸಮಾಜದ ನಮ್ಮ ಮೂಲಭೂತ ಪರಿಕಲ್ಪನೆಯೇ ವ್ಯತ್ಯಯವಾಗುತ್ತದೆ. ಕೇವಲ ಮಾಹಿತಿ ತಂತ್ರಜ್ಞಾನದಿಂದಲೇ ಎಲ್ಲವನ್ನೂ ಸಾಧಿಸಿಬಿಡಬಹುದು ಎಂಬುದು ಅರ್ಥಹೀನ ಚಿಂತನೆ.

ಜಾಗತಿಕ ಸಮ್ಮೇಳನಗಳನ್ನು ಉದ್ಧರಿಸುವ ಭಾರತ ಸರ್ಕಾರ ಕೆಲವು ಮೂಲಭೂತ ಅಂಶಗಳ ಬಗ್ಗೆ ಚಕಾರವನ್ನು ಎತ್ತುವುದಿಲ್ಲ. ೧೯೯೮ರಲ್ಲಿ ಯುನೆಸ್ಕೋ ನಡೆಸಿದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಮತ್ತು ೨೦೦೦ದಲ್ಲಿ ವಿಶ್ವಬ್ಯಾಂಕ್ ಮತ್ತು ಯುನೆಸ್ಕೋದ ಪ್ರತಿನಿಧಿಗಳು ಭಾಗವಹಿಸಿದ ಟಾಸ್ಕ್‌ಫೋರ್ಸ್ – 'ಉನ್ನತ ಶಿಕ್ಷಣ ಮತ್ತು ಸಮಾಜ'ದ ಮೇಲೆ ತಯಾರಿಸಿದ ವರದಿಯಲ್ಲೂ ಉನ್ನತ ಶಿಕ್ಷಣ ಕಡೆಗಣಿಸುತ್ತಿರುವುದನ್ನು ತರಾಟೆಗೆ ತೆಗೆದುಕೊಂಡಿದೆ. ಇಷ್ಟೇ ಅಲ್ಲದೆ ವಿಶ್ವಬ್ಯಾಂಕ್ ತಯಾರಿಸಿದ ವಿಶೇಷ ವರದಿಯಲ್ಲಿಯೂ ಉನ್ನತ ಶಿಕ್ಷಣವನ್ನು ಕಡೆಗಣಿಸುತ್ತಿರುವುದಕ್ಕೆ ತನ್ನ ವಿಷಾದವನ್ನು ವ್ಯಕ್ತಪಡಿಸಿದೆ! ಆದರೆ ಈ ಯಾವುದೇ ವಿಷಯವನ್ನು ಗಂಭೀರವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪರಿಗಣಿಸದೇ ಇದ್ದುದರಿಂದ ಉನ್ನತ ಶಿಕ್ಷಣ ಕುರಿತ ಈ ಗೊಂದಲ ಮುಂದುವರೆಯುತ್ತಲೇ ಇದೆ.

ವೈದ್ಯಕೀಯ ಶಿಕ್ಷಣ ಮತ್ತು ನೀರಿನ ವಿಷಯಗಳಲ್ಲಿ ಒಂದು ನಿರ್ದಿಷ್ಟ ಹಾಗೂ ದೂರಗಾಮಿ ದೃಷ್ಟಿಯುಳ್ಳ ನೀತಿಯನ್ನು ರೂಪಿಸಲೇಬೇಕಾಗಿದೆ. ಇಲ್ಲದಿದ್ದರೆ ರಾಷ್ಟ್ರದ ಪ್ರಗತಿಗೆ ಧಕ್ಕೆಯುಂಟಾಗುವುದು ಖಂಡಿತ. ಸರ್ಕಾರಗಳು ಬದಲಾಗಬಹುದು, ಅಧಿಕಾರಿಗಳು ಬದಲಾಗಬಹುದು. ಆದರೆ ನೀತಿ ? ಹಾಗೆ ನೋಡಿದರೆ ನಮ್ಮ ದೇಶದಲ್ಲಿ ಉನ್ನತ ಶಿಕ್ಷಣದ ಬಗ್ಗೆ ಒಂದು ನಿರ್ದಿಷ್ಟ ನೀತಿಯೆಂಬುದೇ ಇಲ್ಲ. ನಮ್ಮ ದೇಶದ ೧೭ರಿಂದ ೨೩ ವಯಸ್ಸಿನ ಯುವಕರಲ್ಲಿ ಕೇವಲ ಶೇಕಡ ೮ರಷ್ಟು ಯುವಕರು ಮಾತ್ರ ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಈ ಬಗ್ಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗವು ಏನು ಮಾಡುತ್ತಿದೆ ? ಮೂಲಭೂತ ಕರ್ತವ್ಯವನ್ನು ನಿಭಾಯಿಸುವಲ್ಲಿ ಉನ್ನತ ಶಿಕ್ಷಣವನ್ನು ಕಾಯ್ದುಕೊಳ್ಳಬೇಕಾದ ಯು.ಜಿ.ಸಿ. ಸಂಪೂರ್ಣವಾಗಿ ವಿಫಲವಾಗಿದೆ.

ಈಗ ಕೊಡುತ್ತಿರುವ ಶಿಕ್ಷಣದ ಬದಲು – ವಾಣಿಜ್ಯ, ಕಲೆ ಮತ್ತು ವಿಜ್ಞಾನ ಮತ್ತು ಕುಶಲತೆಯನ್ನು ಹೇಳಿಕೊಡುವ ಶಿಕ್ಷಣ ಬೇಕು ಎಂದು ತೀರ್ಮಾನಿಸಲಾಯಿತು. ಈಗ ಪಾರಂಪಾರಿಕವಾಗಿ ನೀಡುತ್ತಿರುವ ಸಾಮಾನ್ಯ ಉನ್ನತ ಶಿಕ್ಷಣವು ತುಸು ಜ್ಞಾನವನ್ನು ಕೊಟ್ಟೀತು, ನಿಜ. ಆದುದರಿಂದ ನಿತ್ಯಬದುಕಿಗೆ ಅಗತ್ಯವಾದ ಕುಶಲತೆಗೂ ಒತ್ತು ಬೇಕೆಂದು ೧೯೯೦ರಲ್ಲಿ ಯು.ಜಿ.ಸಿ.ಯು ಉದ್ಯೋಗ ಕೇಂದ್ರಿತ ವಿಷಯಗಳಿಗೆ ಪ್ರೋತ್ಸಾಹ ಕೊಡಲು ನಿರ್ಧರಿಸಿ, ಕೆಲವು ವಿಷಯಗಳನ್ನು ಆಯ್ದು ಅನೇಕ ಕಾಲೇಜುಗಳಿಗೆ ಆದೇಶ ನೀಡಿತು. ಅದು ಅಷ್ಟು ಆಕರ್ಷಣೀಯವೇ ಆಗಿದ್ದರೆ ನೌಕರಿಗಾಗಿ

## ಕಾರ್ಯಕಾರಣ



ಇದ್ದ ಹಾಗೇ ಇದ್ದಕ್ಕಿದ್ದಂತೆ
ಮನೆ, ಮಡದಿ, ಮಕ್ಕಳನ್ನೆಲ್ಲ ತೊರೆದು
ರಾತ್ರೋ ರಾತ್ರಿ ಎದ್ದು ಹೋಗಿಬಿಡೋಣವೆಂದರೆ;

ನರೆತ ಕೂದಲಿಗೆ ಹಚ್ಚುವ ಬಣ್ಣ
ನಿತ್ರಾಣದಲ್ಲೂ ರೋಮಾಂಚನವೆಬ್ಬಿಸುವ ಮಾತ್ರೆ

ಇನ್ನೇನು ಮುಗಿದೇ ಹೋಯಿತೆನ್ನುವಾಗಲೂ ಇರುವ
ಖಾಸಗಿ ನರ್ಸಿಂಗ್ ಹೋಮಿನ ದುಬಾರಿ ಕೊಠಡಿ
ಎದ್ದ ಕಾಲುಗಳನ್ನಿಲ್ಲಿಗೇ ಅಂಟಿಸಿಬಿಡುತ್ತವೆ.

ಕುಣಿಸುವ ಈ ಮಾಯೆಯ ಮೀರಿ
ನೆಲದ ಮರೆಯ ನಿಧಾನವನ್ನಷ್ಟು ಸರಿಸಬೇಕೆಂದರೆ
ನೃತ್ಯಾಂಗನೆಯರಿಗೇ ಚಳಿ ಹುಟ್ಟಿಸುವ
ಎಂವಿಎಫ್ ಚಾನೆಲ್ಲಿನ ಹುಡುಗಿಯರು
ಮತ್ತದೇ ಮರುಳ ಹೊಯಿಗೆಗೇ ಎಳೆದುಬಿಡುತ್ತಾರೆ.

ಇದ್ದಲ್ಲೆ ಇರಲೂ ಆಗದೆ
ಹೋಗಲೂ ಆಗದ ದುರವಸ್ಥೆಯಲ್ಲಿ
ಮಲಗಿದ್ದಲ್ಲೇ ನರಳುವ ಆ ಕುಂತಿಯನ್ನೆಂದೂ ತಣಿಸದೆ
ಮುಟ್ಟಿದರೇ ಮುಲುಗುವ ಮಾದ್ರಿಯ ತೆಕ್ಕೆಯಲ್ಲೇ
ಮರಗಟ್ಟಿದ ಪಾಂಡು ಏಕೋ ನೆನಪಾಗುತ್ತಾನೆ....

ಬುದ್ಧ, ಅಲ್ಲಮರನ್ನೂ ತನ್ನೊಟ್ಟಿಗೆ ಕರೆತರುತ್ತಾನೆ-
ಕನ್ನಡಿಯಲ್ಲಿ ಕಂಡಿದ್ದ ನನ್ನದೇ ರೂಪಿನ ವ್ಯಕ್ತಿ
ಗಾಂಧಿ, ಬಸವ, ದಾಸರೆಲ್ಲರ ಒಡನಾಡಿ
ಇದ್ದಕ್ಕಿದ್ದಂತೆ ಹೊರಬಂದು ಬರಿದೇ ಮುಗುಳ್ನಗುತ್ತಾನೆ
ಎತ್ತಲೋ ಹೊರಟವನಂತೆ ಕೈ ಬೀಸುತ್ತಾನೆ.

ಮಾರನೇ ಬೆಳಿಗ್ಗೆಯಿಂದಲೇ ನಿತ್ಯದ ಶೇವಿಂಗಿಗಾಗಿ
ಕನ್ನಡಿಯ ಮುಂದೆ ನಿಂತರೆ ಮುಖ ಕಾಣುತ್ತಲೇ ಇಲ್ಲ!

ಡಿ.ಎಸ್. ರಾಮಸ್ವಾಮಿ,
ಹಿರಿಯ ಸಹಾಯಕ, ಭಾರತೀಯ ಜೀವವಿಮಾ ನಿಗಮ, ಅರಸೀಕೆರೆ - ೫೭೩ ೧೦೩

ಹಾತೊರೆಯುವ ಯುವಜನರು ಕಾಲೇಜುಗಳ ಮುಂದೆ ಸಾಲಾಗಿ ನಿಲ್ಲಬೇಕು. ವಿಪರ್ಯಾಸವೆಂದರೆ ಅನೇಕ ಕಡೆ ಅದನ್ನು ಪೂರ್ತಿಯಾಗಿ ನಿಲ್ಲಿಸಲಾಗಿದೆ.

ಹೊಸದಾಗಿ ಆನರ್ಸ್ ಮಾಡಬೇಕೆಂದು (ನಾಲ್ಕು ವರ್ಷವಿದ್ದು ಮತ್ತು ಈಗ ಕೈಬಿಟ್ಟದ್ದು) ಇನ್ನೊಮ್ಮೆ ೧೯೯೫ರಲ್ಲಿ ಯು.ಜಿ.ಸಿ. ಕಾರ್ಯಾರಂಭ ಮಾಡಿತು. ಆದರೆ ವಿಶ್ವವಿದ್ಯಾಲಯಗಳಿಂದ ಇದಕ್ಕೆ ಯಾವ ರೀತಿಯ ಪ್ರತಿಕ್ರಿಯೆ ದೊರೆಯದೆ ಅದು ಮೇಲೇಳಲೇ ಇಲ್ಲ.

ಒಪ್ಪಂದದ ಮೇಲೆ ಶಿಕ್ಷಕರನ್ನು ನೇಮಕಾತಿ ಮಾಡುವ ಇನ್ನೊಂದು ಹೊಸ ನೀತಿಯೊಂದಿಗೆ ಯು.ಜಿ.ಸಿ. ಈಗ ಮುಂದಾಗಿದೆ. ಯಾಕೆಂದರೆ ಯಾವುದೇ ಶಿಕ್ಷಣದ ಕ್ರಮದಲ್ಲಿ ಪರಿಣಾಮಕಾರಿ ಆವಿಷ್ಕಾರ ಮಾಡಬೇಕಾದರೆ ಮತ್ತು ಅದು ಪರಿಣಾಮಕಾರಿ ಫಲಿತಾಂಶ ನೀಡಬೇಕಾದರೆ ಶಿಕ್ಷಕರು ಮೊದಲು ಅದಕ್ಕೆ ಉತ್ಸಾಹದ ಪ್ರತಿಕ್ರಿಯೆ ತೋರಿಸಬೇಕು. ಶಿಕ್ಷಕರಿಗೆ ಉತ್ಸಾಹ ಇರಬೇಕು. ''ಶಿಕ್ಷಕರು ಒಮ್ಮೆ ನೇಮಕಾತಿ ಆದಕೂಡಲೇ ತಮ್ಮ ಜೀವನೋತ್ಸಾಹವನ್ನು ಕಳೆದುಕೊಂಡುಬಿಡುತ್ತಾರೆ. ಯಾಕೆಂದರೆ ಅವರನ್ನು ಕೆಲಸದಿಂದ ತೆಗೆದುಹಾಕುವಂತಿಲ್ಲ'' ಎಂಬುದು ಯು.ಜಿ.ಸಿ.ಯ ತರ್ಕ. ಈ ಅಭಿಪ್ರಾಯವನ್ನು ಸಂಪೂರ್ಣವಾಗಿ ತಳ್ಳಿಹಾಕಲಾಗದು. ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಸದ ಕೆಲಸದಲ್ಲಾಗಲಿ, ವಿಚಾರಗೋಷ್ಠಿ, ಕಾರ್ಯಾಗಾರ ಏರ್ಪಡಿಸುವುದಾಗಲಿ, ಸಂಶೋಧನೆ ಮಾಡುವುದಾಗಲಿ, ರಾಷ್ಟ್ರೀಯ ಅಧಿವೇಶನಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣ ಪ್ರಬಂಧವನ್ನು ಮಂಡಿಸುವುದಾಗಲಿ ಯಾವುದೇ ಚಟುವಟಿಕೆಗಳಲ್ಲಿ ಭಾಗವಹಿಸದೆ ತಮ್ಮ ಪೂರ್ಣ ಸೇವಾವಧಿಯನ್ನು ಮುಗಿಸುವ ಅಧ್ಯಾಪಕರ ಸಂಖ್ಯೆಗೇನೂ ಕಡಿಮೆ ಇಲ್ಲ. ೧೯೮೬ರ ಶಿಕ್ಷಣ ಪತ್ರದಲ್ಲಿ ರಾಜೀವ ಗಾಂಧಿಯವರು 'ಉನ್ನತ ಶಿಕ್ಷಣ ಪ್ರತಿಭಾವಂತರನ್ನು ಆಕರ್ಷಿಸಬೇಕು' ಎನ್ನುವ ಧ್ಯೇಯವನ್ನು ಪ್ರತಿಪಾದಿಸಿದರು. ಆದರೆ ಅದು ಎಷ್ಟರಮಟ್ಟಿಗೆ ಫಲಪ್ರದವಾಯಿತು ?

ಯು.ಜಿ.ಸಿ. ಇದನ್ನು ಹಿಡಿದುಕೊಂಡು, ಕಾಲೇಜು ಶಿಕ್ಷಕರನ್ನು ಕ್ರಿಯಾಶೀಲಗೊಳಿಸಬೇಕೆಂದು ಪ್ರತಿಯೊಬ್ಬರೂ ಹಿಂದಿನದಕ್ಕಿಂತ ಹೆಚ್ಚು ಕಾಲಾವಧಿ ಎಂದರೆ, ಸಂಪೂರ್ಣ ೧೬ ಘಂಟೆಗಳು ಬೋಧಿಸಬೇಕೆಂದು ಮತ್ತು ವಾರಕ್ಕೆ ೪೦ ಘಂಟೆಗಳು ಕಾಲೇಜುಗಳಲ್ಲಿಯೇ ಇರಬೇಕೆಂದು ೧೯೯೬ರಲ್ಲಿ ವೇತನ ಒಪ್ಪಂದವನ್ನು ಮಾಡಿಕೊಳ್ಳುವಾಗ ಷರತ್ತು ಹಾಕಿತು. ಇಷ್ಟೇ ಅಲ್ಲದೆ, ಕಾಲೇಜಿನ ನಾಯಕತ್ವ ವಹಿಸುವ ಪ್ರಿನ್ಸಿಪಾಲರು ಡಾಕ್ಟರೇಟ್ ಪಡೆದಿರಲೇಬೇಕೆಂದೂ ಆದೇಶ ನೀಡಿತು. ಆದರೆ ಎಲ್ಲವನ್ನು ಕಾನೂನಿನಿಂದಲೇ ಸಾಧಿಸಲಾಗದು. ಶಿಕ್ಷಕರು ಸ್ವಯಂಸ್ಫೂರ್ತಿಯಿಂದ ಸ್ಫುರಿಸದಿದ್ದರೆ ಎಲ್ಲ ಆದೇಶಗಳೂ ನಿಷ್ಫಲವಾಗುತ್ತವೆ. ಕಾಲೇಜಿನ ನಾಯಕತ್ವ ವಹಿಸಬೇಕಾದ ಪ್ರಿನ್ಸಿಪಾಲರು ಭ್ರಷ್ಟರು, ಅನಾಸಕ್ತರು, ಸುಳ್ಳುಗಾರರು, ಅದಕ್ಷರೂ ಆದರೆ ಯಾವ ಶಿಕ್ಷಣ ಕ್ರಮ ವಿದ್ಯಾರ್ಥಿಗಳ ಅಂತಃಶಕ್ತಿಯನ್ನು ಬೆಳಗೀತು ?

ಸ್ಥಾವರವಾಗಿರುವ ಶಿಕ್ಷಕರನ್ನು ಜಂಗಮರನ್ನಾಗಿ ಮಾಡಲು ಯು.ಜಿ.ಸಿ. ಇನ್ನೊಂದು ಪ್ರಯೋಗಕ್ಕೆ ಈಗ ಕೈಹಾಕಿದೆ. ಶಿಕ್ಷಕರ ಜಡತ್ವವನ್ನು ಹೋಗಲಾಡಿಸಲು, ಅವರನ್ನು ನಿರಂತರ ಕ್ರಿಯಾಶೀಲರನ್ನಾಗಿಸಲು 'ಒಪ್ಪಂದದ ನೇಮಕಾತಿ' ಮಾಡಬೇಕಂತೆ ಮತ್ತು ಈ ಮೂಲಕ ಅವರು ಸದಾ ಸ್ಪರ್ಧೆಯಲ್ಲಿರುವಂತೆ ನೋಡಿಕೊಳ್ಳಬೇಕಂತೆ. ಇದು ಹಾಗಿರಲಿ, ಶಿಕ್ಷಕರ ಆದ್ಯಕರ್ತವ್ಯಗಳಾಗಿರುವ 'ಬೋಧನೆ ಮತ್ತು ಸಂಶೋಧನೆ'ಗಳಲ್ಲಿ ಅವರು ನಿರಂತರವಾಗಿ ಸ್ವೋಪಜ್ಞತೆಯಿಂದ ಕೆಲಸ ಮಾಡಬೇಕಾಗುತ್ತದೆ. ಉತ್ತಮ ಬೋಧನೆಗೆ ಬೇಕಾದ ಶೈಕ್ಷಣಿಕ ಬಂಡವಾಳವನ್ನು ಸದಾ ಅಧ್ಯಯನದ ಮೂಲಕ, ಸಂಶೋಧನೆಗಳ ಮೂಲಕ ಅವರು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಶಿಕ್ಷಕ ಈ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಿದ್ದಾನೋ ಇಲ್ಲವೋ ಎಂಬುದನ್ನು ಮೌಲ್ಯಮಾಪನ ಮಾಡಲು ಅನೇಕ ರೀತಿಯ ಸವಾಲುಗಳನ್ನು ಆತ ಎದುರಿಸಬೇಕಾಗುತ್ತದೆ. ಆತನ ಪ್ರಕಟಿತ ಸಂಶೋಧನಾ ಪ್ರಬಂಧ, ಕಾರ್ಯಾಗಾರದ ಆತನ ಭಾಷಣಗಳು ಇತ್ಯಾದಿ ಇಲ್ಲಿ ಮುಖ್ಯವಾಗುತ್ತವೆ. ಈ ಒಪ್ಪಂದದ ನೇಮಕಾತಿಯ ಪ್ರಮುಖ ಆಶಯವೆಂದರೆ ಅವರು ಕೆಲಸವನ್ನು ಉಳಿಸಿಕೊಳ್ಳಲು, ಮುಂದುವರಿಸಿಕೊಂಡು ಹೋಗಲು, ಬಡ್ತಿ ಪಡೆಯಲು ತಮ್ಮ ಬೌದ್ಧಿಕ ಸಂಪತ್ತನ್ನು ಉದ್ದೀಪನಗೊಳಿಸಿಕೊಳ್ಳುವುದಕ್ಕಾಗಿ ನಿರಂತರವಾಗಿ ಶ್ರಮಿಸಬೇಕಾಗುತ್ತದೆ. ಈ ಆಶಯವೇನೋ ತುಂಬಾ ಒಳ್ಳೆಯದೇ. ಆದರೆ ಈಗಾಗಲೇ ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಜಾರಿಯಲ್ಲಿರುವ ಇಂಥಾ 'ನೇಮಿಸು-ತೆಗೆದುಹಾಕು' ಪದ್ಧತಿಯನ್ನು ನಮ್ಮ ದೇಶಕ್ಕೆ ಅಳವಡಿಸುವಾಗ ಎರಡು ಪ್ರಮುಖ ಅಂಶಗಳನ್ನು ಗಮನಿಸಬೇಕು. ಶಿಕ್ಷಣ ಸಂಸ್ಥೆಗಳಲ್ಲಿ ಸ್ವಾತಂತ್ರ್ಯ, ತಕ್ಕ ಸಂಪನ್ಮೂಲಗಳು, ಮೇಲ್ದರ್ಜೆಯ ಗ್ರಂಥಾಲಯ ಇಂಥ – ಒಟ್ಟಾರೆಯ ಶೈಕ್ಷಣಿಕ ವಾತಾವರಣವಿದೆಯೇ ? ಇನ್ನೊಂದು, ಬಡ್ತಿಯ ಆಕರ್ಷಣೆ. ಈ ಬಡ್ತಿಯ ಸೌಲಭ್ಯ ತುಂಬಾ ಮಹತ್ವದ್ದಾಗದಿದ್ದರೆ ಅದು ಅಯಸ್ಕಾಂತದಂತೆ ಎಳೆಯುವುದಿಲ್ಲ. ನಮ್ಮ ದೇಶದ ಇಡೀ ನೌಕರಶಾಹಿ ವ್ಯವಸ್ಥೆಯೇ ಹೀಗೆ ಕಾಲಬಡ್ತಿಯಲ್ಲಿದೆ. ವಯಸ್ಸು, ಸೇವಾವಧಿ, ಹಿರಿತನದ ಜಂಜಾಟದಲ್ಲಿ ಸಂಪೂರ್ಣವಾಗಿ ನಿಷ್ಕ್ರಿಯವಾಗಿದೆ. ಇದು ಶಿಕ್ಷಣ ಲೋಕಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಇದಕ್ಕೊಂದು ಸಮಗ್ರ ಚಿಂತನೆಯೇ ಬೇಕಾಗುತ್ತದೆ. ಎಲ್ಲವೂ ಜಡವಾಗಿರಲಿ, ಶಿಕ್ಷಕರು ಮಾತ್ರ ಜಂಗಮರಾಗಿರಲಿ ಎಂಬುದು ಸರಿಯಾದ ಮಾತಲ್ಲ. ಉಳಿದ ಕೆಲಸಗಳಿಗೂ ಶಿಕ್ಷಣ ಲೋಕದ ಕೆಲಸಗಳಿಗೂ ಇರುವ ಪ್ರಮುಖ ವ್ಯತ್ಯಾಸವನ್ನು ಮರೆಯಬಾರದು. ಶಿಕ್ಷಕರು ಉಳಿದವರಂತೆ ಯಂತ್ರಗಳೊಡನೆ ವ್ಯವಹರಿಸುವವರಲ್ಲ. ಅವರು ಜೀವಂತ ಕಕುಲಾತಿ ಇರುವ ವಿದ್ಯಾರ್ಥಿಗಳ ಮನಸ್ಸಿನ ಜೊತೆ ಸಂಭಾಷಿಸುತ್ತಿರುತ್ತಾರೆ. ಆದುದರಿಂದ ಕಂಪ್ಯೂಟರ್ ರೀತಿಯ ಫಲಿತಾಂಶವನ್ನು ನಾವು ನಿರೀಕ್ಷಿಸುವಂತಿಲ್ಲ. ಈ ಮೂಲಭೂತ ಅಂಶ ಅರ್ಥವಾಗದಿದ್ದರೆ ಈ 'ನೇಮಕಾತಿ ಒಪ್ಪಂದ'ವೂ ಶಿಕ್ಷಕರನ್ನು ಯಾಂತ್ರಿಕ ಮನುಷ್ಯರನ್ನಾಗಿ ಮಾಡಿಬಿಡುವ ಅಪಾಯವಿದೆ.

ಉನ್ನತ ಶಿಕ್ಷಣಕ್ಕೆ ರಕ್ಷಾಕವಚವಾಗಬೇಕಾಗಿದ್ದ ವಿಶ್ವವಿದ್ಯಾಲಯ ಧನಸಹಾಯ ಆಯೋಗ ತನ್ನ ಹಲ್ಲುಗಳನ್ನು ನಿಧಾನವಾಗಿ ಕಳೆದುಕೊಂಡುಬಿಡುತ್ತಿದೆ. ಇದರ ಜೊತೆಗೆ ಅನೇಕ ರೀತಿಯ ಸುಮಾರು ಹತ್ತು-ಹನ್ನೆರಡು ಬೇರೆ ಬೇರೆ ಕೋರ್ಸುಗಳ ಮಂಡಳಿಗಳನ್ನು ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿ (AICTE), ಭಾರತೀಯ ವೈದ್ಯಕೀಯ ಮಂಡಳಿ (MCI), ಭಾರತೀಯ ನರ್ಸಿಂಗ್ ಮಂಡಳಿ (INC) ಇತರೆ – ರಚಿಸಿ ಯು.ಜಿ.ಸಿ.ಯನ್ನು ಸಂಪೂರ್ಣ ಶಕ್ತಿಹೀನವನ್ನಾಗಿಸಿದೆ. ಹೀಗಾಗಿ ಯು.ಜಿ.ಸಿ.ಯ ಕೆಲಸ ಕಲೆ, ವಿಜ್ಞಾನ, ವಾಣಿಜ್ಯ ಕಾಲೇಜುಗಳನ್ನು ನೋಡಿಕೊಳ್ಳುತ್ತಿರುವ ವಿಶ್ವವಿದ್ಯಾಲಯಗಳ ಮತ್ತು ಆಯಾ ಸ್ನಾತಕೋತ್ತರ ಕೇಂದ್ರಗಳನ್ನು ಪರಿಶೀಲಿಸುವುದು, ಸಹಾಯ ಮಾಡುವುದಕ್ಕೆ ಮಾತ್ರ ಸೀಮಿತವಾಗಿದೆ. ಇಲ್ಲಿರುವ ಅನೇಕ ಮಂಡಳಿಗಳೂ ಸಹ ಒಂದೇ ಸಚಿವಾಲಯದ ಅಧಿಕಾರದಡಿಯಲ್ಲಿ ಕೆಲಸ ಮಾಡುತ್ತಿಲ್ಲ. ಭಾರತೀಯ ವೈದ್ಯಕೀಯ ಮಂಡಳಿ ಆರೋಗ್ಯ ಸಚಿವರ ವ್ಯಾಪ್ತಿಯಲ್ಲಿ ಇದ್ದರೆ, ಭಾರತೀಯ ಕಾನೂನು ಮಂಡಳಿ ಕಾನೂನು ಸಚಿವಾಲಯದ ವ್ಯಾಪ್ತಿಯಲ್ಲಿದೆ. ಯು.ಜಿ.ಸಿ.ಯು ಮಾನವ ಸಂಪನ್ಮೂಲ ಸಚಿವಾಲಯದ ಅಧೀನದಲ್ಲಿದೆ. ಇದರ ಪರಿಣಾಮವಾಗಿ ತಂತಮ್ಮಲ್ಲಿ ಮಂಡಳಿಗಳೊಂದಿಗೆ ಸಾಮರಸ್ಯವಿಲ್ಲ. ಇದನ್ನು ಮನಗಂಡು ೧೯೮೬ರ ಶಿಕ್ಷಣದ ವರದಿಯಲ್ಲಿ ಸೂಚಿಸಿದ್ದಂತೆ ಈ ಎಲ್ಲಾ ಮಂಡಳಿಗಳಿಗೆ ಅತ್ಯುನ್ನತ ಕೇಂದ್ರ ಮಂಡಳಿಯನ್ನು ಮಾನವ ಸಂಪನ್ಮೂಲ ಖಾತೆಯಡಿ ಆರಂಭಿಸಬೇಕು ಎಂಬ ತೀರ್ಮಾನ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ.

ಕೇಂದ್ರ ಮಾನವ ಸಂಪನ್ಮೂಲ ಖಾತೆಯ ಮತ್ತೊಂದು ಚಿಂತನೆ 'ಸ್ವಯಂ ಸಂಪನ್ಮೂಲ ವಿಶ್ವವಿದ್ಯಾಲಯ'ಗಳನ್ನು ಸ್ಥಾಪಿಸಲು ಅನುಮತಿ ನೀಡುವುದು. ಕೇಂದ್ರ ಸರ್ಕಾರಕ್ಕೆ ಯು.ಜಿ.ಸಿ.ಗೆ ಧನಸಹಾಯ ಮಾಡುವ ಶಕ್ತಿ ಇಲ್ಲ. ಆದುದರಿಂದ ಹೊಸ

ಸುದ್ದಿಚಿತ್ರ



ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಹಮ್ಮಿಕೊಂಡಿದ್ದ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ನವಕರ್ನಾಟಕದ ಪ್ರಕಟಣೆಯಾದ ಶ್ರೀ ಕೋ. ಚೆ. ಅವರ 'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ-ಸಾಮಾಜಿಕ ನಿಷ್ಠೆ' ಕೃತಿಯನ್ನು ಡಾ|| ಜಿ. ಎಸ್. ಶಿವರುದ್ರಪ್ಪನವರು ಅನಾವರಣಗೊಳಿಸಿದರು.

ಚಿತ್ರದಲ್ಲಿ ಶ್ರೀ ಕೋ. ಚೆನ್ನಬಸಪ್ಪ, ಡಾ|| ಜಿ. ಎಸ್. ಶಿವರುದ್ರಪ್ಪ, ಶ್ರೀ ಚೆನ್ನವೀರ ಕಣವಿ, ಕುಲಪತಿ ಪ್ರೊ|| ಖಾಜಾ ಪೀರ್, ಡಾ|| ಎ. ಮುರಿಗೆಪ್ಪ, ಎನ್. ಸಿಂಗ್ ಮತ್ತು ಶ್ರೀಮತಿ ವೀಣಾ ಶಾಂತೇಶ್ವರ ಮುಂತಾದವರಿದ್ದಾರೆ.

ವಿಶ್ವವಿದ್ಯಾಲಯಗಳು ತಂತಮ್ಮ ಸಂಪತ್ತಿನ ಮೇಲೆ ತಾವು ನಿಲ್ಲಬೇಕು ಎಂಬ ತೀರ್ಮಾನಕ್ಕೆ ಬರಲಾಗಿದೆ. ಅಂಥವುಗಳನ್ನು ಪ್ರೋತ್ಸಾಹಿಸಲು ೧೯೪ರಲ್ಲಿ ಮಾನವ ಸಂಪನ್ಮೂಲ ಖಾತೆ ಒಂದು ಮಸೂದೆಯನ್ನು ಸಿದ್ಧಪಡಿಸಿ ರಾಜ್ಯಸಭೆಯಲ್ಲಿ ಒಪ್ಪಿಗೆ ಪಡೆಯಿತು. ಆದರೆ ಲೋಕಸಭೆ ಅದನ್ನು ತಿರಸ್ಕರಿಸಿತು. ಇಂಥ ವಿಶ್ವವಿದ್ಯಾಲಯಗಳಿಗೆ ಹಣವೆಲ್ಲಿಂದ ಬರುತ್ತದೆ? ಈ ಎಲ್ಲಾ ವಹಿವಾಟುಗಳನ್ನು ಪರಾಮರ್ಶಿಸಲು ಇವು ಪಾರದರ್ಶಕವಾಗಿರುತ್ತವೆಯೇ ಎಂಬ ಬಗ್ಗೆ ತುಸು ಗಂಭೀರವಾಗಿ ಸರ್ಕಾರ ಯೋಚನೆ ಮಾಡಿದಂತಿಲ್ಲ. ಇದರ ಮುಂದುವರೆದ ಭಾಗವೇ 'ಖಾಸಗಿ ವಿಶ್ವವಿದ್ಯಾಲಯ.'

ಇಂಥ ಖಾಸಗಿ ವಿಶ್ವವಿದ್ಯಾಲಯಗಳು ಕೇವಲ ಪ್ರೊಫೆಶನಲ್ ಶಿಕ್ಷಣಕ್ಕೆ ಒತ್ತು ಕೊಡುವುದು ಯಾಕೆಂಬುದು ಎಲ್ಲರಿಗೂ ತಿಳಿದ ವಿಚಾರ. ಇಂಥ ಶಿಕ್ಷಣದ ವ್ಯವಸ್ಥೆಯಲ್ಲಿ ಹಣದ ಹೊಳೆ ಹರಿದುಬರಲು ಸಾಧ್ಯವಿದೆ. ಇಲ್ಲಿ ಸರ್ಕಾರ ಮತ್ತು ಪ್ರೊಫೆಶನಲ್ ಶಿಕ್ಷಣ ವಕ್ತಾರರ ನಡುವೆ ಜಗ್ಗಾಟ ಅನಿವಾರ್ಯವಾಗಿ ಅದು ಸಾಮಾನ್ಯ ಪ್ರವೇಶ ಪರೀಕ್ಷೆ (CET), ಕಾಮೆಡ್-ಕೆ, ಇನ್ನಿತರ ಪರೀಕ್ಷೆಗಳಿಂದ ಇಡೀ ಶಿಕ್ಷಣ ಲೋಕವನ್ನು ಆವರಿಸಿಕೊಳ್ಳುತ್ತಿದೆ. ಇಂಥ ಡೀಮ್ಡ್ ವಿಶ್ವವಿದ್ಯಾಲಯ ಸಂಖ್ಯೆ ಈಗ ೮೯ ಆಗಿದೆ.

ಇಷ್ಟೇ ಸಾಲದು ಎಂಬಂತೆ ಕೇಂದ್ರ ಸರ್ಕಾರವು ಯು.ಜಿ.ಸಿ.ಗೆ ನೀಡುವ ಅನುದಾನದ ಪಾಲನ್ನು ಕಡಿಮೆ ಮಾಡಿದೆ. ಜೊತೆಗೆ ಯು.ಜಿ.ಸಿ.ಯು ಎಲ್ಲಾ ವಿಶ್ವ ವಿದ್ಯಾಲಯಗಳು ಹೇಗಾದರೂ ತಮ್ಮ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳಬೇಕೆಂದು ತಾಕೀತು ಮಾಡಿದೆ. ರಾಜ್ಯ ಸರ್ಕಾರವು ಅದಕ್ಕೆ ದನಿಗೂಡಿಸಿದೆ. ಕುಲಪತಿಗಳ ಕಸರತ್ತು ಪ್ರಾರಂಭವಾದದ್ದು ಈ ಸಂದರ್ಭದಲ್ಲಿ. ಸಂಯೋಜನೆ ನೀಡುವಾಗ, ಮುಂದುವರೆಸುವಾಗ, ಪರೀಕ್ಷಾ ಶುಲ್ಕ ಮತ್ತಿತರ ಶುಲ್ಕಗಳನ್ನು ದಿಢೀರನೆ ಏರಿಸಲಾಯಿತು. ಇದು ಒಂದು ರೀತಿಯ ಸಂಪನ್ಮೂಲಗಳ ದಿಢೀರ್ ಕ್ರೋಡೀಕರಣವಾದರೆ ಇನ್ನೊಂದು ರೀತಿಯಲ್ಲಿ ಖಾಸಗಿಯವರಂತೆ ಸ್ವಯಂ ಸಂಪನ್ಮೂಲದ ವಿಷಯಗಳನ್ನು ಪ್ರಾರಂಭಿಸಿದವು. ಅಧ್ಯಾಪಕರು, ಗ್ರಂಥ ಭಂಡಾರ, ಕಟ್ಟಡ ಎಲ್ಲವನ್ನೂ ಉಪಯೋಗಿಸಿಕೊಂಡು ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳುವ ಸ್ಪರ್ಧೆಯಲ್ಲಿ ಎಲ್ಲ ವಿಶ್ವವಿದ್ಯಾಲಯಗಳೂ ಮಗ್ನವಾಗಿವೆ. ಹೀಗೆ ಪೈಪೋಟಿಯ ಪರಿಣಾಮ ಯಾರ ಮೇಲೆ ಆಗುತ್ತದೆ? ಶುಲ್ಕ ಹೆಚ್ಚಿಸಿದ್ದರೆ ಭಾರ ಬೀಳುವುದು ವಿದ್ಯಾರ್ಥಿಗಳ ಮೇಲೆ ಎಂಬುದನ್ನು ವಿಶ್ವವಿದ್ಯಾಲಯಗಳು ಮನಗಾಣಬೇಕು. ಸ್ನಾತಕೋತ್ತರ ಅಧ್ಯಾಪಕರ ಮೇಲೆ ಬೋಧನೆಯ ಭಾರ ಹೆಚ್ಚಾದರೆ ಅವರ ಸಂಶೋಧನಾ ಮನೋಭಾವಕ್ಕೆ ಧಕ್ಕೆಯುಂಟಾಗುತ್ತದೆ ಎಂಬುದನ್ನು ವಿಶ್ವವಿದ್ಯಾಲಯ ಅರಿತಿರಬೇಕು.

ವಿಶ್ವವಿದ್ಯಾಲಯವು ಇನ್ನೊಂದು ರೀತಿಯಲ್ಲಿ ಸಂಪನ್ಮೂಲ ಸಂಗ್ರಹ ಮಾಡಹೊರಟಿರುವುದು ಉದ್ಯಮದ ಜೊತೆಗೆ ಸೇರಿ ಪಠ್ಯಕ್ರಮವನ್ನು ರೂಪಿಸುವುದು, ತರಬೇತಿ ಏರ್ಪಡಿಸುವುದು ಇತ್ಯಾದಿ. ಉದ್ಯಮದ ನೇಮಕಾತಿ ಕಾರ್ಯಾಲಯದಂತೆ ವರ್ತಿಸುವ ಇಂಥ ವರ್ತನೆ ವಿಶ್ವವಿದ್ಯಾಲಯದ ಪಾತ್ರವನ್ನು ಕುಗ್ಗಿಸಿದೆ.

ಇಷ್ಟು ಸಾಲದು ಎಂಬಂತೆ ಭಾರತದ ಉನ್ನತ ಶಿಕ್ಷಣವನ್ನು ವಿದೇಶದಲ್ಲಿ ಪ್ರಚಾರ ಮಾಡಲು ಇಪ್ಪತ್ತು ವಿಶ್ವವಿದ್ಯಾಲಯಗಳನ್ನು ಆರಿಸಿದ ವಿಶ್ವವಿದ್ಯಾಲಯ ಧನ ಸಹಾಯ ಆಯೋಗ ಪಾಶ್ಚಾತ್ಯ ಲೋಕಕ್ಕೆ ಬೇಕಾಗುವ ಶಿಕ್ಷಣ ಪದ್ಧತಿಗಳ ಬಗ್ಗೆ ಅನ್ವಯವಾಗುವಂತೆ ಪಠ್ಯ ಕ್ರಮವನ್ನು ರೂಪಿಸಲು ನಿರ್ಧರಿಸಿತು. ಹೀಗೆ ವಿಶ್ವ ವಿದ್ಯಾಲಯ ಧನಸಹಾಯ ಆಯೋಗ ನಮ್ಮ ಶಿಕ್ಷಣಕ್ಕೇ ವಿದೇಶದಲ್ಲಿ ಮಾರುಕಟ್ಟೆ ಹುಡುಕುವ ಏಜೆನ್ಸಿಯಾಗಿ ಪರಿವರ್ತನೆಗೊಂಡಿತು. ಇತ್ತೀಚಿನ ವರುಷಗಳಲ್ಲಿ ವಿದೇಶದ ಸಂಪತ್ತಿನಿಂದ ಆಕರ್ಷಿತರಾಗಿ ಭಾರತದ ಜ್ಞಾನ ಸಮಾಜದ ಅನೇಕರು ಬೇರೆ ಬೇರೆ ರೀತಿಯ ಉದ್ಯೋಗಗಳನ್ನು ಅರಸಿಕೊಂಡು ದೇಶ ಬಿಟ್ಟು ಹೋಗುತ್ತಿರುವುದು ನಮ್ಮ ಕಣ್ಣ ಮುಂದಿದೆ. ಇದರ ಜೊತೆಯಲ್ಲಿಯೇ ಜಾಗತೀಕರಣದ ಫಲವಾಗಿ ಅನೇಕ ವಿದೇಶಿ ವಿಶ್ವವಿದ್ಯಾಲಯಗಳು ಇಲ್ಲಿ ತಮ್ಮ ಶಾಖೆಗಳನ್ನು ತೆರೆದು ಭಾರತೀಯ ವಿದ್ಯಾರ್ಥಿಗಳನ್ನು ಆಕರ್ಷಿಸಿ ತರಬೇತಿ ನೀಡುತ್ತಿರುವುದು. ಆ ತರಬೇತಿಯ ಮೂಲಕ ಜಾಗತಿಕ ಮಾರುಕಟ್ಟೆಯಲ್ಲಿ ಉದ್ಯೋಗ ಪಡೆದು ವಿಕ್ರಮ ಸಾಧಿಸತೊಡಗಿದಾಗ ಸ್ವಾಭಾವಿಕವಾಗಿಯೇ ನಮ್ಮ ವಿಶ್ವವಿದ್ಯಾಲಯಗಳು, ಯು.ಜಿ.ಸಿ. ತಮ್ಮ ಅಸ್ತಿತ್ವವನ್ನು ಕಳೆದುಕೊಂಡುಬಿಡುತ್ತವೆ.

ಇಂಥ ವಿದೇಶಿ ಶಾಖಾ ವಿಶ್ವವಿದ್ಯಾಲಯಗಳಿಂದ ಶಿಕ್ಷಣ ಪಡೆದ ನಮ್ಮ ವಿದ್ಯಾರ್ಥಿಗಳು ಅತ್ಯಂತ ದುಬಾರಿ ಹಣವನ್ನು ನೀಡಬೇಕಾಗಿರುವುದರಿಂದ ಶಿಕ್ಷಣ ಕೇವಲ ಶ್ರೀಮಂತರ ಸ್ವತ್ತಾಗುತ್ತದೆ. ಇಂಥ ಪ್ರಕ್ರಿಯೆ ಶ್ರೀಮಂತರನ್ನು ಇನ್ನೂ ಹೆಚ್ಚು ಶ್ರೀಮಂತರನ್ನಾಗಿಸಿ ಬಂಡವಾಳಶಾಹಿ ಲೋಕವನ್ನು ಸೃಷ್ಟಿಸುತ್ತದೆ. ಇಷ್ಟು ಮಾತ್ರವಲ್ಲದೆ ವಿದೇಶದ ಮಾರುಕಟ್ಟೆಗೆ ಬೇಕಾದ ರೀತಿಯಲ್ಲೇ ತಯಾರುಮಾಡುವುದರಿಂದ ನಮ್ಮ ದೇಶದ ಪರಂಪರೆಯನ್ನು ಮರೆಸಿ ಕೇವಲ ರಾಷ್ಟ್ರ ಎನ್ನುವುದು ನಾವು ಹುಟ್ಟುವ ಸ್ಥಳವಾಗಿಬಿಡುತ್ತದೆ.

ಇದೆಲ್ಲಾ ಸಾಲದು ಎಂಬಂತೆ ಹಿಂದಿನ ಕೇಂದ್ರ ಸರ್ಕಾರ ನೂತನ ಯು.ಜಿ.ಸಿ. ಮಾದರಿ ಅಧಿನಿಯಮವನ್ನು ಜಾರಿಗೆ ತರಲು ಸನ್ನಾಹ ನಡೆಸಿತ್ತು. ಕೊಠಾರಿ ವರದಿ (೧೯೬೪), ಗಜೇಂದ್ರಗಡ್ಕರ್ ವರದಿ (೧೯೭೧) ಹೀಗೆ ಬೇರೆ ಬೇರೆ ವಿಷಯಗಳ ಬಗ್ಗೆ ಎಷ್ಟೆಲ್ಲಾ ವರದಿಗಳು ಇದ್ದರೂ ಮತ್ತಷ್ಟು ವರದಿಗಳನ್ನು ಅವಲಂಬಿಸಿಕೊಂಡು ಹೋಗುತ್ತಿರುವ ನಮ್ಮ ಶಿಕ್ಷಣ ವ್ಯವಸ್ಥೆ ಎತ್ತ ಸಾಗುತ್ತಿದೆ?

**ಡಾ|| ಜಯಪ್ರಕಾಶ ಮಾವಿನಕುಳಿ**
ಪ್ರೊಫೆಸರ್, ಮಾವಿನಕುಳಿ ಮನೆ
ಮೂಡುಬಿದಿರೆ - ೫೭೪ ೧೯೭ (ದಕ್ಷಿಣ ಕನ್ನಡ)

# ವೈಜ್ಞಾನಿಕ ಸಮಾಜವಾದ

ಆರ್. ಡಿ. ಹಳಿಂಗಳಿ

೨೧ನೇ ಶತಮಾನದ ಹೊಸ್ತಿಲಲ್ಲಿರುವ ಮಾನವ ಕುಲ ಇಂದು ಸಂಕ್ರಮಣ ಕಾಲಘಟ್ಟದಲ್ಲಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ನೆರವಿನೊಂದಿಗೆ ಅಗಾಧ ಮಟ್ಟದ ಉತ್ಪಾದಕ ಶಕ್ತಿಯನ್ನು ಮಾನವ ಸಮಾಜ ಇಂದು ಪಡೆದು ಕೊಂಡಿದೆ. ಆದರೂ ಹಸಿವು, ಬಡತನ, ಅನಾರೋಗ್ಯ ಅಜ್ಞಾನಗಳ ಬಾಧೆಯಲ್ಲಿ ಬಹುಸಂಖ್ಯ ಜನರಿಂದು ಜಗತ್ತಿನಾದ್ಯಂತ ಬಳಲುತ್ತಿದ್ದಾರೆ. ಈ ಸಂಕಟಗಳಿಂದ ಪಾರಾಗಲು ಮಾನವ ಸಮಾಜ ಪ್ರಜ್ಞಾಪೂರ್ವಕ ಯತ್ನ ನಡೆಸಬೇಕಿದೆ. ಇಂಥ ಯತ್ನಗಳು ನಡೆಯದಿರಲು ಸಮಾಜವನ್ನು ಹಿಂದಕ್ಕೆ ತಳ್ಳಲು ಕಾಲಬಾಹಿರ ಶಕ್ತಿಗಳು ಯತ್ನಿಸುತ್ತಲಿವೆ. ಈ ಉದ್ದೇಶ ಸಾಧನೆಗಾಗಿ ಪ್ರತಿಗಾಮಿ ಶಕ್ತಿಗಳು ಮಾನವ ಸಮಾಜದ ಸಮಷ್ಟಿ ಪ್ರಜ್ಞೆಯನ್ನು ಗತಕಾಲದಲ್ಲಿ ಹಿಡಿದಿಡಲು ಹೊರಟಿವೆ. ಇದಕ್ಕಾಗಿ ಧರ್ಮ, ಭಾಷೆ, ಜನಾಂಗ, ಪ್ರದೇಶಗಳ ವೈವಿಧ್ಯತೆಯನ್ನು ಪರಸ್ಪರ ವಿರೋಧಿ ಎಂದು ಚಿತ್ರಿಸುತ್ತ ಪ್ರತಿಗಾಮಿ ಶಕ್ತಿಗಳು ಯತ್ನಿಸುತ್ತಿವೆ.

ಪ್ರತಿಗಾಮಿ ಶಕ್ತಿಗಳ ಎಲ್ಲ ಪ್ರಯತ್ನಗಳನ್ನು ತಡೆದು ಸಮಾಜವನ್ನು ಸಾಮಾಜಿಕ ನ್ಯಾಯ ಸ್ಥಾಪಿಸುವತ್ತ ಮುನ್ನಡೆಸಬೇಕಿದೆ. ಈ ದಿಶೆಯಲ್ಲಿ ಸಮೂಹ ಪ್ರಜ್ಞೆಯನ್ನು ಜಾಗೃತಗೊಳಿಸಿ ಇಲ್ಲಿಯವರೆಗೆ ಮಾನವ ಸಮಾಜ ಸಾಧಿಸಿದ




ಉನ್ನತ ಮಟ್ಟದ ಉತ್ಪಾದಕ ಶಕ್ತಿಯನ್ನು ಸಮಷ್ಟಿಗಾಗಿ ಬಳಸಲು ಸಜ್ಜಾಗಬೇಕಿದೆ. ಮಾರ್ಕ್ಸ್‌ವಾದವು ಈ ಯತ್ನವನ್ನು ಸಾಕಾರಗೊಳಿಸಲು ದುಡಿಯುವ ಜನ ಒಂದಾಗಬೇಕೆಂದು ಕರೆ ನೀಡುತ್ತದೆ. ಪ್ರಪಂಚದ ಹಿಂದಿನ, ಇಂದಿನ ಆಗುಹೋಗುಗಳ ಮೇಲೆ ವೈಜ್ಞಾನಿಕ ಸೂತ್ರ ಸಿದ್ಧಪಡಿಸಿರುವ ಮಾರ್ಕ್ಸ್-ಏಂಗೆಲ್ಸರು ಒಂದು ಹಂತದಲ್ಲಿ ಉತ್ಪಾದನಾ ಸಾಧನಗಳ ಖಾಸಗಿ ಒಡೆತನ ಪದ್ಧತಿ ಹೇಗೆ ಪ್ರತಿಗಾಮಿಯಾಗುತ್ತದೆ ಹಾಗೂ ಅದನ್ನು ಮುಂದುವರೆಸಲು ಹೇಗೆ ಅಸಾಧ್ಯವಾಗುತ್ತದೆ ಎಂಬುದನ್ನು ವೈಜ್ಞಾನಿಕವಾಗಿ, ತಾರ್ಕಿಕವಾಗಿ ತೋರಿಸಿಕೊಟ್ಟಿದ್ದಾರೆ. ಬಿ. ವಿ. ಕಕ್ಕಿಲ್ಲಾಯರು ತಮ್ಮ 'ವೈಜ್ಞಾನಿಕ ಸಮಾಜವಾದ: ಒಂದು ಕಿರುನೋಟ' ಎಂಬ ಕೃತಿಯಲ್ಲಿ ಈ ಮಾರ್ಕ್ಸ್‌ವಾದಿ ಸಿದ್ಧಾಂತದ ತಿರುಳನ್ನು ಪರಿಚಯಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಗುಲಾಮಿ ಪದ್ಧತಿ, ಪಾಳೆಗಾರಿ ವ್ಯವಸ್ಥೆ, ಬಂಡವಾಳಶಾಹಿ ಕಾಲಘಟ್ಟ ಎಲ್ಲವೂ ಹೇಗೆ ಸುಲಿಗೆಕೋರ ವ್ಯವಸ್ಥೆಗಳಾಗಿರುತ್ತವೆ, ಬಂಡವಾಳಶಾಹಿ ವ್ಯವಸ್ಥೆ ವರ್ಗವೈಫಲ್ಯವಿರುವ ಅಂತಿಮ ವ್ಯವಸ್ಥೆಯಾಗಿದ್ದು, ಅವು ತನ್ನ ಗರ್ಭದಲ್ಲಿಯೇ ಸಮಾಜವಾದಿ ವ್ಯವಸ್ಥೆಯ ಅಂಕುರಗಳನ್ನು ಹೇಗೆ ಹುದುಗಿಸಿಕೊಂಡಿರುತ್ತವೆ ಎಂಬುದನ್ನು ಲೇಖಕರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಮಾರ್ಕ್ಸ್-ಏಂಗೆಲ್ಸ್ ಸಿದ್ಧಾಂತದ ಕೃತಿಗಳು ಕನ್ನಡದಲ್ಲಿ ಸಾಕಷ್ಟು ಅನುವಾದಗೊಂಡಿವೆ. ಆದರೆ ಈ ಸಿದ್ಧಾಂತದ ತಿರುಳನ್ನು ಎರಕಹೊಯ್ದು ಸರಳಶೈಲಿಯಲ್ಲಿ ಓದುಗರಿಗೆ ಲೇಖಕರು ಈ ಕೃತಿಯಲ್ಲಿ ನೀಡಿದ್ದಾರೆ.

ಬಂಡವಾಳಶಾಹಿ ವ್ಯವಸ್ಥೆಯು ಕೆಲಸಕ್ಕೆ ಬಾರದ ವ್ಯವಸ್ಥೆಯಾಗಿ, ಬಂಡವಾಳವು ನಿರರ್ಥಕ ಬಂಡವಾಳಶಾಹಿ ಪ್ರಪಂಚದಲ್ಲೆಲ್ಲಾ ಅಲೆಯುತ್ತಿದೆ. ಉದ್ದಿಮೆ ಮತ್ತು ಉದ್ಯೋಗ ಸೃಷ್ಟಿಸುವ ತನ್ನ ಮೊದಲಿನ ಸಾಮರ್ಥ್ಯವನ್ನು ಅದು ಕಳೆದುಕೊಂಡು ವಂಚನೆ, ಮೋಸ, ಬೆದರಿಕೆಗಳ ಸಹಾಯದಿಂದ ಇನ್ನಷ್ಟು ಬೆಳೆಯಲು ಹವಣಿಸುತ್ತಿದೆ. ಈ ಉದ್ದೇಶದ ಈಡೇರಿಕೆಗಾಗಿ ಪ್ರಜಾಪ್ರಭುತ್ವ ಗಣರಾಜ್ಯಗಳನ್ನು ನಾಶಪಡಿಸಿ ಅದರ ಸ್ಥಳದಲ್ಲಿ ತನ್ನನ್ನು ತಾನು ರಕ್ಷಿಸಿಕೊಳ್ಳುವ ವಿಧಾನವಾಗಿ, ಫ್ಯಾಸಿಸಂ ತರಲು ಯತ್ನಿಸುತ್ತಿದೆ. ಇಂಥ ಯತ್ನವಿಂದು ಭಾರತೀಯ ಸನ್ನಿವೇಶದಲ್ಲಿ ಧರ್ಮದ ಹೆಸರಲ್ಲಿ ನಡೆಯುತ್ತಿದೆ. ಅದರ ಈ ಷಡ್ಯಂತ್ರವನ್ನು ನಾಶಪಡಿಸಬಲ್ಲ ಶಕ್ತಿ ದುಡಿಯುವ ಜನರಿಗೆ ಮಾತ್ರ ಇದೆ. ''ಮನುಷ್ಯ ಮನುಷ್ಯರೊಳಗೆ ಯಾವುದೇ ತಾರತಮ್ಯ ಭೇದಭಾವಗಳಿಲ್ಲದೆ ಎಲ್ಲರೂ ಸಮಾನತೆಯಿಂದ ಸಹಬಾಳ್ವೆ ಮಾಡುವ ಮತ್ತು ಜೊತೆಗೂಡಿ ದುಡಿಯುವ ವ್ಯವಸ್ಥೆಯನ್ನು ವೈಜ್ಞಾನಿಕ ಸಮಾಜವಾದ ಎಂದು ನಾವು ಕರೆಯುತ್ತೇವೆ'' ಎನ್ನುವ ವಿಶ್ಲೇಷಣೆ ಕಕ್ಕಿಲ್ಲಾಯರ ಕೃತಿಯಲ್ಲಿ ಚೆನ್ನಾಗಿ ಮೂಡಿಬಂದಿದೆ.

'ಮತಧರ್ಮ ಮತ್ತು ಕಮ್ಯುನಿಸಂ' ಎಂಬ ಅಧ್ಯಾಯದಲ್ಲಿ ಮತಧರ್ಮದ ಅಪೂರ್ಣತೆ ಕುರಿತಾದ ವ್ಯಾಖ್ಯಾನವಿದೆ. ''ಮತಧರ್ಮಗಳು ಮತ್ತು ಮೂಢನಂಬಿಕೆಗಳು ಅಗತ್ಯವಿರುವಂತಹ ಪರಿಸ್ಥಿತಿಯನ್ನು ಬದಲಿಸಿ ಅವುಗಳ ಅವಶ್ಯಕತೆ ಇಲ್ಲದಂತಹ ಪರಿಸ್ಥಿತಿಯನ್ನು ನಿರ್ಮಿಸುವುದು ಕಮ್ಯುನಿಸಂನ ಉದ್ದೇಶವಾಗಿದೆ'' ಎಂದು ಲೇಖಕರು ಸರಿಯಾಗಿಯೇ ಹೇಳಿದ್ದಾರೆ.

'ಯಥಾರ್ಥತೆ ಮತ್ತು ಭ್ರಮೆ' ಎಂಬ ಅಧ್ಯಾಯದಲ್ಲಿ ಪರಿಸರದಿಂದ ಪ್ರಜ್ಞೆ ಬೆಳೆದುಬಂದ ಬಗೆ ಮತ್ತು ಅದು ವೈಜ್ಞಾನಿಕ ಮಟ್ಟ ತಲುಪಿದುದರ ಕುರಿತು ವಿಶ್ಲೇಷಿಸಿದ್ದಾರೆ. ''ಬ್ರಹ್ಮ ಸತ್ಯಂ ಜಗನ್ ಮಿಥ್ಯಾ'' ಎನ್ನುವ ಶಂಕರಾಚಾರ್ಯರ ಪ್ರಸಿದ್ಧ ಮಾಯಾವಾದ ಕುರಿತಾಗಿ (ಅಥವಾ ಮಿಥ್ಯಾವಾದ) ತಿಳಿಸಿದ್ದಾರೆ. ಚಲನಶೀಲ ವಸ್ತುವು ರೂಪಾಂತರಗೊಳ್ಳುವ ಸಂದರ್ಭದಲ್ಲಿ ತನ್ನ ರೂಪವನ್ನು ಕಳೆದುಕೊಂಡಿರುತ್ತದೆ. ಈ ಅರ್ಥದಲ್ಲಿ ಗೋಚರಿಸುವ ವಸ್ತುವಿನ ವಿವಿಧ ರೂಪಗಳಿಗೆ ಮಾಯೆ ಎನ್ನಲಾಯಿತೆ? ವಸ್ತುವಿನ ಈ ಸ್ಥಿತಿಗೆ ಮಾಯೆ ಎಂದು ವಸ್ತುವಿನ ನಿರಂತರ ಚಲನಶೀಲ ಸ್ಥಿತಿಗೆ 'ಬ್ರಹ್ಮ' ಎನ್ನಲಾಯಿತೆ ? ಚಲನಶೀಲತೆ ಇದೇ ಬ್ರಹ್ಮಾಂಡವನ್ನು ಆವರಿಸಿರುವುದರಿಂದ ಆ ಸತ್ಯಕ್ಕೆ ಬ್ರಹ್ಮಸತ್ ಎನ್ನಲಾಯಿತೆ ? ಇವೆಲ್ಲ ಜಿಜ್ಞಾಸೆಯ ಪ್ರಶ್ನೆಗಳು. ಭಾರತೀಯ ತತ್ವಶಾಸ್ತ್ರ ಪರಂಪರೆಯಲ್ಲಿ ಶಂಕರಾಚಾರ್ಯರ ಪಾತ್ರವನ್ನು ಭೌತವಾದಿ ದೃಷ್ಟಿಕೋನದಿಂದ ವಿಶ್ಲೇಷಿಸಿ ಅವರನ್ನು ಕಾಲಬಾಹಿರ ಮತ್ತು ಕಂದಾಚಾರ ಶಕ್ತಿಗಳಿಂದ ಮುಕ್ತಗೊಳಿಸುವ ಅವಶ್ಯಕತೆಯಿದೆ. ಈ ದಿಶೆಯತ್ತ ಬಿ. ವಿ. ಕಕ್ಕಿಲ್ಲಾಯರು ಇನ್ನಷ್ಟು ಬೆಳಕನ್ನು ಹರಿಸಬಹುದಿತ್ತು.

ಮಾರ್ಕ್ಸ್‌ವಾದದ ತಾತ್ವಿಕ ನೆಲೆಗಟ್ಟಾಗಿರುವ ದ್ವಂದ್ವಮಾನವನ್ನು 'ವೀಕ್ಷಣೆ ಮತ್ತು ಇತಿಹಾಸ ದರ್ಶನ' ಎಂಬ ಅಧ್ಯಾಯದಲ್ಲಿ ಜನರಿಗೆ ಅರ್ಥವಾಗುವ ದೃಷ್ಟಾಂತಗಳಿಂದ ವಿವರಿಸಿದ್ದಾರೆ. ಉಷ್ಣತೆಯ ಒಂದು ಹಂತದಲ್ಲಿ ನೀರು ಆವಿಯಾಗುವ, ಇನ್ನೊಂದು ವ್ಯತಿರಿಕ್ತ ಹಂತದಲ್ಲಿ ನೀರು ಘನಪದಾರ್ಥವಾಗುವ ಸರಳ ದೃಷ್ಟಾಂತ ನೀಡಿ ಸೃಷ್ಟಿಯಲ್ಲಿನ ದ್ವಂದ್ವಾತ್ಮಕತೆ ಕುರಿತು ಚರ್ಚಿಸಿದ್ದಾರೆ.

ದ್ವಂದ್ವಾತ್ಮಕ ದೃಷ್ಟಿಕೋನವನ್ನು ಸಮಾಜ ಬೆಳವಣಿಗೆ ಅಧ್ಯಯನಕ್ಕೆ ಅನ್ವಯಿಸಿ ಮಾರ್ಕ್ಸ್-ಏಂಗೆಲ್ಸರು ಇತಿಹಾಸವನ್ನು ವಸ್ತುನಿಷ್ಠವಾಗಿ ನೋಡಿರುವ ಕುರಿತು ವಿವರಿಸಿದ್ದಾರೆ. ಮಾನವ ಸಮಾಜವು ವಿವಿಧ ಹಂತದ ಉತ್ಪಾದನಾ ಕಾಲಘಟ್ಟಗಳನ್ನು ದಾಟಿ ಇಂದು ಸಮಷ್ಟಿ ಸ್ವಾಮ್ಯ ನಿರ್ಮಿಸಬೇಕಾದ ಬೆಳವಣಿಗೆಯ ಹಂತವನ್ನು ಕುರಿತು ವಿಶ್ಲೇಷಿಸಿದ್ದಾರೆ. ಪಾಳೆಯಗಾರಿಕೆ

೪೭ನೇ ಪುಟಕ್ಕೆ

# ಬದುಕಿನಲ್ಲಿ ಧರ್ಮದ ಪಾತ್ರ - ಪ್ರತಿಕ್ರಿಯೆ

**ಮೇ,** ೨೦೦೪ರ 'ಹೊಸತು'ವಿನಲ್ಲಿ ಶ್ರೀ ರವೀಂದ್ರ ಹಳಿಂಗಳಿಯವರ 'ಬದುಕಿನಲ್ಲಿ ಧರ್ಮದ ಪಾತ್ರ' ಲೇಖನ ಕುರಿತು ಪ್ರತಿಕ್ರಿಯಾತ್ಮಕವಾಗಿ ಕೆಲವು ಅಭಿಪ್ರಾಯಗಳನ್ನು ನೀಡಬಯಸುತ್ತೇನೆ.

ಶ್ರೀ ಹಳಿಂಗಳಿಯವರ ಲೇಖನದಲ್ಲಿ ಧರ್ಮವೊಂದರ ಅನಿವಾರ್ಯತೆಯ ಬಗ್ಗೆ ಯಾವ ಮಾತೂ ಇಲ್ಲ. ಅವರ ಅವಲೋಕನವು ಯಾವುದೇ ಧರ್ಮದ ಉದಯದ ನಂತರ ಆಳುವ ವರ್ಗವು ಅದನ್ನು ಬಳಸಿಕೊಳ್ಳುವುದರ ಕುರಿತ ಅಂಶಕ್ಕೆ ಮಾತ್ರ ಸೀಮಿತವಾಗಿದೆ. ಆಳುವ ವರ್ಗವು ಮಾತ್ರವಲ್ಲದೆ ಶೋಷಿತ ವರ್ಗವೂ ಸಹ ಧರ್ಮವನ್ನು ಪೋಷಿಸಿ ಬೆಳೆಸುತ್ತದೆ ಎಂಬುದನ್ನು ಗಮನಿಸಬೇಕು.

ಶ್ರೀ ಹಳಿಂಗಳಿಯವರ ಎರಡು ಮಾತುಗಳನ್ನು ಇಲ್ಲಿ ಉಲ್ಲೇಖಿಸಲು ಇಷ್ಟಪಡುತ್ತೇನೆ :

೧. "ಜನರ ಬದುಕನ್ನು ನಿಯಂತ್ರಿಸುವ ಶಕ್ತಿ ಸಮಾಜದ ಉತ್ಪಾದಕ ಶಕ್ತಿಗಳಿಗಿದ್ದರೂ ಸಹ ಅದನ್ನು ಮರೆಮಾಚಿ... ಇಡೀ ವ್ಯಕ್ತಿತ್ವವನ್ನೇ ನಿಯಂತ್ರಿಸುವ ಶಕ್ತಿ... ಪರಲೋಕದಲ್ಲಿದೆ ಎಂಬ ಭ್ರಮೆಯನ್ನು ಮೂಡಿಸುವುದು ಧರ್ಮಗಳಿಗೆ ಅನಿವಾರ್ಯವಾಗುತ್ತದೆ" ಎಂಬುದು ಹಾಗೂ,

೨. ವರ್ಗಗಳ ನಡುವೆ ಶಾಂತಿಯನ್ನು ಏರ್ಪಡಿಸುವುದು ಅನಿವಾರ್ಯವಾಗಿತ್ತು. ಈ ಕಾರ್ಯವನ್ನು ಆಯಾ ಕಾಲದಲ್ಲಿ ಉದಯಿಸಿದ ಧರ್ಮಗಳು ಪೂರೈಸಿವೆ" ಎಂಬ ಮಾತುಗಳು ಪೂರ್ತಿ ನಿಜವಾದುವಲ್ಲ.

'ಧರ್ಮ' ಎಂಬುದು 'ಧಾರ್ಮಿಕ ನಂಬುಗೆ' ಹಾಗೂ 'ಧಾರ್ಮಿಕ ಆಚರಣೆ' ಎಂಬ ಎರಡು ಅಂಶಗಳಿಂದ ಕೂಡಿದ್ದು, ಧಾರ್ಮಿಕ ಆಚರಣೆಗಳಿಗೆ 'ಧಾರ್ಮಿಕ ನಂಬುಗೆ'ಗಳೇ ಮೂಲ ಬುನಾದಿ. 'ಧರ್ಮ' ಎಂಬ ಶಬ್ದವನ್ನು ಈ ಲೇಖನದಲ್ಲಿ ಈ ಅರ್ಥದಲ್ಲೇ ಬಳಸಿರುತ್ತೇನೆ.

ಆಯಾ ಕಾಲಘಟ್ಟದಲ್ಲಿನ ಸಾಮಾಜಿಕವಾಗಿ ಉತ್ಪಾದಿಸಲ್ಪಟ್ಟ ಸಂಪತ್ತಿನ ಉತ್ಪಾದನೆ ಹಾಗೂ ವಿತರಣಾ ವ್ಯವಸ್ಥೆಯ ಆಧಾರದ ಮೇಲೆ 'ಧರ್ಮ'ವು ರೂಪವನ್ನು ತಾಳಿದರೂ ಒಂದು ಹೊಸ ಧರ್ಮದ ಉದಯಕ್ಕೆ ಇದೊಂದೇ ಕಾರಣವಾಗಿರುವುದಿಲ್ಲ.

ಪ್ರಕೃತಿಯೊಡನೆ ಮಾನವನ ನಿರಂತರ ಚಟುವಟಿಕೆಯ ಬೌದ್ಧಿಕ ಉತ್ಪನ್ನವೇ 'ಧರ್ಮ'. ಸಾಮಾಜಿಕ-ಆರ್ಥಿಕ ಸಂಗತಿಗಳು ನಂತರದಲ್ಲಿ ತಳಕುಹಾಕಿಕೊಳ್ಳುತ್ತವೆ. ಮಾನವ ಸಮಾಜದ ವಿಕಾಸದ ಹಾದಿಯಲ್ಲಿ ಇದೊಂದು ಸಹಜವಾದ ಬಹುಮುಖ್ಯವೆನಿಸಿದ ಉತ್ಪನ್ನ. ಪ್ರಕೃತಿಯೊಡನೆ ಮಾನವನ ಸಹಭಾಗಿತ್ವವು ಅನೇಕ ವಿಸ್ಮಯಗಳನ್ನು, ಅನೇಕ ಭಯಗಳನ್ನು, ಅನೇಕ ಪ್ರಶ್ನೆಗಳನ್ನು ಮುಖಾಮುಖಿಯಾಗಿಸುತ್ತದೆ. ಮೂಲಭೂತವಾಗಿ 'ಧರ್ಮ'ವೆಂಬುದು ಇವುಗಳಿಗೆಲ್ಲ ಉತ್ತರರೂಪವಾಗಿ ಉದ್ಭವಿಸಿದ ವಾಸ್ತವತೆ. ನಿಸರ್ಗದ ನಿಗೂಢತೆಗಳಿಗೆ ಪರಿಹಾರಾತ್ಮಕವಾದ ಸಂಶೋಧನೆಯಿದು. ಮಾನವ ಸಮಾಜಕ್ಕೆ ಮಾನಸಿಕ ಸಮಾಧಾನ, ಲೌಕಿಕ ಔಚಿತ್ಯವನ್ನು ಈ ರೀತಿ ಕಂಡುಕೊಳ್ಳಲಾಯಿತು.

ಹೀಗಾಗಿ ಧರ್ಮಗಳು ಬದಲಾವಣೆಗಳನ್ನು ಕಂಡಿವೆ: ಆದರೆ ಅಳಿಸಿಹೋಗಿಲ್ಲವೆಂಬುದನ್ನು ಗಮನಿಸಬೇಕಾಗುತ್ತದೆ.

ಧರ್ಮದ ಉದಯಕ್ಕೆ ಕಾರಣಗಳೇನೇ ಇರಲಿ ಅಥವಾ ಧರ್ಮವನ್ನು ಬೇರೆ ಬೇರೆ ವರ್ಗಗಳು ಉಪಯೋಗಿಸಿಕೊಳ್ಳುವ ವಿಧಾನಗಳು ಏನೇ ಆಗಿರಲಿ ಒಂದು ಪ್ರಶ್ನೆ ಮಾತ್ರ ಮತ್ತೆ ಮತ್ತೆ ನಮ್ಮನ್ನು ಕಾಡುತ್ತದೆ – 'ಧರ್ಮ'ವೆಂಬುದು ಅನಿವಾರ್ಯವೇ ? ಬದುಕಿನಲ್ಲಿ ಅದರ ಪಾತ್ರ ಬಹಳ ಅವಶ್ಯಕವಾಗಿದೆಯೇ ?

ಈಗ ಒಬ್ಬ ಬಂಡವಾಳಶಾಹಿಯು ಧರ್ಮವನ್ನೇಕೆ ಒಪ್ಪುತ್ತಾನೆ, ನೋಡೋಣ :

೧. ಅವನಿಗೆ ಅದರಲ್ಲಿ ನಿಜವಾಗಿಯೂ ನಂಬಿಕೆಯಿದೆ.
೨. ಧಾರ್ಮಿಕನೆಂದು ಗುರ್ತಿಸಲ್ಪಡುವುದರಿಂದ ಅವನ ಸಾಮಾಜಿಕ/ಆರ್ಥಿಕ ಸ್ಥಿತಿಗತಿಗಳಿಗೆ ಯಾವ ಆತಂಕಗಳೂ ಇರುವುದಿಲ್ಲ.
೩. ಕೌಟುಂಬಿಕ ಕಾರಣಗಳಿಗೋಸ್ಕರ (ಮದುವೆ, ಮರಣ ಇತ್ಯಾದಿ).
೪. ವರ್ಗದೃಷ್ಟಿಯಿಂದ ಉಪಯೋಗಕಾರಿ.
೫. ಮೇಲಿನ ಎಲ್ಲ ಅಂಶಗಳನ್ನೊಳಗೊಂಡ ಒಂದು ಸಂಕೀರ್ಣ ಸನ್ನಿವೇಶ.
೬. ಬದಲಿ ಪರಿಹಾರವಿಲ್ಲದಿರುವುದು.

ಬಂಡವಾಳಶಾಹಿಯೊಬ್ಬ ಪಕ್ಕಾ ನಾಸ್ತಿಕನಾಗಿದ್ದರೂ ೪ ಮತ್ತು ೬ನೇ ಅಂಶಗಳ ಹಿನ್ನೆಲೆಯಲ್ಲಿ 'ಧರ್ಮ'ಕ್ಕೆ ಪ್ರೋತ್ಸಾಹಕನಾಗಿರುವುದು ಸಾಧ್ಯವಿದೆ.

ಈಗ ಒಬ್ಬ ಶ್ರಮಜೀವಿಯು ಧರ್ಮವನ್ನು ಒಪ್ಪಲು ಕಾರಣಗಳೇನು ಇರಬಹುದೆಂದು ನೋಡೋಣ :

(ಅ) ಅವನಿಗೆ ಅದರಲ್ಲಿ ನಿಜವಾಗಿಯೂ ನಂಬಿಕೆಯಿದೆ.
(ಆ) ಬದುಕು ಸಾಗಿಸಲು ಅರ್ಥವನ್ನೂ ಧೈರ್ಯವನ್ನೂ ನೀಡುತ್ತದೆ.
(ಇ) ಭವಿಷ್ಯತ್ತಿನಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಒಳ್ಳೆಯದಾಗಬಹುದೆಂದು ಆಶಿಸಿ, ಈಗ ಬದುಕು ನಡೆಸಬಹುದು.
(ಈ) ಕೌಟುಂಬಿಕ ಅಂಶಗಳು.
(ಉ) ಬದಲಿ ಪರಿಹಾರವಿಲ್ಲದಿರುವುದು.

ಶ್ರಮಜೀವಿಯೊಬ್ಬ ಪಕ್ಕಾ ನಾಸ್ತಿಕನಾಗಿದ್ದರೂ 'ಈ' ಮತ್ತು 'ಉ' ಕಾರಣಗಳ ಹಿನ್ನೆಲೆಯಲ್ಲಿ ಧರ್ಮವನ್ನು ಒಪ್ಪಿಕೊಂಡು ಬದುಕಬೇಕಾಗುತ್ತದೆ.

ಹೀಗಾಗಿ ಬಂಡವಾಳಶಾಹಿಯ ಪ್ರತಿನಿಧಿಯೊಬ್ಬ ಹಾಗೂ ಒಬ್ಬ ಶ್ರಮಜೀವಿಯು ಧರ್ಮವನ್ನು ಮುಂದುವರಿಸಿಕೊಂಡು ಹೋಗಲು ಮೂರು ಸಾಮಾನ್ಯ ಅಂಶಗಳನ್ನು ಗುರ್ತಿಸಬಹುದು :

(ಕ) ಧರ್ಮದಲ್ಲಿನ ನಂಬಿಕೆ.
(ಖ) ಕೌಟುಂಬಿಕ ಹಿತದೃಷ್ಟಿ.
(ಗ) ಬದಲಿ ಪರಿಹಾರವಿಲ್ಲದಿರುವುದು.

ಈ ಹಿನ್ನೆಲೆಯಲ್ಲಿ ಬದಲಿ ಪರಿಹಾರವನ್ನು ನೀಡುವವರೆಗೆ ಬದುಕಿನಲ್ಲಿ 'ಧರ್ಮ' ಅನಿವಾರ್ಯವೇ ಸರಿ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

'ಧರ್ಮ'ವೆಂಬುದು ಧಾರ್ಮಿಕ ಆಚರಣೆ ಹಾಗೂ ಧಾರ್ಮಿಕ ನಂಬುಗೆ ಎಂಬ ಎರಡು ಕವಲುಗಳುಳ್ಳ ಆಲದ ಮರದಂತೆ ಎಂದು ಈಗಾಗಲೇ ಹೇಳಿದ್ದಾಗಿದೆ.

ಧಾರ್ಮಿಕ ಆಚರಣೆಗಳು ಪರಂಪರೆಯಿಂದ ಬಂದದ್ದಾಗಿ ಅನೇಕ ಸಲ ಅರ್ಥಹೀನವಾಗಿದ್ದರೂ ಬಹುಸಂಖ್ಯೆಯಲ್ಲಿ ಜನರು ಅವುಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಎಲ್ಲಿ ಧಾರ್ಮಿಕ ಆಚರಣೆಗಳಿರುತ್ತವೆಯೋ ಅಲ್ಲಿ ಧಾರ್ಮಿಕ ನಂಬುಗೆ ಇದ್ದೇ ಇರುತ್ತದೆ. ಧಾರ್ಮಿಕ ಆಚರಣೆಗಳನ್ನು ನಡೆಸಲು ಅನೇಕ ಕಾರಣಗಳಿವೆ :

ಪ್ರಕೃತಿಯೊಡನೆ ಮಾನವನ ನಿರಂತರ ಚಟುವಟಿಕೆಯ ಬೌದ್ಧಿಕ ಉತ್ಪನ್ನವೇ 'ಧರ್ಮ'. ಸಾಮಾಜಿಕ-ಆರ್ಥಿಕ ಸಂಗತಿಗಳು ನಂತರದಲ್ಲಿ ತಳಕುಹಾಕಿಕೊಳ್ಳುತ್ತವೆ. ಮಾನವ ಸಮಾಜದ ವಿಕಾಸದ ಹಾದಿಯಲ್ಲಿ ಇದೊಂದು ಸಹಜವಾದ ಬಹುಮುಖ್ಯವೆನಿಸಿದ ಉತ್ಪನ್ನ. ಪ್ರಕೃತಿಯೊಡನೆ ಮಾನವನ ಸಹಭಾಗಿತ್ವವು ಅನೇಕ ವಿಸ್ಮಯಗಳನ್ನು, ಅನೇಕ ಭಯಗಳನ್ನು, ಅನೇಕ ಪ್ರಶ್ನೆಗಳನ್ನು ಮುಖಾಮುಖಿಯಾಗಿಸುತ್ತದೆ.

ಎಂ. ಸಿ. ಡೋಂಗ್ರೆ

೧. ಧಾರ್ಮಿಕ ಆಚರಣೆಗಳಿಂದಾಗುವ ಪ್ರಯೋಜನಗಳಲ್ಲಿ ಶ್ರದ್ಧೆ, ನಂಬಿಕೆ.
೨. ಪರಂಪರೆಯನ್ನು ರಕ್ಷಿಸಬೇಕೆನ್ನುವ ಕಾತುರ.
೩. ಧಾರ್ಮಿಕ ಆಚರಣೆಗಳ ಮೂಲಕ ಹಳೆಯ ಉನ್ನತ ಆದರ್ಶಗಳನ್ನು ಮುಂದಿನ ಪೀಳಿಗೆಯವರಲ್ಲೂ ಉಳಿಸಿಕೊಂಡು ಹೋಗಬಹುದೆಂಬ ಆಕಾಂಕ್ಷೆ.

ಅದೇ ರೀತಿಯಲ್ಲಿ 'ಧಾರ್ಮಿಕ ನಂಬುಗೆ'ಗಳಲ್ಲೂ ಅನೇಕ ಛಾಯೆಗಳಿವೆ :

(ಅ) ದೇವತೋಪಾಸನೆ, ಮಾಟ-ಮಂತ್ರ-ತಂತ್ರಗಳಲ್ಲಿ ನಂಬಿಕೆ.
(ಆ) ತನ್ನ ಜಾತಿ/ಧರ್ಮಕ್ಕನುಸಾರವಾಗಿ ನಂಬುಗೆಗಳು ಹಾಗೂ ಆಚರಣೆಗಳು.
(ಇ) ಮಾಮೂಲಿ ದೇವರ ಕಲ್ಪನೆಯಲ್ಲಿ ನಂಬಿಕೆಯಿಲ್ಲದಿರುವುದು. ಆದರೆ ಯಾವುದೋ ಒಂದು 'ಪ್ರಬಲ ಪ್ರಜ್ಞೆ' ಅಥವಾ 'ಶಕ್ತಿ' ಈ ಜಗತ್ತನ್ನು ನಡೆಸುತ್ತಿದೆ. ಆದರೆ ಅದು ದಿನನಿತ್ಯದ ಮಾನವ ವ್ಯವಹಾರಗಳಲ್ಲಿ ತಲೆ ಹಾಕುವುದಿಲ್ಲ ಎಂಬ ನಂಬಿಕೆ. ಇಂತಹವರು ಜಾತಿ/ಕೋಮುವಾದಿಗಳಾಗಿರುವುದಿಲ್ಲ, ವೈಜ್ಞಾನಿಕ ದೃಷ್ಟಿಕೋನ ಉಳ್ಳವರಾಗಿರುತ್ತಾರೆ. ಮನೆಯವರ ಒತ್ತಾಸೆಯಿಂದ ಕೆಲವು ಧಾರ್ಮಿಕ ಆಚರಣೆಗಳನ್ನು ನಡೆಸುವವರೂ ಇದ್ದಾರೆ.
(ಈ) ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಕೆಲವು ಧಾರ್ಮಿಕ ಆಚರಣೆಗಳನ್ನು ನಡೆಸುತ್ತಾರೆ – ವ್ಯಕ್ತಿಗತ ವಿಷಯಗಳಿಗೆ ಅಥವಾ ಅತಿ ಆಪ್ತರ ಒಳಿತಿಗಾಗಿ – ಉಳಿದ ವೇಳೆಯಲ್ಲಿ ವೈಚಾರಿಕತೆಯ ಪ್ರತಿಪಾದಕರಾಗಿರುತ್ತಾರೆ. ಅತಿಯಾಗಿ ಕಾಡುವ ಅಭದ್ರತೆ, ಮಾನಸಿಕ ತುಮುಲಗಳು, ಅನಾರೋಗ್ಯ, ಅಪಾರವಾದ ಆರ್ಥಿಕ ಮುಗ್ಗಟ್ಟುಗಳು ಇತ್ಯಾದಿ ಕಾರಣಗಳನ್ನು ನೀಡಬಹುದು. ಬಂಡವಾಳಶಾಹಿ ಪದ್ಧತಿಯ ಬೆಳವಣಿಗೆಯೊಂದಿಗೆ, ವೈಜ್ಞಾನಿಕ ಸಂಶೋಧನೆಗಳ ಬೆನ್ನಲ್ಲಿ ಹಾಗೂ ಸಮಾಜದ ಅನೇಕ ವೃಂದಗಳು ''ಸಂಸ್ಕೃತೀಕರಣ'' ಗೊಳ್ಳುತ್ತಿರುವ ಹಿನ್ನೆಲೆಯಲ್ಲಿ ''ಏಕರೂಪ ಧಾರ್ಮಿಕ ನಂಬುಗೆ ಹಾಗೂ ಧಾರ್ಮಿಕ ಆಚರಣೆಗಳು'' ನಮ್ಮಲ್ಲಿ ಮೂಡಿಬರುತ್ತಿವೆ. ಸಂಘ ಪರಿವಾರದವರ ಬೆಳವಣಿಗೆಗೆ ಈ ಸಂಗತಿಗಳು ಪ್ರಮುಖ ಪಾತ್ರವಾಗಿ ಹೊರಹೊಮ್ಮಿದೆ ಎಂಬುದನ್ನು ಗಮನಿಸಬೇಕು.




**ಸವಾಲುಗಳು ಹಾಗೂ ಪರಿಹಾರೋಪಾಯಗಳ ಕಡೆಗೆ ಪ್ರಯತ್ನ**

ಈ ಮೇಲಿನ ಅವಲೋಕನದಿಂದ ಕೆಲವು ತೀರ್ಮಾನಗಳಿಗೆ ಬರಬಹುದು :

೧. 'ಧರ್ಮ'ವೆಂಬುದು ಸುಲಭವಾಗಿ ನಶಿಸಿಹೋಗುವಂತಹುದಲ್ಲ.
೨. ವಿಚಾರವಾದಿಗಳು ಎನಿಸಿಕೊಂಡವರು ಧಾರ್ಮಿಕ ನಂಬುಗೆ ಹಾಗೂ ಧಾರ್ಮಿಕ ಆಚರಣೆಗಳನ್ನು ಖಂಡಿಸುತ್ತಾ ಬರುತ್ತಿದ್ದಾರೆಯೇ ವಿನಾ ಇವುಗಳಿಗೆ ಬದಲಿ-ಪರಿಹಾರಗಳನ್ನು ಜನಪರ ಹಾಗೂ ಜನಪ್ರಿಯ ಮಟ್ಟದಲ್ಲಿ ಇಡದೇ ಇರುವುದರಿಂದ ಇಂದು ಫ್ಯಾಸಿಸ್ಟ್ ಶಕ್ತಿಗಳು ಜನರನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತಿದ್ದಾರೆ.

ಯಾವ ರೀತಿಯಲ್ಲಿ ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ 'ಲಿಬರೇಶನ್ ಥಿಯೋಲಜಿ' ಉದಯವಾಯಿತೋ ಅದೇ ರೀತಿಯ ಆಕಾಂಕ್ಷೆಗಳನ್ನು ಹೊತ್ತ ಒಂದು ಹೊಸ ಧಾರ್ಮಿಕ ಜೀವನ ಪದ್ಧತಿಯನ್ನು ನಮ್ಮಲ್ಲಿ ಬದಲಿ-ಪರಿಹಾರವಾಗಿ ನೀಡಬೇಕಾಗಿದೆ. ಕರ್ನಾಟಕದಲ್ಲಿ ಮೂಡಿಬಂದ ವೀರಶೈವ ಚಳವಳಿಯ ರೀತಿಯಲ್ಲಿ ಬದಲಿ ಜೀವನಶೈಲಿಯನ್ನು ಜನಪ್ರಿಯಗೊಳಿಸಬೇಕಾಗಿದೆ. ಇದಕ್ಕೆ ಅಗತ್ಯವಾದ ವಾಸ್ತವ ಸನ್ನಿವೇಶಗಳು ಸಹ ನಿರ್ಮಾಣಗೊಂಡಿವೆ. ಸ್ಪಷ್ಟ ಕಾರ್ಯಾಚರಣೆಯ ಅಗತ್ಯ ಬಹಳಷ್ಟಿದೆ.

**ಬದಲಿ ಧಾರ್ಮಿಕ ಶೈಲಿಯ ಕೆಲವು ರೂಪರೇಷೆಗಳು**

- ಮಾರ್ಕ್ಸ್‌ವಾದಿ-ತಾತ್ವಿಕ ಬುನಾದಿ; ವೈರುದ್ಧ್ಯಗಳೇ 'ಜನಕ' ಎಂಬ ವಿಚಾರದೊಂದಿಗೆ 'ವಿಕಾಸವಾದ'ದ ಪ್ರತಿಪಾದನೆ.
- ತನ್ನದೇ ಆದ ನಾಗರಿಕ ಸಂಹಿತೆ. ಈ ಹೊಸ ಜೀವನಶೈಲಿಯಿಂದ ಹೊರಗಿನವರಿಗೆ ಆಯಾ ಜಾತಿ/ಧರ್ಮ ಅಥವಾ ಯಾವುದು ಅವರಿಗೆ ಇಷ್ಟವೋ ಆ ನಾಗರಿಕ ಸಂಹಿತೆ ಅನ್ವಯ.
- ಪ್ರತಿ ಸದಸ್ಯನೂ ಜನಪರ ಕಾರ್ಯಗಳಲ್ಲಿ ಹಾಗೂ ಉತ್ಪಾದಕ ಚಟುವಟಿಕೆಗಳಲ್ಲಿ ಇರಲೇಬೇಕೆಂಬ ಕನಿಷ್ಠ ಅರ್ಹತೆ.
- ಸಾಮೂಹಿಕ ಶ್ರಮದಾನ ಕಾರ್ಯಗಳ ಅನುಷ್ಠಾನ; ಸಾಮೂಹಿಕ ಭೋಜನ.
- ಹೊಸ ಧಾರ್ಮಿಕತೆಯ ತತ್ವಗಳ ಕುರಿತು ಭಜನೆಗಳು, ಪೂಜೆ/ಹೋಮ, ಹವನಗಳನ್ನು ನಿರಾಕರಿಸುವುದರ ಜೊತೆಗೆ ಉಪವಾಸ, ಯೋಗ ಮತ್ತು ಧ್ಯಾನಗಳ ಕಡೆಗೆ ಒತ್ತು.
- ಜನರ ಭಾಗವಹಿಸುವಿಕೆಯಿಂದ ವಿದ್ಯಾಕೇಂದ್ರಗಳು, ಸೇವಾಶ್ರಮಗಳನ್ನು ನಡೆಸುವುದು.
- ವರ್ಷಕ್ಕೊಮ್ಮೆ ಜಿಲ್ಲಾ ಮಟ್ಟದಲ್ಲಿ ಸಾಂಸ್ಕೃತಿಕ ಹಾಗೂ ಆಟೋಟ ಸ್ಪರ್ಧೆಗಳು.
- ಗ್ರಾಮ ಪಂಚಾಯತ್ ಮಾದರಿಯಲ್ಲಿ ಸಭೆಗಳು ಹಾಗೂ ಕೌನ್ಸಲಿಂಗ್ ವ್ಯವಸ್ಥೆಗಳು.

ಈ ನಾಡಿನ ಬುದ್ಧಿಜೀವಿಗಳೂ ಸಂಘಟನಾ ಕೌಶಲ್ಯವಿರುವವರೂ ಈ ದಿಶೆಯಲ್ಲಿ ಕಾರ್ಯೋನ್ಮುಖರಾಗುವರೆಂದು ಆಶಿಸುತ್ತೇನೆ.

ಎಂ. ಪಿ. ಡೋಂಗ್ರೆ
ಎಲ್. ಐ. ಸಿ. ಆಫ್ ಇಂಡಿಯ, ಹಾಸನ ಶಾಖೆ, ಹಾಸನ

---

೪೫ನೇ ಪುಟದಿಂದ

ಪದ್ಧತಿಯಲ್ಲಿ ''ರಾಜದಂಡದ ಜೊತೆಯಲ್ಲಿ ಪೌರೋಹಿತ್ಯ ದಂಡವು ಸಮಾಜವನ್ನು ತನ್ನ ಭದ್ರಮುಷ್ಟಿಯಲ್ಲಿ ಇರಿಸಿಕೊಳ್ಳುತ್ತದೆ'' ಎಂದು ಸರಿಯಾದ ಮಾತನ್ನೇ ಹೇಳಿದ್ದಾರೆ. ಭಾರತೀಯ ಸಮಾಜದಲ್ಲಿನ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿಯೂ ಇಂದು ಪ್ರತ್ಯೇಕವಾಗಿ ತನ್ನಲ್ಲಿಯೇ ಒಂದು ಪುರೋಹಿತರ ಗುಂಪನ್ನು ಹೊಂದಲು ಯತ್ನಿಸುತ್ತಿದೆ. ಕರ್ನಾಟಕದಲ್ಲಿ ವಿವಿಧ ಒಳಪಂಗಡಗಳಿಗೆ ಪ್ರತ್ಯೇಕ ಧರ್ಮಪೀಠಗಳು ಅಸ್ತಿತ್ವಕ್ಕೆ ಬರುತ್ತಿವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಪಾಳೆಯಗಾರಿಕೆ ಪದ್ಧತಿಯ ರಾಜದಂಡ ಮಾಯವಾದರೂ ಪೌರೋಹಿತ್ಯ ದಂಡ ಪ್ರಬಲವಾಗುತ್ತಿರುವ ಕುರಿತು ಇಂದಿನ ಸಂದರ್ಭದಲ್ಲಿ ಇನ್ನಷ್ಟು ವಿಶ್ಲೇಷಣೆಯ ಅವಶ್ಯಕತೆಯಿದೆ. ಪಾಳೆಯಗಾರಿಕೆ ಪದ್ಧತಿಯಿಂದ ನುಸುಳಿಕೊಂಡು ಬಂಡವಾಳಶಾಹಿಯಲ್ಲಿ ಬಲಿಷ್ಠಗೊಂಡು ಮುಂದುವರೆಯುತ್ತಿರುವ ಈ ಪುರೋಹಿತಶಾಹಿಯ ಪಾತ್ರವೇನು? ಎಂಬುದರ ವ್ಯಾಪಕ ಚಿಂತನೆ ನಡೆಯಬೇಕಿದೆ. ಇಂಥ ಪುರೋಹಿತ ಶಾಹಿಯನ್ನು ಪಳಗಿಸಿಕೊಂಡು ಭಾರತೀಯ ಸಂದರ್ಭದಲ್ಲಿ ಫ್ಯಾಸಿಸಂ ತನ್ನ ಅವತಾರವನ್ನು ಪ್ರಕಟಿಸಲಿರುವ ಕುರಿತು ಎಚ್ಚರಿಕೆ ಬೇಕಿದೆ.

'ಮಿಗತೆಯ ರೂಪಾಂತರಗಳು' ಎಂಬ ಅಧ್ಯಾಯದಲ್ಲಿ ಕೂಲಿ ನೀಡಿ ವ್ಯಕ್ತಿಯೊಬ್ಬನ ಶ್ರಮಶಕ್ತಿಯನ್ನು ಖರೀದಿಸಿ ಕೂಲಿ ಬೆಲೆಗೆ ಮಿಗಿಲಾದ ಏನೆಲ್ಲವನ್ನು ಉತ್ಪಾದನೆ ಮೂಲಕ ಸಾಧಿಸುವ ವ್ಯವಸ್ಥೆ ಮತ್ತು ಇಂಥ ಹೆಚ್ಚಿನ ಎಲ್ಲ ಬಂಡವಾಳಶಾಹಿ ಪಾಲಾಗುವ ವ್ಯವಸ್ಥೆ ಕುರಿತ ವಿಶ್ಲೇಷಣೆ ಚೆನ್ನಾಗಿ ಮೂಡಿಬಂದಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಉತ್ಪಾದನಾ ಸಾಧನಗಳಲ್ಲಿ ಅಗಾಧ ಮಟ್ಟದ ಬೆಳವಣಿಗೆ ಉಂಟಾಗಿ ಶ್ರಮಿಕನ ಶ್ರಮಶಕ್ತಿಯ ಸ್ಥಳದಲ್ಲಿ ಯಂತ್ರಗಳು ಆಕ್ರಮಿಸುವುದು, ಇದರಿಂದಾಗಿ ಶ್ರಮಿಕನ ಶ್ರಮಶಕ್ತಿಗೆ ಬೇಡಿಕೆಯಿಲ್ಲವಾಗಿ ಬಂಡವಾಳವು ಕೆಲಸಕ್ಕೆ ಬಾರದ ಬಂಡವಾಳವಾಗುತ್ತಿರುವಂತೆ ಶ್ರಮಿಕನ ಶ್ರಮಶಕ್ತಿ ಕೂಡ ಕೆಲಸಕ್ಕೆ ಬಾರದ ಶ್ರಮಶಕ್ತಿಯಾಗುತ್ತಿರುವುದು ಒಂದು ವಿಪರ್ಯಾಸದ ಬೆಳವಣಿಗೆ. ಇದರ ಅನಿಷ್ಟ ಪರಿಣಾಮಗಳನ್ನು ತೊಡೆದುಹಾಕಲು ನಿರ್ಗತಿಕ ಜನರೆಲ್ಲ ಒಂದಾಗುತ್ತಾರೆ. ಬಂಡವಾಳ ವಿರುದ್ಧದ ಸಮರದಲ್ಲಿ ಆಗಲೇ ಕಾರ್ಮಿಕ ಚಳವಳಿಯಲ್ಲಿ ತರಬೇತಿ ಹೊಂದಿರುವ ಕಾರ್ಮಿಕವರ್ಗ ಎಲ್ಲ ನಿರ್ಗತಿಕ ಜನಸಮುದಾಯದ ವಿಮೋಚಕರಾಗಿ ನಿಲ್ಲುವ ಸಾಧ್ಯತೆಯನ್ನು ಪಡೆದುಕೊಂಡಿರುತ್ತದೆ, ಎನ್ನುವುದೇ ಮಾರ್ಕ್ಸ್‌ವಾದದ ಕರಾರುವಾಕ್ಕಾದ ಭರವಸೆಯಾಗಿದೆ. ಮಾರ್ಕ್ಸ್‌ವಾದದ ಈ ಭರವಸೆ ಕಕ್ಕಿಲ್ಲಾಯರ 'ವೈಜ್ಞಾನಿಕ ಸಮಾಜವಾದ – ಒಂದು ಕಿರುನೋಟ' ಕೃತಿಯಲ್ಲಿ ಅರ್ಥಪೂರ್ಣವಾಗಿ ಮೂಡಿಬಂದಿದೆ.

ಆರ್. ಡಿ. ಹಳಿಂಗಳೆ
ವಕೀಲರು, ಗಣಪತಿ ಗಲ್ಲಿ, ಜಮಖಂಡಿ ಅಂಚೆ, ಬಾಗಲಕೋಟೆ ಜಿಲ್ಲೆ

# ಮಾಧ್ಯಮ ಮತ್ತು ಮಾರುಕಟ್ಟೆ ಧರ್ಮಯುದ್ಧ

ನಾ. ದಿವಾಕರ

೨೦೦೪ರ ಲೋಕಸಭಾ ಚುನಾವಣೆಗಳ ಪ್ರಕ್ರಿಯೆ ಮುಗಿದ ನಂತರ ಇಡೀ ದೇಶವು ಅಲ್ಲೋಲಕಲ್ಲೋಲವಾಗುವಂತೆ ಮಾಡಿದ ಎರಡು ವಿಷಯಗಳೆಂದರೆ ಸೋನಿಯಾ ಗಾಂಧಿಯವರ ವಿದೇಶೀ ಮೂಲ ಮತ್ತು ಶೇರು ಮಾರುಕಟ್ಟೆಯ ಕುಸಿತ. ಚುನಾವಣಾ ಫಲಿತಾಂಶಗಳಿಗಿಂತಲೂ ಹೆಚ್ಚಾಗಿ ಮಾಧ್ಯಮಗಳಲ್ಲಿ ಬಿಂಬಿಸಲಾದ ಚಿತ್ರಣ ಶೇರು ಮಾರುಕಟ್ಟೆಯದೇ ಆಗಿತ್ತು. ಗುಜರಾತ್ ಭೂಕಂಪ, ಭೂಪಾಲ್ ಗ್ಯಾಸ್ ದುರಂತ, ಲಾಟೂರ್ ಭೂಕಂಪ ಸಂಭವಿಸಿದಾಗಲೂ ಮಾಧ್ಯಮಗಳು ಈ ರೀತಿ ಪ್ರತಿಕ್ರಿಯಿಸಲಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಬಹುಶಃ ೧೯೯೧ರಿಂದಲೂ ಒಂದೆಡೆ ಹಿಂದುತ್ವ ಇನ್ನೊಂದೆಡೆ ಜಾಗತೀಕರಣ ಪ್ರಕ್ರಿಯೆಗೆ ಪೋಷಣೆ ಪ್ರೋತ್ಸಾಹ ನೀಡುತ್ತಲೇ ಬಂದಿರುವ ಬಹುತೇಕ ಸುದ್ದಿ-ಪ್ರಸಾರ ಮಾಧ್ಯಮಗಳಿಗೆ ಪ್ರಸ್ತುತ ಚುನಾವಣೆಯಲ್ಲಿ ಈ ಎರಡೂ ಅಂಶಗಳನ್ನು ಜನತೆ ತಿರಸ್ಕರಿಸಿರುವುದು ಸಹಿಸಲಾರದ ಪೆಟ್ಟಾಗಿದೆ. ಹಾಗಾಗಿಯೇ ಹಲವಾರು ಚುನಾವಣಾ ಪೂರ್ವ ಸಮೀಕ್ಷೆಗಳೂ ಸಹ ನೈಜ ಚಿತ್ರಣ ನೀಡುವಲ್ಲಿ ವಿಫಲವಾದವು. ಕೊನೆಯ ಘಳಿಗೆಯವರೆಗೂ ಎನ್‌ಡಿಎಗೆ ಜಯ ಖಚಿತ ಎಂದೇ ಬಿತ್ತರಿಸುತ್ತಿದ್ದ, ವಾಜಪೇಯಿಯವರನ್ನು ಮುಂದಿನ ಪ್ರಧಾನಿ ಎಂದೇ ಬಣ್ಣಿಸುತ್ತಿದ್ದ, ಎಡಪಕ್ಷಗಳನ್ನು, ಜಾತ್ಯತೀತ ಜನತಾದಳ ಮುಂತಾದ ಪಕ್ಷಗಳನ್ನು ಕಡೆಗಣಿಸಿದ್ದ, ಜಾಗತೀಕರಣದ ಪ್ರಭಾವವನ್ನು ನಿರ್ಲಕ್ಷಿಸಿದ್ದ, ಮಾಧ್ಯಮಗಳಿಗೆ ೨೦೦೪ರ ಚುನಾವಣಾ ಫಲಿತಾಂಶಗಳು ಸಿಡಿಲು ಬಡಿದಂತಾಗಿದ್ದು ಸ್ವಾಭಾವಿಕವೇ. ಈ ಸನ್ನಿವೇಶದಲ್ಲಿಯೇ ಕಾಂಗ್ರೆಸ್ ಸರ್ಕಾರ ಅಧಿಕಾರ ವಹಿಸಿಕೊಂಡಿದ್ದು, ಎಡ ಪಕ್ಷಗಳು ಸರ್ಕಾರಕ್ಕೆ ಬೆಂಬಲ ಸೂಚಿಸಿದ್ದು, ಶೇರು ಮಾರುಕಟ್ಟೆಯ ದಲ್ಲಾಳಿಗಳಿಗೆ ನುಂಗಲಾರದ ತುತ್ತಾಗಿ ಪರಿಣಮಿಸಿತು.

ಗಮನಾರ್ಹ ಅಂಶವೆಂದರೆ ಪ್ರಸಾರ-ಸುದ್ದಿ-ಮಾಧ್ಯಮಗಳು ಮತದಾರರ ನಿರ್ಣಯಕ್ಕಿಂತಲೂ ಶೇರು ಮಾರುಕಟ್ಟೆಯ ಏರಿಳಿತಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದು. ಇಡೀ ದೇಶದ ಆರ್ಥಿಕ-ಸಾಮಾಜಿಕ ತಳಹದಿಯೇ ಶೇರು ಮಾರುಕಟ್ಟೆ ಎಂಬಂತೆ ವರ್ತಿಸುವ ಮಾಧ್ಯಮಗಳು ಚುನಾವಣಾ ನಂತರದ ದಿನಗಳಲ್ಲಿ ಬಿತ್ತರಿಸಿದ ಸುದ್ದಿಗಳು ಶ್ರೀಸಾಮಾನ್ಯರು ತಮ್ಮ ನಿತ್ಯಜೀವನದಲ್ಲಿ ಶೇರು ಮಾರುಕಟ್ಟೆಯನ್ನೇ ಬಹುಮಟ್ಟಿಗೆ ಅವಲಂಬಿಸುತ್ತಾರೆ ಎಂಬಂತೆ ಬಿಂಬಿಸಿದವು. ಮೇ ೧೭ರ ಮುಂಜಾನೆ ಮುಂಬೈ ಮತ್ತಿತರ ನಗರಗಳಲ್ಲಿ ಪತ್ರಿಕೆಗಳನ್ನು ಓದಿದವರು ನಮ್ಮ ಇಡೀ ಆರ್ಥಿಕ ವ್ಯವಸ್ಥೆ ಕುಸಿದು ಬಿದ್ದುಬಿಡುತ್ತದೆಯೇ ಎಂದು ಭಾಸವಾಗುವಂತಿತ್ತು. ಟೈಂಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ (ಮೇ ೧೭) ಮುಖಪುಟದಲ್ಲಿ ಶೇರು ಮಾರುಕಟ್ಟೆಯ ಇಳಿತವನ್ನು ಸೆಪ್ಟೆಂಬರ್ ೧೧ರ ಅಮೆರಿಕಾದ ಘಟನೆಗೆ ಹೋಲಿಸಲಾಗಿತ್ತು. ಅಷ್ಟೇ ಸಾಲದೆಂಬಂತೆ ೨೩೪೦೦೦೦೦೦೦೦೦೦ ಎಂದು ಅಂಕಿ ಅಂಶಗಳನ್ನು ದಪ್ಪಕ್ಷರದಲ್ಲಿ ಮುದ್ರಿಸಲಾಗಿತ್ತು. ಇದರ ಅರ್ಥ ಒಂದೇ ದಿನದಲ್ಲಿ ಶೇರುದಾರರ ೨.೩೪ಲಕ್ಷ ಕೋಟಿ ರೂ.ಗಳು ನೀರುಪಾಲಾಯಿತು ಎಂದಷ್ಟೆ. ಈ ನಷ್ಟವನ್ನು ಮುಖಪುಟಗಳಲ್ಲಿ ಎಂಟು ಕಾಲಂಗಳಲ್ಲಿ ಪ್ರಕಟಿಸಿದ ರಾಷ್ಟ್ರೀಯ ಪತ್ರಿಕೆಗಳು ಈ ಆಘಾತವನ್ನು ವ್ಯಂಗ್ಯಚಿತ್ರಗಳ ಮೂಲಕ ಡಬ್ಲ್ಯೂಟಿಸಿ ಕಟ್ಟಡದ ಧ್ವಂಸಕ್ಕೂ ಸಮೀಕರಿಸಿದ್ದವು. ದಲಾಲ್ ರಸ್ತೆ ಶೇರು ವಿನಿಮಯ ಕಟ್ಟಡಕ್ಕೆ ಒಂದು ವಿಮಾನ ಅಪ್ಪಳಿಸಿ ಆ ಕಟ್ಟಡ ಅಗ್ನಿಗೆ ಆಹುತಿಯಾಗುತ್ತಿರುವ ವ್ಯಂಗ್ಯಚಿತ್ರ ಇದು. ಆ ವಿಮಾನದ ಮೇಲೆ ಕಮ್ಯುನಿಸ್ಟ್ ಚಿಹ್ನೆಯಾದ ಕುಡುಗೋಲು-ಸುತ್ತಿಗೆ ಇದ್ದದ್ದು ಅತಿಶಯವೇನಾಗಿರಲಿಲ್ಲ. ಇದಾದ ನಂತರ ಎರಡೇ ದಿನಗಳಲ್ಲಿ ಶೇರು ಮಾರುಕಟ್ಟೆ ಸುಧಾರಿಸಿಕೊಂಡಿದ್ದು ಸೋನಿಯ ಗಾಂಧಿ ಪ್ರಧಾನಿಪಟ್ಟ ನಿರಾಕರಿಸದುದರ ಪರಿಣಾಮಾಗಿ ಶುಭ ಸಂದೇಶ ಎಂಬ ಅಭಿಪ್ರಾಯವನ್ನು ಪತ್ರಿಕೆಗಳು ಮೂಡಿಸಲು ಯತ್ನಿಸಿದವು.

ಇಷ್ಟೆಲ್ಲಾ ನಾಟಕಗಳ ನಡುವೆ ಟೈಂಸ್ ಪತ್ರಿಕೆಯು ''ಸರ್ಕಾರದ ರಚನೆಯ ಪ್ರಕ್ರಿಯೆಯಲ್ಲಿ ಶೇರು ಮಾರುಕಟ್ಟೆ ಯಾವುದೇ ರೀತಿಯ ಪಾತ್ರ ವಹಿಸುವುದು ಪ್ರಜಾತಂತ್ರಕ್ಕಾಗಲೀ ಮುಕ್ತ ಮಾರುಕಟ್ಟೆಗಾಗಲೀ ಹಿತಕರವಲ್ಲ'' ಎಂಬ ಉಪದೇಶವನ್ನು ನೀಡಿದ್ದು ಮರೆಯಲಾಗದು. ಹಾಗೆ ನೋಡಿದರೆ ಪತ್ರಿಕೆಗಳಿಗಿಂತಲೂ ಆರ್ಥಿಕತಜ್ಞರು ನೀಡಿದ ಪ್ರತಿಕ್ರಿಯೆ ಸಂಯಮದಿಂದ ಕೂಡಿತ್ತೆಂದು ಹೇಳಬಹುದು. ಇಡೀ ಪ್ರಕರಣದ ಅವಧಿಯಲ್ಲಿ ಅನೇಕ ಅರ್ಥಶಾಸ್ತ್ರಜ್ಞರ ಈ ತೀವ್ರತರ ಬದಲಾವಣೆಗೆ ಹತ್ತು ಹಲವು ಆಂತರಿಕ ಬಾಹ್ಯ ಕಾರಣಗಳಿವೆ. ಇತರ ದೇಶಗಳ ಮಾರುಕಟ್ಟೆಗಳ ಮೇಲೂ ಇದೇ ಪ್ರಭಾವ ಉಂಟಾಗಿದೆ ಎಂಬ ಅಭಿಪ್ರಾಯವನ್ನೇ ಮಂಡಿಸುತ್ತಿದ್ದುದು ನಮ್ಮ ಪತ್ರಿಕೆಗಳಿಗೆ ಗೋಚರಿಸಲೇ ಇಲ್ಲ. ಏಕೆಂದರೆ ಯಾವುದೇ ವಿಷಯ ಅಷ್ಟು ಸಾಧಾರಣವೆನಿಸಿಬಿಟ್ಟರೆ ಪತ್ರಿಕೆಗಳು ರುಚಿಸುವುದಿಲ್ಲ. ಮುಖ್ಯವಾಹಿನಿಯ ಪತ್ರಿಕೆಗಳು ತಾವು ಪ್ರಕಟಿಸುವ ಯಾವುದೇ ಪ್ರಕರಣವು ಸಂಕೀರ್ಣ ಹಾಗೂ ರಂಜನೀಯವಾಗಿರಬೇಕೆಂದು ಬಯಸುತ್ತವೆ. ನಾಯಕ, ಖಳನಾಯಕ, ಸುಖಾಂತ್ಯ ಅವುಗಳಲ್ಲಿ ಎದ್ದುಕಾಣುತ್ತಿರಲೇಬೇಕು. ಎಂತಲೇ ಈ ಪ್ರಕರಣದಲ್ಲಿ ಪತ್ರಿಕೆಗಳಿಗೆ ಎಡಪಕ್ಷಗಳಲ್ಲಿ ಖಳನಾಯಕ, ಮನಮೋಹನ್ ಸಿಂಗ್‌ರಲ್ಲಿ ನಾಯಕ ಮತ್ತು ಕೊಂಚ ಸುಧಾರಣೆಯ ಸುಖಾಂತ್ಯಗಳನ್ನು ಕಂಡುಕೊಂಡಿದ್ದು ಎಲ್ಲರಿಗೂ ತಿಳಿದ ವಿಷಯ. ಸಾಮಾನ್ಯ ಪ್ರಕರಣಗಳನ್ನೂ ರೋಚಕವಾಗಿ ವರದಿಮಾಡಿ, ಉನ್ಮಾದ ಹುಟ್ಟಿಸಿ, ಪ್ರಚಾರ-ಪ್ರಸಾರ ಸಂಖ್ಯೆ ವೃದ್ಧಿಸಿಕೊಳ್ಳುವ ಮಾಧ್ಯಮಗಳ ತಂತ್ರಕ್ಕೆ ಈ ಸನ್ನಿವೇಶ ಪೂರಕವಾಗಿತ್ತು.

ಪರಿಸ್ಥಿತಿ ತಿಳಿಯಾದ ಮೇಲೆ ಪ್ರಧಾನಿಯವರು ಶೇರು ಮಾರುಕಟ್ಟೆಯ ಏರಿಳಿತಗಳ ಬಗ್ಗೆ ಮಾತನಾಡುತ್ತಾ ಎಡಪಕ್ಷಗಳನ್ನು, ಅಂದರೆ 'ಖಳನಾಯಕರನ್ನು' ಕುರಿತು, ''ನನ್ನ ಅಭಿಪ್ರಾಯದಲ್ಲಿ ಎಡಪಂಥೀಯರೂ ನಮ್ಮೆಲ್ಲರಷ್ಟೆ ದೇಶಪ್ರೇಮಿಗಳು'' ಎಂದು ಹೇಳಿದ್ದು ದೇಶಪ್ರೇಮಿ ಎಂಬ ಪದಕ್ಕೆ ಹೊಸ ಅರ್ಥ ನೀಡಿದಂತಾಗಿದೆ. ಸಂಘ ಪರಿವಾರದ ಹಿಡಿತದಲ್ಲಿದ್ದ ಎನ್‌ಡಿಎ ಸರ್ಕಾರದ ಅವಧಿಯಲ್ಲಿ ಜೈ ಶ್ರೀರಾಂ ಎನ್ನುವುದು ದೇಶಭಕ್ತಿಯ ಕುರುಹು ಎನಿಸಿದ್ದರೆ, ಬಹುಶಃ ಇಂದು ಮಾರುಕಟ್ಟೆಯ ಮೇಲಿನ ಶ್ರದ್ಧೆ ಎಂದರೆ ಅದೇ ದೇಶಭಕ್ತಿ ಎಂಬ ಅಭಿಪ್ರಾಯ ಪ್ರಚಲಿತವಾಗಿರುವಂತಿದೆ.

ನಮ್ಮ ದೇಶದಲ್ಲಿ ಶೇ. ೬೫ರಷ್ಟು ಜನ ಕೃಷಿಯನ್ನೇ

೨೦೦೪ರಲ್ಲಿ ಜರುಗಿದ ಲೋಕಸಭಾ ಚುನಾವಣೆಗಳ ಪ್ರಕ್ರಿಯೆ ಮುಗಿದ ನಂತರ ಇಡೀ ದೇಶವು ಅಲ್ಲೋಲ ಕಲ್ಲೋಲವಾಗುವಂತೆ ಮಾಡಿದ ಎರಡು ವಿಷಯಗಳೆಂದರೆ ಸೋನಿಯಾ ಗಾಂಧಿಯವರ ವಿದೇಶೀ ಮೂಲ ಮತ್ತು ಶೇರು ಮಾರುಕಟ್ಟೆಯ ಕುಸಿತ. ಚುನಾವಣಾ ಫಲಿತಾಂಶಗಳಿಗಿಂತಲೂ ಹೆಚ್ಚಾಗಿ ಮಾಧ್ಯಮಗಳಲ್ಲಿ ಬಿಂಬಿಸಲಾದ ಚಿತ್ರಣ ಶೇರು ಮಾರುಕಟ್ಟೆಯದೇ ಆಗಿತ್ತು. ಗುಜರಾತ್ ಭೂಕಂಪ, ಭೂಪಾಲ್ ಗ್ಯಾಸ್ ದುರಂತ, ಲಾಟೂರ್ ಭೂಕಂಪ ಸಂಭವಿಸಿದಾಗಲೂ ಯಾವ ಮಾಧ್ಯಮಗಳೂ ಈ ರೀತಿ ಪ್ರತಿಕ್ರಿಯಿಸಲಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

ಅವಲಂಬಿಸಿದ್ದಾರೆ. ಅದೇ ವೇಳೆ ದೇಶದ ೧೮೦ ದಶಲಕ್ಷ ಕುಟುಂಬಗಳಲ್ಲಿ ಶೇ. ೧.೧೫ರಷ್ಟು ಜನ ಶೇರು ಮಾರುಕಟ್ಟೆ ವಹಿವಾಟುಗಳಲ್ಲಿ ಭಾಗವಹಿಸುತ್ತಾರೆ. ಆದರೂ ನಮ್ಮ ಮಾಧ್ಯಮಗಳು ಸಾವಿರಾರು ರೈತರ ಆತ್ಮಹತ್ಯೆಗಳಿಗಿಂತಲೂ, ಶೇರು ಮಾರುಕಟ್ಟೆಯ ಏರಿಳಿತಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡುವುದು ಶೋಚನೀಯ. ಪತ್ರಿಕೆ-ದೃಶ್ಯ ಮಾಧ್ಯಮಗಳ ಈ ಆಷಾಢಭೂತಿತನದಿಂದಲೇ ನಮ್ಮಲ್ಲಿ ಮಾರುಕಟ್ಟೆಗಳಿಗೆ ಹೆಚ್ಚು ಪ್ರಾಮುಖ್ಯತೆ ದೊರೆತಿದ್ದು, ಸಾಮಾನ್ಯ ಜನರು ಮಾರುಕಟ್ಟೆ ಆಕರ್ಷಣೆಗೆ ಮಾರುಹೋಗುತ್ತಿದ್ದಾರೆ. ಮಧ್ಯಮ ವರ್ಗಗಳಿಗಂತೂ ಈಗ ಶೇರುವ್ಯವಹಾರ ದಿನನಿತ್ಯದ ಸುಪ್ರಭಾತವಾಗಿದೆ.

ಮಾಧ್ಯಮಗಳ ಈ ಮಾರುಕಟ್ಟೆ ಪರ ನೀತಿ ಹಲವಾರು ಆರ್ಥಿಕ ತಜ್ಞರ ಟೀಕೆಗೆ ಗುರಿಯಾಗಿದೆ. ಪ್ರೊಫೆಸರ್ ಜಯತಿ ಘೋಷ್ ಅವರ ಅಭಿಪ್ರಾಯದಲ್ಲಿ ''ಭಾರತೀಯ ಶೇರು ಮಾರುಕಟ್ಟೆಯಲ್ಲಿ ಹಣಕಾಸು ಸಂಸ್ಥೆಗಳು, ದೊಡ್ಡ ಕಾರ್ಪೊರೇಟ್ ಉದ್ದಿಮೆಗಳು, ಮತ್ತು ವಿದೇಶೀ ಸಾಂಸ್ಥಿಕ ಬಂಡವಾಳಿಗರು ಮುಖ್ಯವಾಗಿ ಬಂಡವಾಳ ಹೂಡಿಕೆಯಲ್ಲಿ ತಮ್ಮದೇ ಆಧಿಪತ್ಯ ಸಾಧಿಸುತ್ತಾರೆ. ಕೇವಲ ಒಂದು ಸಣ್ಣ ಪ್ರಮಾಣದ ಶೇರುಗಳ ಅಂಶವು ನಿತ್ಯ ವ್ಯವಹಾರಗಳಿಗೆ ಸೀಮಿತವಾಗಿರುತ್ತದೆ ಅಷ್ಟೆ. ಏನೇ ಲಾಭ ನಷ್ಟಗಳಾದರೂ ಅದು ಕೇವಲ ಪುಸ್ತಕದ ಹಾಳೆಗಳ ಮೇಲಿರುತ್ತದೆಯೇ ಹೊರತು ದೇಶದ ಸಂಪತ್ತನ್ನು ಅವು ಪ್ರತಿಬಿಂಬಿಸಲಾರವು.'' ಶೇರು ಮಾರುಕಟ್ಟೆಗಳು ನಿಜವಾದ ಆರ್ಥಿಕ ಸಾಧನೆಗಳ ಸೂಚಕವಲ್ಲ ಎಂದು ಆರ್ಥಿಕತಜ್ಞರು ಅಭಿಪ್ರಾಯಪಡುತ್ತಾರೆ.

ಶೇರು ಮಾರುಕಟ್ಟೆಯ ಈ ಕಲ್ಪನೆಯ ಹಿಂದೆ ಇರುವುದು ಮಾರುಕಟ್ಟೆಯ ಸಿದ್ಧಾಂತ. ಮಾರುಕಟ್ಟೆ ಸಿದ್ಧಾಂತವು ಒಂದು ವ್ಯಾಪಕ ರಾಜಕೀಯ ಪರಿಕಲ್ಪನೆ. ಮಾರುಕಟ್ಟೆ ಮತ್ತು ಪ್ರಜಾಪ್ರಭುತ್ವದ ನಡುವಿನ ಸಂಘರ್ಷ ನಿರಂತರವಾಗಿ ನಡೆದೇ ಇರುತ್ತದೆ. ಹಾಗಾಗಿಯೇ ಪಾಶ್ಚಿಮಾತ್ಯ ಬಂಡವಾಳಶಾಹಿ ದೇಶಗಳೂ ನಮ್ಮ ಚುನಾವಣೆಗಳ ಮೇಲೆ ನಿಗಾ ಇಡುತ್ತವೆ.

ಇಲ್ಲಿನ ಬಹುತೇಕ ಮಾರುಕಟ್ಟೆ ಜಿಹಾದಿಗಳು ಹುತಾತ್ಮರಾಗಲು ಬಯಸುತ್ತಿರುವುದನ್ನೂ ಕಾಣಬಹುದಾಗಿದೆ. ಈ ಹುತಾತ್ಮ-ಮಹಾತ್ಮರ ಅಭಿಪ್ರಾಯದಲ್ಲಿ ಮಾರುಕಟ್ಟೆಯಲ್ಲಿ ವಿಶ್ವಾಸ ವಿಲ್ಲದಿದ್ದವರು ಜೀವಿಸುವ ಹಕ್ಕನ್ನೇ ಕಳೆದುಕೊಂಡುಬಿಡುತ್ತಾರೆ. ಮಾರುಕಟ್ಟೆಗೆ ವಿರುದ್ಧವಾಗಿ ನಡೆದುಕೊಳ್ಳುವ ಯಾವ ಸರ್ಕಾರವೂ ಊರ್ಜಿತವಾಗುವುದಿಲ್ಲ ಎಂದು ಪ್ರತಿಷ್ಠಿತ ಪತ್ರಿಕೆಯ ಸಂಪಾದಕರೊಬ್ಬರು ಹೇಳಿರುವುದು ದಲಾಲ್ ಸ್ಟ್ರೀಟ್‌ನ ಸಂವೇದನೆಯನ್ನು ಪ್ರತಿಬಿಂಬಿಸುತ್ತದೆ. ಇದೇ ನಿಟ್ಟಿನಲ್ಲಿ ಪತ್ರಿಕೆಗಳ ಹಲವಾರು ಸಂಪಾದಕೀಯಗಳಲ್ಲಿ ಮಾರುಕಟ್ಟೆ ಕುಸಿತದ ಬಗ್ಗೆ ನಾನಾ ಬಗೆಯ ಅಭಿಪ್ರಾಯಗಳು ಮೂಡಿಬಂದವು. ಎಲ್ಲ ಊಹಾಪೋಹಗಳ ನಡುವೆಯೂ ಮಾರುಕಟ್ಟೆ ಶೀಘ್ರವಾಗಿ ಕುದುರಿಕೊಂಡಿದ್ದು, ಈ ಮಾರುಕಟ್ಟೆ ಪೂಜಾರಿಗಳಿಗೆ ಮತ್ತೆ ಜೀವ ಬಂದಂತಾಗಿತ್ತು.

ಇಲ್ಲಿ ಉದ್ಭವಿಸುವ ಮುಖ್ಯ ಪ್ರಶ್ನೆ ಎಂದರೆ ಈ ಪತ್ರಿಕೆಗಳಲ್ಲಿ ವರದಿಯಾದಂತೆ ಎಷ್ಟು ಜನ ಶ್ರೀಸಾಮಾನ್ಯರು ಮಾರುಕಟ್ಟೆ ಕುಸಿತದಿಂದ ಬಾಧಿತರಾಗಿದ್ದಾರೆ ಎಂಬುದು. ೨.೩೪ಲಕ್ಷ ಕೋಟಿಯಷ್ಟು ಜನಸಾಮಾನ್ಯರ ಹಣ ನೀರುಪಾಲಾಗಿದೆ ಎಂಬ ಶೀರ್ಷಿಕೆಗಳ ಹಿಂದೆ ಮಾಧ್ಯಮ ದೊರೆಗಳ ಪಿತೂರಿ ಏನು ? ಆರ್ಥಿಕ ಸ್ಥಿರತೆಗೂ ಶೇರು ಮಾರುಕಟ್ಟೆಯ ಏರಿಳಿತಗಳಿಗೂ ಯಾವ ರೀತಿಯ ಸಂಬಂಧವಿದೆ ? ೪೦ ಕೋಟಿ ಜನ, ೪೦ ಡಿಗ್ರಿ ಬಿಸಿಲಿನಲ್ಲಿ ಗಂಟೆಗಟ್ಟಲೆ ಸಾಲುಗಟ್ಟಿ ನಿಂತು ಮತದಾನ ಮಾಡಿದ್ದು ಈ ಮಾರುಕಟ್ಟೆಯನ್ನು ರಕ್ಷಿಸಲೆಂದೇ ? ಅಥವಾ ತಮಗೆ ಬೇಕಾದ ಸರ್ಕಾರ ಚುನಾಯಿಸಲೆಂದೇ ? ಮಾರುಕಟ್ಟೆ ಆರ್ಥಿಕತೆ ಸುಧಾರಣೆಗಳ ವಿರುದ್ಧ ಸ್ಪಷ್ಟ ಅಭಿಪ್ರಾಯ ವ್ಯಕ್ತಪಡಿಸಿದ ಜನತೆಯ ಆಶೋತ್ತರಗಳಿಗಿಂತಲೂ, ಮಾರುಕಟ್ಟೆ ಪೂಜಾರಿಗಳ ಅಭಿಪ್ರಾಯ ಮುಖ್ಯವೇ ?

## ಅಗ್ನಿಮುಖಿ

ಗೊಬ್ಬರದ ಕಬ್ಬವನು
ಅಬ್ಬರದ ಕಲ್ಕಿಯನು
ನಿಬ್ಬೆರಗಿನಲಿ ಬಣ್ಣಿಸಿದ ಕವಿಯು ನೀನು
ಕಾಡುಕೋಳಿಯ ಬೇಟೆ
ರೈತನೆದೆ ತುಳಿದ ಕೋಟೆ
ಎಲ್ಲದಕು ದನಿಕೊಟ್ಟ ಸೃಷ್ಟಿಕರ್ತನು ನೀನು

ದೇವರೆದುರಿನ ಮೋಸ
ಮೂಢನಂಬಿಕೆ ಕೋಶ
ಪದರು ಪದರಲಿ ಬಿಡಿಸಿದ ಚಿಂತಕನು ನೀನು
ಶಾಸ್ತ್ರ ಬಂಧನ ಕಳಚಿ
ವಿಶ್ವಚೇತನ ಬೆಳೆಸಿ
ಮತಮತದ ಹೊಟ್ಟಳಿಸಿ ಕಾಳು ತೋರಿದೆ ನೀನು

ಶೋಷಿತರ ಪರ ನಿಂತು
ವೈಚಾರಿಕತೆ ಬಲಿತು
ವಿಜ್ಞಾನ ದೀವಿಗೆಯ ಹಿಡಿದು ನಡೆದೆ
ನೂರು ದೇವರನೆಲ್ಲ ಸರಿಸಿ
ಭರತಮಾತೆಯ ಎದೆಯಲಿರಿಸಿ
ಗಿಡಗಿಡದ ಎಲೆಎಲೆಗೆ ನಡೆದಾಡಿದೆ

ಅರಸುಗಿರಸರ ಅಂಕೆ
ಮಂತ್ರಿ ಮಂಡಳ ಶಂಕೆ
ಹರಿದೊಗೆದು ಹಾರಿದ ಗಗನಮುಖಿ
ಕ್ರಾಂತಿಕಾಳಿಯ ಭಜಿಸಿ
ಪಾಂಚಜನ್ಯ ಮೊಳಗಿಸಿ
ನಡೆಯುಗಲಿಸಿದ ನೀನು ಅಗ್ನಿಮುಖಿ

ಡಾ. ರಂಗಾರೆಡ್ಡಿ ಕೋಡಿರಾಂಪುರ
ಸಿ, ೧೯೪೬, 'ಇರುವಂತೆ', ವಿ.ವಿ. ಪುರಂ ಬಡಾವಣೆ, ಗೌರಿಬಿದನೂರು - ೫೬೧ ೨೦೮



## ಕೃಷಿಯ ಬೀಡು ಜ್ಞಾನಸಿರಿಯ ಗೂಡು, ಮಾಹಿತಿಯ ಜಾಡು
## ಅದುವೇ ಕನ್ನಡ ನಾಡು

# 49ನೇ ಕರ್ನಾಟಕ ರಾಜ್ಯೋತ್ಸವದ ಶುಭಾಶಯಗಳು

ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಸೌರಭ ಎಲ್ಲೆಡೆ ಸೂಸಲು ಅಹರ್ನಿಶಿ ದುಡಿದ ಎಲ್ಲ ಸಾಹಿತಿ, ಕವಿ, ಕಲಾವಿದ, ಬರಹಗಾರ ಚೇತನಗಳಿಗೆ ನಾಡಿನ ಜನತೆಯ ಗೌರವ ನಮನ.

### ಸಾಂಸ್ಕೃತಿಕ ಪರಂಪರೆಯ ಘೋಷಣೆ

- ಸಮಗ್ರ ವಚನ ಸಾಹಿತ್ಯವನ್ನು ಪುಸ್ತಕ, ಸಿ.ಡಿ.ಯಲ್ಲಿ ಅಳವಡಿಸಲಾಗುವುದು. 1,000 ವಚನ ಗೀತೆಗಳನ್ನು ಸಂಗೀತಕ್ಕೆ ಅಳವಡಿಸಿ ಸಿ.ಡಿ. ರೂಪದಲ್ಲಿ ತರಲಾಗುವುದು. ಎಲ್ಲಾ ಕಲೆಗಳನ್ನು ಒಂದೇ ಸೂರಿನಡಿ ತರುವ ಕಲಾಗ್ರಾಮ ಯೋಜನೆ.
- ರಾಷ್ಟ್ರಕವಿ ಕುವೆಂಪು ಅವರ ಜನ್ಮ ಶತಮಾನೋತ್ಸವದ ಅಂಗವಾಗಿ ಅನುಷ್ಠಾನಗೊಂಡಿರುವ ಕೆಲವು ಯೋಜನೆಗಳು. 1. ದಿನಾಂಕ : 29.12.2003ರಿಂದ ದಿನಾಂಕ 28.12.2004ರವರೆಗಿನ ಅವಧಿಯನ್ನು ವಿಶ್ವಮಾನವ ವರ್ಷ ಎಂದು ಘೋಷಿಸಲಾಗಿದೆ. 2. 'ಜಯಭಾರತ ಜನನಿಯ ತನುಜಾತೆ' ಗೀತೆಯನ್ನು ನಾಡಗೀತೆಯಾಗಿ ಘೋಷಿಸಲಾಗಿದೆ. 3. ಶ್ರೀ ರಾಮಾಯಣ ದರ್ಶನಂ ಕೃತಿಯ ಇಂಗ್ಲಿಷ್ ಭಾಷಾಂತರವನ್ನು ಪ್ರಕಟಿಸಲಾಗಿದೆ. 4. ಕುವೆಂಪು ಅವರ ಭಾವಚಿತ್ರವಿರುವ ಅಂಚೆ ಕವರುಗಳನ್ನು ಬಿಡುಗಡೆ ಮಾಡಲಾಗುವುದು.
- ದಿನಾಂಕ 23.10.2004ರಂದು ಚಿತ್ರಕಲಾ ಪರಿಷತ್‌ನಲ್ಲಿ ಡಾ॥ ರೋರಿಕ್ ಶತಮಾನೋತ್ಸವದ ಉದ್ಘಾಟನಾ ಸಮಾರಂಭವನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು. ಸಂರಕ್ಷಿತ ರೋರಿಕ್ ನಿವಾಸವನ್ನು ಸಾರ್ವಜನಿಕ ವೀಕ್ಷಣೆಗೆ ತೆರೆಯಲಾಗಿದೆ. ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕಲಾಕೃತಿಗಳ ಪ್ರದರ್ಶನ ಹಾಗೂ ಕಲಾ ಶಿಬಿರಗಳು, ಸಾಂಸ್ಕೃತಿಕ ಡೈರೆಕ್ಟರಿ: ರಾಜ್ಯಾದ್ಯಂತ ಎಲ್ಲಾ ಜಾನಪದ ಮತ್ತು ಇತರ ಕಲಾವಿದರ ಮಾಹಿತಿ ಕಂಪ್ಯೂಟರ್‌ನಲ್ಲಿ ಅಳವಡಿಕೆ (ಪ್ರಾಚ್ಯವಸ್ತುಗಳ ಡೈರೆಕ್ಟರಿ ಮೂಲಕ ರಾಜ್ಯದ ಮೂರು ಸಾವಿರಕ್ಕೂ ಹೆಚ್ಚು ಐತಿಹಾಸಿಕ ಸ್ಮಾರಕಗಳು ಹಾಗೂ ಎಲ್ಲಾ ವಸ್ತುಸಂಗ್ರಹಾಲಯಗಳ ಬಗ್ಗೆ ಮಾಹಿತಿ ಹಾಗೂ ಭಾವಚಿತ್ರಗಳು ಕಂಪ್ಯೂಟರ್‌ನಲ್ಲಿ ಅಳವಡಿಕೆ).
- ಯುವಜನರಲ್ಲಿ ನಾಡಿನ ಸಂಸ್ಕೃತಿಯ ಬಗ್ಗೆ ಒಲವು ಹಾಗೂ ಹೆಮ್ಮೆ ಮೂಡಿಸಲು ರಾಷ್ಟ್ರೀಯ ಸೇವಾ ಯೋಜನೆಯ ಒಂದು ಲಕ್ಷ ವಿದ್ಯಾರ್ಥಿಗಳನ್ನು ಸ್ಮಾರಕಗಳ ರಕ್ಷಣೆಯಲ್ಲಿ ತೊಡಗಿಸುವುದು.

ಕನ್ನಡಕ್ಕೆ ಹೆಚ್ಚಿನ ಒತ್ತಾಸೆ

- 1ರಿಂದ 10ನೇ ತರಗತಿಯವರೆಗಿನ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಬಿ.ಇ, ಎಂ.ಬಿ.ಬಿ.ಎಸ್. ಮತ್ತು ಬಿ.ಡಿ.ಎಸ್. ಕೋರ್ಸುಗಳ ಪ್ರವೇಶದಲ್ಲಿ ಶೇ. 5ರಷ್ಟು ಸಮಾನಾಂತರ ಒಳ ಮೀಸಲಾತಿ.
- ವೃತ್ತಿ ಶಿಕ್ಷಣ ಮತ್ತು ಉನ್ನತ ಶಿಕ್ಷಣದ ಇತರೆ ಕೋರ್ಸುಗಳಿಗೂ ಶೇ. 5ರಷ್ಟು ಸಮಾನಾಂತರ ಮೀಸಲಾತಿಯ ವಿಸ್ತರಣೆ.
- 1 ರಿಂದ 10ನೇ ತರಗತಿಯವರೆಗಿನ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಸರಕಾರಿ ಉದ್ಯೋಗಗಳಲ್ಲಿ ಶೇ. 5ರಷ್ಟು ಸಮಾನಾಂತರ ಒಳ ಮೀಸಲಾತಿ.
- ತಾಂತ್ರಿಕ ಮತ್ತು ವೈದ್ಯಕೀಯ ಪದವಿ ಕೋರ್ಸುಗಳ ಮೊದಲ ವರ್ಷದಲ್ಲಿ ಒಂದು ಪಠ್ಯ ವಿಷಯವಾಗಿ ಕನ್ನಡದ ಅಳವಡಿಕೆ.
- ಎಲ್ಲಾ ಮಹಾನಗರ ಪಾಲಿಕೆಗಳಲ್ಲಿ ಕನ್ನಡೀಕರಣಕ್ಕಾಗಿ ಐದು ಅಂಶಗಳ ಸೂಚನೆಯ ಅನುಷ್ಠಾನ.
- ಪದವಿಪೂರ್ವ ತರಗತಿಯಲ್ಲಿ ಐಚ್ಛಿಕ ಕನ್ನಡ ವಿಷಯ ಪ್ರಾರಂಭ.

ಸುವರ್ಣ ಕರ್ನಾಟಕದ ವರ್ಷ : 2006-07


ಕರ್ನಾಟಕ ವಾರ್ತೆ

ಇತ್ತೀಚಿನ ದಿನಗಳಲ್ಲಿ, ವಿಶೇಷವಾಗಿ ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಸಾರ್ವಜನಿಕ ಉದ್ದಿಮೆಗಳು ಶೇರು ಮಾರುಕಟ್ಟೆಯನ್ನು ಪ್ರವೇಶಿಸಿದ ನಂತರ ಹಳ್ಳಿಗಳು ಮತ್ತು ಜಿಲ್ಲಾಕೇಂದ್ರಗಳಲ್ಲೂ ಜನರು ಶೇರುಗಳ ಬಗ್ಗೆ ಹೆಚ್ಚು ಆಸಕ್ತಿ ವಹಿಸುತ್ತಿರುವುದು ಕಂಡುಬರುತ್ತಿದೆ. ಮಾರುಕಟ್ಟೆ ವ್ಯವಹಾರಗಳ ಬಗ್ಗೆ ಪ್ರಾಥಮಿಕ ಮಾಹಿತಿ ಜ್ಞಾನ ಇಲ್ಲದಿದ್ದರೂ ಕೇವಲ ಹೆಚ್ಚು ಲಾಭ ಗಳಿಸುವ ದೃಷ್ಟಿಯಿಂದ ರೈತರು, ಮಧ್ಯಮ ವರ್ಗದ ಜನ, ಕಾರ್ಮಿಕರು ಮತ್ತು ಸಣ್ಣ ವ್ಯಾಪಾರಿಗಳೂ ಶೇರುಗಳಲ್ಲಿ ಹಣ ತೊಡಗಿಸುವ ಪ್ರವೃತ್ತಿ ಈಗ ಸಾಮಾನ್ಯವಾಗುತ್ತಿದೆ. ಇದೂ ಒಂದು ರೀತಿಯಲ್ಲಿ ಜಾಗತೀಕರಣದ ಪರಿಣಾಮವೇ ಆಗಿದೆ. ಹೇಗಾದರೂ ಶೀಘ್ರ ಹಣ ಗಳಿಸುವುದು ಈಗ ಮಧ್ಯಮ ವರ್ಗದ ಮೂಲಮಂತ್ರವಾಗಿದೆ. ದುಡಿದು ಸಂಪಾದಿಸುವುದಕ್ಕಿಂತಲೂ ಹೆಚ್ಚಾಗಿ ಕುಳಿತೆಡೆಯಲ್ಲೇ ಸಂಪಾದಿಸಲು ಆನ್‌ಲೈನ್ ಲಾಟರಿ, ಸರ್ಕಾರದ ಲಾಟರಿ ಯೋಜನೆ, ಒಂದಂಕಿ ಲಾಟರಿಗಳು ಇದ್ದಂತೆ ಶೇರು ಮಾರುಕಟ್ಟೆಯೂ ಇದೆ. ಆದರೆ ಶೇರು ಮಾರುಕಟ್ಟೆ ಇಸ್ಪೀಟ್ ಆಟದಂತೆ, ಜೂಜು ಆಡಿದಂತೆ ಎಂದು ಸಾಮಾನ್ಯ ಜನತೆಯ ಅರಿವಿಗೆ ಬಂದಂತಿಲ್ಲ. ಜೂಜು ಕಟ್ಟೆಯಲ್ಲಿ ನಡೆಯುವ ಪಿತೂರಿಗಳು ಶೇರು ಮಾರುಕಟ್ಟೆಯಲ್ಲೂ ನಡೆಯುತ್ತವೆ. ಆದರೆ ಜಾಗತೀಕರಣ ಪ್ರಕ್ರಿಯೆಯು ಜನಸಾಮಾನ್ಯರನ್ನು ಒಂದು ದಶಕದಷ್ಟು ಕಾಲ ಭ್ರಮೆಗೊಳಪಡಿಸುವುದೇ ಅಲ್ಲದೆ, ಅವರಲ್ಲಿ ಧನಾರ್ಜನೆಯ ಹುಚ್ಚನ್ನು ಹುಟ್ಟುಹಾಕಿದೆ. ಡಾಲರ್ ಗಳಿಸುವ ಆಸೆಯಿಂದ ಮೇಲ್ವರ್ಗದ ಜನ ಲಕ್ಷಾಂತರ ರೂಪಾಯಿಗಳನ್ನು ಸುರಿದು ವಿದೇಶಗಳಿಗೆ ಹೋಗಿ ನೆಲೆಸಿದರೆ, ಮಧ್ಯಮ ವರ್ಗ ಎಲ್ಲಿಗೂ ಸಲ್ಲದವರಂತೆ ಬಾಳುವ ಪರಿಸ್ಥಿತಿಯನ್ನು ಜಾಗತೀಕರಣ ಪ್ರಕ್ರಿಯೆ ನಿರ್ಮಿಸಿದೆ. ಒಂದೆಡೆ ಆರ್ಥಿಕ ಸುಧಾರಣೆಗಳ ಪರಿಣಾಮವಾಗಿ ಉದ್ಯೋಗಾವಕಾಶಗಳು ಕಡಿಮೆಯಾಗುತ್ತಿರುವಂತೆಯೇ ಮಧ್ಯಮ ವರ್ಗಗಳಲ್ಲಿ ಅಭದ್ರತೆ ಹೆಚ್ಚಾಗುತ್ತಲೇ ಹೋಗುತ್ತಿದೆ. ಕೃಷಿ ಕೈಗಾರಿಕೆಗಳಿಂದಾಗಿ ರೈತಾಪಿ ವರ್ಗ ಮತ್ತು ಕಾರ್ಮಿಕ ವರ್ಗಗಳಲ್ಲಿಯೂ ಅಭದ್ರತೆ ಹೆಚ್ಚು ಕಾಣಿಸಿಕೊಳ್ಳುತ್ತಿದೆ. ಆರ್ಥಿಕ ಬಿಕ್ಕಟ್ಟನ್ನು ನೀಗಿಸಲು ಜನ ದಿಢೀರನೆ ಹಣಗಳಿಸುವ ಮಾರ್ಗಗಳನ್ನು ಹುಡುಕುತ್ತಿದ್ದಾರೆ. ಪರಿಣಾಮವಾಗಿ ಈ ಸನ್ನಿವೇಶದಲ್ಲಿ ಜನತೆ ಶೇರು ಮಾರುಕಟ್ಟೆಯತ್ತ ಆಕರ್ಷಿತರಾಗುತ್ತಿದ್ದಾರೆ.

ಇನ್ನೊಂದೆಡೆ ಜಾಗತೀಕರಣ ನೀತಿಯನ್ನು ಜನರ ಗಂಟಲಲ್ಲಿ ತುರುಕುವ ಸರ್ಕಾರಗಳು ತಮ್ಮ ಆರ್ಥಿಕ ನೀತಿಗಳನ್ನು ಶೇರು ಮಾರುಕಟ್ಟೆಗೆ ಪೂರಕವಾಗಿರುವಂತೆಯೇ ರೂಪಿಸುತ್ತಿವೆ. ಭವಿಷ್ಯನಿಧಿಯ ಬಡ್ಡಿದರವನ್ನು ಈಗಾಗಲೇ ಕಡಿಮೆಮಾಡಲಾಗಿದೆ. ಬ್ಯಾಂಕುಗಳಲ್ಲಿ ಠೇವಣಿ ಬಡ್ಡಿದರ, ಅಂಚೆ ಬಡ್ಡಿದರ ಕಡಿಮೆ ಮಾಡಲಾಗಿದೆ. ಅಲ್ಪಸ್ವಲ್ಪ ಉಳಿತಾಯ ಮಾಡಿರುವ ನಿವೃತ್ತ ನೌಕರರು ಉದ್ಯೋಗಿಗಳು ಮಧ್ಯಮವರ್ಗದವರು ಈ ಕಡಿಮೆ ಬಡ್ಡಿಗಿಂತಲೂ ಶೇರು ಮಾರುಕಟ್ಟೆಯೇ ವಾಸಿ ಎಂದು ನಿರ್ಧರಿಸಿಬಿಡುವ ಪರಿಸ್ಥಿತಿ ಉಂಟಾಗಿದೆ. ಐದು ರೂ.ಗಳ ಇನ್‌ಫೋಸಿಸ್ ಶೇರುಗಳು ೬೫೦೦ ರೂಪಾಯಿ




ಎಂದಾದರೆ ತಾವು ತೊಡಗಿಸಿಕೊಳ್ಳುವ ಶೇರುಗಳು ಇದೇ ರೀತಿ ವೃದ್ಧಿಯಾಗಬಹುದೆಂಬ ಆಸೆ ಮಧ್ಯಮ ವರ್ಗದವರನ್ನು ಶೇರು ಮಾರುಕಟ್ಟೆಗೆ ಸೆಳೆಯುತ್ತಿದೆ. ಆದರೆ ಈ ಪೇಪರ್ ಹಣದ ಹಿಂದಿನ ಮಹತ್ವವು ಸಾಮಾನ್ಯರಿಗೆ ಅರಿವಿರಲಾರದು. ಇನ್‌ಫೋಸಿಸ್‌ನ ಬಂಡವಾಳವನ್ನು ಎಲ್ಲಿ ತೊಡಗಿಸಲಾಗುತ್ತಿದೆ ಎಂದು ಎಷ್ಟು ಜನರಿಗೆ ತಿಳಿದಿದೆ ? ಅಥವಾ ದಿನನಿತ್ಯ ಶೇರು ಮಾರುಕಟ್ಟೆಗೆ ಹರಿದು ಬರುವ, ಅಲ್ಲಿಂದ ಹರಿದು ಹೋಗುವ ಕೋಟ್ಯಂತರ ರೂ.ಗಳ ವಹಿವಾಟು ಸಾಮಾನ್ಯ ಜನರಿಗೆ ತಿಳಿದಿರುವುದಿಲ್ಲ. ಇದೇ ಹಣಕಾಸು ಬಂಡವಾಳದ ಜಾಗತೀಕರಣದ ಮುಖ್ಯ ಲಕ್ಷಣವೆಂಬುದನ್ನು ನಾವು ಅರಿಯಬೇಕು. ಕ್ಷಣಾರ್ಧದಲ್ಲಿ ಬಂಡವಾಳ ದೇಶದಿಂದ ದೇಶಕ್ಕೆ ಹಾರಿ ಹೋಗಿರುತ್ತದೆ. ಈ ಬಂಡವಾಳದ ಆಮದು ರಫ್ತುಗಳೇ ಶೇರು ಮಾರುಕಟ್ಟೆಗಳ ಸ್ಥಿರತೆಯನ್ನು ನಿರ್ಧರಿಸುತ್ತವೆ. ಕೇವಲ ಒಬ್ಬ ಬಂಡವಾಳ ಹೂಡಿಕೆದಾರ ಇಡೀ ಶೇರು ಮಾರುಕಟ್ಟೆಯನ್ನು ಅಲ್ಲೋಲಕಲ್ಲೋಲ ಮಾಡುವ ಸಾಮರ್ಥ್ಯ ಹೊಂದಿರುತ್ತಾನೆ. ಒಂದೇ ಒಂದು ಕಾರ್ಪೊರೇಟ್ ಕಂಪೆನಿ ಮಾರುಕಟ್ಟೆಯಲ್ಲಿ ಕೋಲಾಹಲ ಉಂಟುಮಾಡಬಹುದು. ೨೦೦೪ರ ಚುನಾವಣೆಯ ನಂತರ ಆಗಿದ್ದದ್ದೂ ಇದೇ.

ಮಾರುಕಟ್ಟೆಯ ಏರಿಳಿತಗಳನ್ನು ಕೆಲವು ೩೦ ಕಂಪೆನಿಗಳು, ೧೦೦, ೨೦೦, ೫೦೦ ಕಂಪೆನಿಗಳ ವೈಯಕ್ತಿಕ ಏರಿಳಿತಗಳ ಹಾಗೂ ಕೊಂಡು ಮಾರುವ ವ್ಯವಹಾರಗಳ ಸರಾಸರಿಯಂತೆ ಹಲವು ಸೂಚ್ಯಂಕಗಳ ಮೂಲಕ ಗುರುತಿಸುತ್ತಾರೆ. ಆದರೆ ಪ್ರತಿದಿನ ೩೦ ಮತ್ತು ೧೦೦ರ ಬಗ್ಗೆ ಎಲ್ಲಿಲ್ಲದ ಪ್ರಚಾರ ಮಾಡುತ್ತಾರೆ. ವಾಸ್ತವದಲ್ಲಿ ಚುನಾವಣಾ ಫಲಿತಾಂಶ ಹೊರಬಿದ್ದ ದಿನ ೩೦, ೧೦೦ರ ಸೂಚ್ಯಂಕ ಬಿಟ್ಟರೆ, ಮಿಕ್ಕವುಗಳಲ್ಲಿ ಅಂಥ ಆತಂಕಕಾರಿ ಅಂಶಗಳು ಏನೂ ಇರಲಿಲ್ಲ. ದೇಶದ ಆರ್ಥಿಕತೆಯಲ್ಲಿ ಉಳಿತಾಯದ ಪಾತ್ರ ಬಹಳ ಮಹತ್ವದ್ದು. ಇದರಲ್ಲಿ ಸಾಮಾನ್ಯ ಜನರ ಪಾತ್ರವೂ ಅಷ್ಟೇ ಮಹತ್ವದ್ದು. ತಜ್ಞರು ಆರೋಗ್ಯಕರ ಉಳಿತಾಯ ಸೂಚ್ಯಂಕವು ಶೇ. ೩.೬ರಷ್ಟು ಇರಬೇಕೆನ್ನುತ್ತಾರೆ. ಈ ಉಳಿತಾಯಗಳು ಲಾಭದಾಯಕ ಹೂಡಿಕೆಗೆ ಬಳಕೆಯಾದರೆ, ಉಳಿತಾಯ ಮಾಡಿದವರಿಗೆ ಸಾಕಷ್ಟು ಬಡ್ಡಿ ಅದೇ ಮಟ್ಟದಲ್ಲಿ ಉದ್ಯಮದ ಲಾಭ ಮತ್ತು ಜನರಿಗೆ ಉದ್ಯೋಗ ಕಲ್ಪಿಸಲು ಸಾಧ್ಯವಾಗುವುದೆಂದು ನಿರೀಕ್ಷಿಸಬಹುದು. ಜನಬದ್ಧ ಆರ್ಥಿಕ ನೀತಿಯಲ್ಲಿ ಈ ಉಳಿತಾಯವನ್ನು ರಕ್ಷಿಸುವ ಅಂಶವು ಇರುತ್ತಿದ್ದು ಆರ್ಥಿಕ ಸುಧಾರಣೆಯ ಹುಯ್ಲನ್ನು, ನಂಬಲರ್ಹವಾದ ಉಳಿತಾಯ ಮಾರ್ಗಗಳನ್ನೆಲ್ಲಾ ಮುಚ್ಚಿಟ್ಟು ಪರ್ಯಾಯವಿಲ್ಲದೆ ಜನತೆಯ ಉಳಿತಾಯವನ್ನು ಶೇರು ಪೇಟೆಗೆ ದಬ್ಬಲಾಗುತ್ತಿದೆ. ಇದೇನು ಯಕ್ಷಿಣಿಯೋ ಎಂಬಂತೆ ದಿನನಿತ್ಯದ ದಳ್ಳಾಳಿ ವ್ಯಾಪಾರಿಗಳು ಶೇರುಗಳ ಬೆಲೆಗಳನ್ನು ಗಗನಕ್ಕೇರಿಸಿ, ತಾವೇ ಅವುಗಳನ್ನು ದಿಢೀರನೆ ಪಾತಾಳಕ್ಕಿಳಿಸಿ, ಬಡಜನರ ಬಂಡವಾಳವನ್ನು ಕಬಳಿಸುವುದು ಸರ್ವೇಸಾಮಾನ್ಯ. ಈ ದಿನನಿತ್ಯದ ಜೂಜುಕೋರರೇ, ಮುಂದುವರಿದ ಬಂಡವಳಿಗ ರಾಷ್ಟ್ರಗಳಲ್ಲಿ ಅವರ ವ್ಯವಹಾರಗಳ ಮೇಲೆ ಈಗಾಗಲೇ ವಿಧಿಸಲಾಗಿರುವ ಸುಂಕದ ಮೇಲೆ ಅಷ್ಟೊಂದು ಕೂಗೆಬ್ಬಿಸಿದ್ದು. ವಾಸ್ತವದಲ್ಲಿ ಈ ಸುಂಕವನ್ನು ಕೊಡುವವರು ಈ ದಳ್ಳಾಳಿಗಳಲ್ಲ.

ಈ ಶೇರು ಮಾರುಕಟ್ಟೆಯ ಸಂತೆಯಲ್ಲಿ, ಜೂಜುಕಟ್ಟೆಯಲ್ಲಿ ಶ್ರೀಸಾಮಾನ್ಯನ ಪಾತ್ರ ಬಹಳ ಗೌಣವಾದದ್ದೆಂದು ಮಾಧ್ಯಮಗಳು ಇನ್ನಾದರೂ ಅರಿತುಕೊಳ್ಳುವ ಅವಶ್ಯಕತೆ ಇದೆ. ಆದಾಗ್ಯೂ ಮಾಧ್ಯಮಗಳು ಮಾರುಕಟ್ಟೆ ಕುಸಿತಕ್ಕೆ ಪ್ರತಿಕ್ರಿಯಿಸಿದ ರೀತಿ ನೋಡಿದರೆ ಶ್ರೀಸಾಮಾನ್ಯನ ಬಗ್ಗೆ ಅವುಗಳಿಗೆ ಒಂದು ಬಗೆಯ ಸಹಾನುಭೂತಿ ಇರುವುದೆಂಬ ತಪ್ಪು ಕಲ್ಪನೆ ಮೂಡಿಬರಲು ಸಾಕು. ಭವಿಷ್ಯನಿಧಿ ಬಡ್ಡಿದರ ಕಡಿಮೆಯಾದಾಗ, ಬ್ಯಾಂಕು-ಅಂಚೆ ಠೇವಣಿಗಳ ಬಡ್ಡಿ ಇಳಿಸಿದಾಗ, ನಿವೃತ್ತ ನೌಕರರು ತಮ್ಮ ಉಳಿತಾಯದ ಹಣದ ಮೇಲೆ ಹೆಚ್ಚು ಬಡ್ಡಿ ಗಳಿಸದೆ ಪರದಾಡಿದಾಗ, ಅಂಚೆ ಕಛೇರಿಯ ಎನ್‌ಎಸ್‌ಸಿಗಳ ಬಡ್ಡಿ ಕುಸಿದಾಗ, ಇದೇ ಮಾಧ್ಯಮಗಳು ಕೇಕೆಹಾಕುತ್ತಿದ್ದವು. ಭಾರತ ಯೂರೋಪ್‌ನ ಹಾದಿಯಲ್ಲಿ ಸಾಗುತ್ತಿದೆ ಎಂದು ಮಾಧ್ಯಮಗಳು ಪ್ರಶಂಸಿಸುತ್ತಿದ್ದವು. ಆಗ ಶ್ರೀಸಾಮನ್ಯನ ಬಗ್ಗೆ ಇಲ್ಲದ ಕಾಳಜಿ, ಶೇರು ಮಾರುಕಟ್ಟೆ ಕುಸಿದ ಕೂಡಲೆ ಹೇಗೆ ಮೂಡಲು ಸಾಧ್ಯ ? ಶ್ರೀಸಾಮಾನ್ಯರ ಕುರಿತ ವಿಷಯವನ್ನು ಪ್ರಕಟಿಸಲೂ ಹಿಂಜರಿಯುತ್ತಿದ್ದ ಪತ್ರಿಕೆಗಳು ೨೩೪ರ ಮುಂದೆ ೧೦ ಸೊನ್ನೆಗಳನ್ನು ಸೇರಿಸಿ ಗೋಳಿಡುವುದು ಮಾಧ್ಯಮಗಳ ಠಕ್ಕುತನದ ಸ್ಪಷ್ಟ ನಿದರ್ಶನವಷ್ಟೆ. ಬಹುತೇಕ ಪತ್ರಿಕೆಗಳು ಹಾಗೂ ಮಾಧ್ಯಮಗಳ ಒಡೆಯರು ಬಂಡವಾಳದ ಪ್ರತಿನಿಧಿಗಳೇ ಆಗಿದ್ದು, ಇಂತಹ ತೆರೆಮರೆಯ ನಾಟಕಗಳಲ್ಲಿ ಅವರ ಕೈವಾಡವೂ ಇರುವುದು ಸ್ಪಷ್ಟ.

ಇತ್ತೀಚೆಗೆ ಗ್ಲೋಬಲ್ ಟ್ರಸ್ಟ್ ಬ್ಯಾಂಕ್‌ನಲ್ಲಿ ಇಂಥದೇ ವ್ಯವಹಾರ ನಡೆದಿದ್ದು ಅದೆಲ್ಲವೂ ಆಡಳಿತವರ್ಗದ ಖರಾಮತ್ತು ಎಂಬ ಅರಿವಿದ್ದರೂ ರಿಸರ್ವ್ ಬ್ಯಾಂಕ್ ಸಕಾಲದಲ್ಲಿ ಎಚ್ಚರಿಕೆ ವಹಿಸಲಿಲ್ಲ.

ನಾ. ದಿವಾಕರ
ಕೆನರಾ ಬ್ಯಾಂಕ್, ಮಹಾವೀರ ರಸ್ತೆ,
ಬೆಳ್ಳೂರು, ಮಂಡ್ಯ ಜಿಲ್ಲೆ - ೫೭೧ ೪೧೮

# ಮನುಷ್ಯನೇ ನಿನ್ನ ಬೆಲೆಯೆಷ್ಟು!

ಬಿ. ಆರ್. ಪೋಲೀಸ್ ಪಾಟೀಲ

**ಕೆ**ಲ ವರ್ಷಗಳ ಹಿಂದೆ ಅಂದರೆ ಮನುಷ್ಯ ಕೋರ್ಟು ಕಚೇರಿಗಳಲ್ಲಿ ನ್ಯಾಯ ಕೇಳುವುದರ ಬದಲು ಪಂಚಾಯತಿ ಕಟ್ಟೆಯಲ್ಲೇ ನ್ಯಾಯ ಕೇಳುತ್ತಿದ್ದ ಸಂದರ್ಭದಲ್ಲಿ ನಡೆಸಲಾದ ಒಂದು ವಿಚಾರಣೆಯ ಕತೆ ಇದು.

ಹೀಗೊಂದು ಊರು, ಆ ಊರ ಹೊರಗೆ ಒಂದು ಅರಳಿ (ಅಶ್ವತ್ಥ)ಮರ ಅದರ ಸುತ್ತಕಟ್ಟಿದ ಒಂದು ಕಟ್ಟೆ ಅದನ್ನು ಊರ ಜನ ಪಂಚಾಯಿತಿ ಕಟ್ಟೆ ಎಂದು ಕರೆಯುತ್ತಿದ್ದರು. ಒಂದು ದಿನ ಸಂಜೆ ಅಲ್ಲಿ ವಿಚಾರಣೆ ನಡೆಯುತ್ತಿತ್ತು. ಊರಿಗೆ ಊರೇ ಅಲ್ಲಿ ಸೇರಿದ್ದರೂ ಸರಪಂಚ ಎಂಥ ನಿರ್ಣಯ ಕೊಡುತ್ತಾನೆ ನೋಡೋಣ ಎಂದು ಎಲ್ಲ ಉಸಿರು ಬಿಗಿಹಿಡಿದು ಕುಳಿತಿದ್ದರು. ಕಟ್ಟೆಯ ಮೇಲೆ ಹಾಸಿದ ಕಂಬಳಿ – ಅದರ ಮೇಲೆ ನಟ್ಟನಡುವೆ ಕೋಟು, ಕನ್ನಡಕ ಧರಿಸಿದ ಗಂಭೀರ ಮುಖಮುದ್ರೆಯ ಸರಪಂಚ, ಅವನ ಎಡಬಲಕ್ಕೆ ಗೌಡರು, ಇತರ ಪಂಚರು ಕುಳಿತಿದ್ದರು. ಸರಪಂಚನ ಮುಂದೆ ದಫ್ತರಗಳಿದ್ದವು.

''ಇನ್ನು ವಿಚಾರಣೆ ಆರಂಭ ಮಾಡಬಹುದಲ್ಲ?''

ಕನ್ನಡಕ ಸರಿಪಡಿಸಿಕೊಳ್ಳುತ್ತ ಉಳಿದ ಪಂಚರನ್ನೂ ಕೇಳಿದ ಸರಪಂಚ. ಎಲ್ಲರೂ 'ಆಗಲಿ' ಎಂದು ಸಮ್ಮತಿ ಸೂಚಿಸಿದರು. ಸೋಮಣ್ಣ ಅಗಸರ್... ಮೂರುಬಾರಿ ಕೂಗಿದ ಸರಪಂಚ ಎತ್ತರದ ದನಿಯಲ್ಲಿ. ವಿನಮ್ರವಾಗಿ ಕೈಮುಗಿದು ಎದ್ದು ನಿಂತ ಸೋಮಣ್ಣ. ನೀನು ಫಿರ್ಯಾದಿದಾರ – ಹೇಳು ನಿನ್ನ ತಕರಾರೇನು ? ನಿಮಗೆ ಗೊತ್ತಿದ್ದ ಕತೇನ ಅದ ಅದ್ರೀ ತಂದೆ. ಇನ್ನೇನ ಹೇಳ್ಲಿ?

''ನನಗೊಬ್ಬಗ ಗೊತ್ತಿದ್ರೇನಾಯ್ತು? ಎಲ್ಲರಿಗೂ ಗೊತ್ತಾಗಬೇಕಲ್ಲ ಏನ್ ನಡೀತು ಅಂತ ಹೇಳು ಪಂಚರಮುಂದ.''

''ಕುಂತ ನಿಂತ ದೈವಕ್ಕೆಲ್ಲ ಕೈಮುಗದು ಹೇಳ್ತೀನಿ ಕೇಳ್ರಿ. ನನಗ ನ್ಯಾಯ ಕೊಡಸ್ರಿ. ಹೋದವರ್ಷ ಮಾಘ ಮಾಸದೊಳಗ...'' ಹಾಂಗಂದರ ? ಕೇಳಿದ ಒಬ್ಬ ಪಂಚ.

''ಅಂದರ ಜನವರಿ ತಿಂಗಳದೊಳಗ ಅಂದಂಗ'' ಸರಪಂಚನೇ ವಿವರಣೆ ನೀಡಿದ. ''ಹೂಂ ಮುಂದೇನಾಯ್ತು?'' ಆಗ ನಾ ಒಂದು ಕತ್ತೆ ಕೊಂಡುಕೊಂಡೆ. ಅಗಾ ಅಲ್ಲಿ ಕುಂತಾನಲ್ರಿ ಆ ನನ್ನ ಮಗಾ ಮಹಾವೀರ ಕತ್ತಿ ಬ್ಯಾಡ ಸೈಕಲ್ ತಗೊಳ್ಳೂಣು ಅಂದಾ. ನಾನು ಎಂದರ ಸೈಕಲ್ ಹೊಡದೀನೇನ್ರಿ ? ಅದೂ ಈ ಇಳಿವಯಸ್ಸಿನಾಗ ಸೈಕಲ್ ಹೊಡ್ಯಾಕ ಹೋಗಿ ಕಾಲ ಮುರಕೊಂಡರ..

''ಏ ಇದು ವಿಷಯಾಂತರ ಆಯ್ತು. ನೀ ಕಾಲರ ಮುರಕೊ, ಕೈಯರ ಮುರಕೊ ನಮಗೇನು ? ಈಗ ನಿನ್ನ ಕತೆಯೇನು ನಿನಗೇನ ಬೇಕು ಅದನ್ನಷ್ಟ ಹೇಳು'' ಗದರಿಸಿದ ಒಬ್ಬ ಪಂಚ. ''ಹೂಂ ನೀ ಕೊಂಡುತಂದ ಕತ್ತಿಗೇನಾತು ?'' ಕೇಳಿದ ಇನ್ನೊಬ್ಬ. ''ಅದೇ ಹೇಳ್ತೀನಿ ಕೇಳ್ರಿ. ಈಗ ಹತ್ತು-ಹನ್ನೆರಡು ದಿವಸದ ಹಿಂದ ನಾನು ಗೌಡರ ತೋಟದೊಳಗ ಅವರ ಪೇರಲಗಿಡಕ್ಕ ನನ್ನ ಕತ್ತಿ ಕಟ್ಟಿಬಂದಿದ್ದೆ. ಮರುದಿವಸ ಅಲ್ಲಿ ಹೋಗಿ ನೋಡಿದರ ನನ್ನ ಕತ್ತಿ ಮಟಾಮಾಯ ಆಗಿತ್ತು. ಓಡಿಮನೀಗಿ ಬಂದು, ಲೇ ಮಾವೀರಾ, ನಮ್ಮ ಕತ್ತಿ ಕಳದದ ಹುಡಿಕ್ಯಾಡಿಕೊಂಡು ಬಾ ಅಂದರ...''

''ಏನಂದಾ ನಿನ್ನ ಮಗಾ ?'' ಕೇಳಿದ ಸರಪಂಚ.

''ಚಲೊ ಆತು ನೋಡು, ಆ ಕತ್ತಿ ಕಾಯಾಕ ಹೋಗಿ ನಾನs ಕತ್ತಿ ಆಗಿದ್ನಿ. ಅದರ ಸಲುವಾಗಿ ನನ್ನ ಸಾಲೀ ಅರ್ಧಾಕs ಬಿಡಿಸಿದಿ'' ಅಂದಾ... ''ನೋಡ್ರಿ ಎಷ್ಟು ಸೊಕ್ಕು ಅವಗ ? ಕತ್ತೀಕಾಯೂದು, ಬಟ್ಟೆ ಒಗಿಯೂದು ನಮ್ಮ ಕುಲಕಸುಬು. ಲೇ ಮೂರ್ಖಾ, ಹಾಂಗೆಲ್ಲಾ ಧಂಧೆ ಮಾಡಾಕ ಅಸಹ್ಯಪಟ್ಟುಕೊಬಾರದು. ನಾನು ನನ್ನ ಇಡೀ ಜೀವನಾನು ಇದರಾಗs ಕಳದೀನೆಲ್ಲಾ ಅಂದರ...''

''ಹೂಂ ಮುಂದೇನಾತು ಹೇಳು.''

''ನಾನು ಎಷ್ಟು ಹುಡುಕಾಡಿದರೂ ನನ್ನ ಕತ್ತಿ ಸಿಗಲಿಲ್ಲ. ಆಗ ನಮ್ಮ ಮಾವೀರ ಹೇಳಿದಂಗ ಸೈಕಲ್ ತೊಗೊಂಡಿದ್ರ ಚಲೊ ಇತ್ತು ಯಾಕಂದ್ರ ಅದು ಕಾಲಬಿಚ್ಚಿದ ಕತ್ತಿ ಹಾಂಗ ತಿರಿಗಾಡಿಕೊಂತ ಹೋಗಂಗಿಲ್ಲ ಅಂತ ಹಳಹಳಿಸಿದೆ.''

''ಹೂಂ ಈಗರ ಬುದ್ಧಿ ಬಂತಲ್ಲ'' ಎಂದ ಮಹಾವೀರ.

''ಮುಚ್ಚು ಬಾಯಿ ಹುಚ್ಚುನಾಯಿ.. ಎಷ್ಟು ಸೊಕ್ಕಲೇ ನಿನಗ.... ಹೀಂಗ ಒಂದೆರಡು ದಿನಾ ಕಳದ್ವು. ಆಗ ಯಾರೋ ಬಂದು 'ನಿನ್ನ ಕತ್ತಿ ನಿಮ್ಮ ತಮ್ಮ ಈರಪ್ಪನ ಮನಿ ಅಂಗಳದಾಗ ಅದ ನೋಡು' ಅಂತ ಹೇಳಿದರು. ನಾನು ಓಡಿಹೋಗಿ ನೋಡಿದರ ಅಲ್ಲಿ ನನ್ನ ಕತ್ತಿ ಇತ್ತು. ಗೂಟಕ್ಕ ಕಟ್ಟಿದ ಕತ್ತೀನ ಬಿಚ್ಚಾಕ ಬಾಗಿದ್ನಿ ಆಗ ಈ ಈರಪ್ಪ ಬಂದು ಜಾಡಿಸಿ ಒದ್ದಾ... ಅಲ್ಲೆ ಬಾಜೂ ಇದ್ದ ಕಂಬಾ ಹಿಡಕೊಂಡ್ನಿ ಅಂತ ಬಚಾವಾದೆ. ಇಲ್ಲದಿದ್ದರ... ಕಟ್ಟಿ ಕೆಳಗ ಬಿದ್ದು ಸತ್ತ ಹೋಗತಿದ್ನಿ... ಇಷ್ಟಾಗೇತ್ರಿ ನೋಡ್ರಿ.''

''ಹೂಂ ನೀನು ಕೂತುಕೊ...'' 'ಈರಪ್ಪ ಅಗಸರ್, ಈರಪ್ಪ ಅಗಸರ್, ಈರಪ್ಪ ಅಗಸರ್...' ಕೂಗಿದ ಸರಪಂಚ. ಈರಪ್ಪ ಎದ್ದು ನಿಂತು ಪಂಚರಿಗೆ ಕೈಮುಗಿದ.

''ಸೋಮಣ್ಣ ಹೇಳಿದ್ದನ್ನ ಕೇಳಿದೆಲ್ಲ?''

''ಹೂಂನ್ರಿ.''

''ಅದಕ್ಕ ನೀ ಏನ ಹೇಳ್ತಿ ?''

''ಅಂವಾ ನಮ್ಮ ಮನಿ ಒಳಗ ಬಂದು ನನ್ನ ಕತ್ತಿ ಬಿಚಗೊಂಡು ಹೋಗಾಕ ಹತ್ತಿದ್ದಾ, ನಾನು ಅಂವಗ ಒದ್ದದ್ದು ಖರೆ ಆದರಿ.''

''ಅಲ್ಲಪ್ಪಾ ಈರಪ್ಪಾ, ಅದು ನಿಂದು ಕತ್ತಿ ಅಂತ ಹ್ಯಾಂಗ ಹೇಳ್ತಿ ?''

''ಏನರ ಸಾಕ್ಷಿ ಅದ ಏನು ನಿನ್ನ ಹತ್ತಿರ ?'' ಕೇಳಿದ ಒಬ್ಬ ಪಂಚ.

''ಇಲ್ಲೆದಾರಲ್ರಿ ಈ ಮಾಸ್ತರ ಸಾಯಬ್ರು ಅವರಿಗೆ ಗೊತ್ತದ ನೋಡ್ರಿ ಕೇಳ್ರಿ ಅವರ್ನ...''

''ಹೌದ್ರಿ, ಈರಪ್ಪ ಹೇಳೂದು ಖರೆ ಅದ. ಅದು ಅಂವನ ಕತ್ತೀನೆ.''

''ಅಲ್ರೀ ಮಾಸ್ತರ, ಈ ಕತ್ತಿ ಗುರ್ತ ನಿಮಗ್ಹ್ಯಾಂಗ ಸಿಗ್ತದ'' ಎಂದು ಕೇಳಿದ ಸರಪಂಚ ಕುತೂಹಲದಿಂದ.

''ಅಲ್ರೀ ಮತ್ತ ನಾನು ಇಡೀ ದಿವಸ ಏನ್‌ಮಾಡ್ತೀನಿ ಸಾಲ್ಯಾಗ ? ಕತ್ತಿ ಹಿಂಡs ಕಾಯೂದಿಲ್ಲೇನು ?'' ಎಂದರು ಮಾಸ್ತರು.

''ಹಾಂಗಾದ್ರ ಈ ಕತ್ತಿಕಾಯೋರಿಗೆ ಸರಿಯಾಗಿ ಎರಡೂ ಕತ್ತೀ ನೋಡಿಕೊಂಡು ಬಂದು ಯಾವ ಕತ್ತಿ ಯಾರದು ಅಂತ ಹೇಳನ್ರಿ,'' ಎದ್ದುನಿಂತು ಹೇಳಿದ ಮಹಾವೀರ. ಮಾಸ್ತರರ ಸಿಟ್ಟು ಮುಗಿಲು ಮುಟ್ಟಿತು.

''ನೋಡ್ರಿ ಎಷ್ಟು ಸೊಕ್ಕು ಆ ಪೋರಗ. ನನಗ 'ಕತ್ತಿ ಕಾಯಾಂವ' ಅಂತಾನ.''

''ಲೇ ಕುನ್ನಿ, ಬಾಯಿಗಿ ಬಂದದ್ದs ಬೊಗಳಿದರ ಹಿಡದು ಕಪಾಳಿಗೆ ಹೊಡೀತೀನ್ನೋಡು, ಸುಮ್ಮನ ಕುಂದ್ರು'' ಗದರಿಸಿದ ಸೋಮಣ್ಣ ಮಗನಿಗೆ.

''ಅಂವಾ ಏನ ಅನಬಾರದ್ದು ಅಂದಾನ್ರೀ ಮಾಸ್ತರ ? ನೀವು ನಾನು ಸಾಲ್ಯಾಗ ಇಡೀ ದಿನ ಕತ್ತೀ ಕಾಯ್ತೀನಿ ಅಂದ್ರಿ'' ಎಲ್ಲ ಖೊಳ್ಳನೆ ನಕ್ಕರು.

''ಶಾಂತಿ, ಶಾಂತಿ... ಹೂಂ ನೀವು ಆ ಕತ್ತೀ ಗುರ್ತ ಹಿಡೀತೀರೆಲ್ಲ? ಹೋಗ್ರಿ ಹಾಂಗಾದ್ರ ಆ ತೋಟದೊಳಗಿನ ಗಿಡಕ್ಕ ಕಟ್ಟೇದಲ್ಲ ಆ ಕತ್ತಿ ನೋಡಿಕೊಂಡು ಬಂದು ನಿಮ್ಮ ಸಾಕ್ಷಿ ಹೇಳ್ರಿ.''

ಮಾಸ್ತರರು ಕತ್ತೆ ಪರೀಕ್ಷಿಸಲು ಹೋದರು. ನೆರೆದ ಜನ ಗುಜುಗುಜು ಆರಂಭಿಸಿದರು. ಮಾಸ್ತರರು ಮರಳಿ ಬಂದು : ''ಹೌದ್ರಿ ಆ ಕತ್ತಿ ಈರಪ್ಪಂದು'' ಎಂದು ಹೆಳಿದ್ದೇ ತಡ....

''ಶಿವಶಿವಾ ! ಸುಳ್ಳ ಹೇಳವರ ಎದೀಗೆ ಸಿಡ್ಲ ಬಡೀಲಿ, ಅವರ ನಾಲಿಗಿ ಒಣಗಿ ಹೋಗ್ಲಪಾ ದೇವರೇ... ಅಯ್ಯೋ !'' ಎಂದ ಆಕಾಶದತ್ತ ಮುಖಮಾಡಿ ಶಪಿಸಿದ ಸೋಮಣ್ಣ.

''ಏ ಸೋಮಣ್ಣಾ, ನೀ ಹೀಂಗ ಹುಚ್ಚರಾಂಗ ಬಡಬಡಿಸಿದರ ವಿಚಾರಣೆ ಹ್ಯಾಂಗ ಮಾಡೂದು ? ಸ್ವಲ್ಪ ಸಮಾಧಾನ ಮಾಡಿಕೊ... ನಾವಿಲ್ಲೇನು ಯಾವುದು ನ್ಯಾಯ, ಯಾವುದು ಅನ್ಯಾಯ ಅಂತ ಗುರುತಿಸೋರು ? ಸುಮ್ಮನ ಕುಂದ್ರು...'' ಎಂದು ಸಮಾಧಾನಪಡಿಸಿದ ಸರಪಂಚ.

''ಸರಪಂಚರ, ಈ ಮಾಸ್ತರ ಸಾಹೇಬರಿಗೆ ನಂದೊಂದು ಪ್ರಶ್ನೆ – ಈಗೀಗ ಇವರ ಡ್ರೆಸ್ಸು ಯಾಕ ಜಗಮಗಾ ಅಂತ ಹೊಳೀತಾವ ಕೇಳ್ರಿ.''

''ಹಿಂತಾ ಅಸಂಬದ್ಧ ಪ್ರಶ್ನಾ ಕೇಳಿದರ ನಿನ್ನ ಕುತ್ತಿಗಿ ಹಿಡದು ಹೊರಗ ಹಾಕಬೇಕಾದೀತು ಸೋಮಣ್ಣಾ, ನೀನು ಯಾವುದಾದರೂ ಸಾಕ್ಷಿ ಹೇಳಸ್ತಿಯೇನು ?'' ಕೇಳಿದ ಸರಪಂಚ.

''ಇಡೀ ಊರ್ಗೆ ಗೊತ್ತದ ಅದು ನನ್ನ ಕತ್ತಿ ಅಂತ.

ಎಲ್ಲಾರೂ ಮಾಸ್ತರು ಹೇಳಿದಾಂಗ ಸುಳ್ಳಸಾಕ್ಷೀ ಹೇಳಾಂಗಿಲ್ಲ ಯಾರ್ನರ ಕೇಳ್ರಿ...''

''ಅದೆಲ್ಲಾ ನಡಿಯೂದಿಲ್ಲ, ಹಿಂತವರು ಅಂತ ಯಾರದರೆ ಹೆಸರ ಹೇಳು ಅವರನ್ನ ಕೇಳ್ತೀವಿ'' ಎಂದ ಒಬ್ಬ ಪಂಚ.

ಸೋಮಣ್ಣ ಮಾತಾಡಲಿಲ್ಲ.

''ಹೋಗ್ಲಿ ಈ ನೇತಾಜಿ ಅದಾರಲ್ಲ ಅವರ ಮ್ಯಾಲೆ ನಿನಗ ವಿಶ್ವಾಸ ಅದ ಇಲ್ಲೊ ?''

''ಇಲ್ಲ ಅಂತ ನಾಯಾಕ ಅನ್ಲಿರೀ ತಂದೆ... ಕೇಳ್ರಿ ಅವರ್ನ...''

''ನೇತಾಜಿ, ಹೋಗಿ ನೋಡಿಕೊಂಡು ಬಂದು ಹೇಳ್ರಿ ಆ ಕತ್ತೆ ಯಾರದು ಅಂತ...''

''ನಾ ನೋಡೇನ್ರಿ ಸರಪಂಚರ, ಅದು ಸೋಮಣ್ಣನ ಕತ್ತೀ ಹಾಂಗಿಲ್ಲಾ''

''ಶಿವಶಿವಾ ! ಸುಳ್ಳ ಹೇಳಾವರಿಗೆ ಮಹಾರೋಗ ಹತ್ತಲಿ, ಖರೆ ಉಳಸಪ್ಪಾ ತಂದೆ, ನಿನಗ ಒಂದ ತಿಂಗಳ ಪೂರ್ತಿ ಪೂಜ ಮಾಡ್ತೀನಿ ಸಕ್ಕರಿ, ತುಪ್ಪ ನೈವೇದ್ಯ ಹಿಡೀತೀನಿ,'' ಸೋಮಣ್ಣ ಹುಚ್ಚುಹಿಡಿದವರಂತೆ ಬಡಬಡಿಸತೊಡಗಿದ.

''ಏ ಸೋಮಣ್ಣಾ, ಏನ ಹೀಂಗ ಕೂಗಾಡಿದರ ! ಮೊದಲ ಕಣ್ಣ ಮುಂದಿರೊ ಪಂಚರಿಗೆ ಬೇಡಿಕೊ ಆಮ್ಯಾಲ ಇಲ್ಲದ ದೇವರಿಗೆ ಬೇಡಿಕೊಳ್ಳೂವಂತಿ.''

''ನಾನು ಪಂಚರ್ನೂ ದೇವರು ಅಂತ ತಿಳದೀನ್ರೀ ತಂದಿ.''

''ಹಾಂಗಿದ್ರ ಸುಮ್ಮನ ಕುಂದ್ರು.''

''ಸರಪಂಚರ, ಈ ನೇತಾಜಿಯವರ ತೋಟದೊಳಗ ಮೊದಲ ನಮ್ಮ ಕತ್ತಿ ಮೆಯ್ದರೂ ಮೆಯ್ಲಿ ಬಿಡು ಅಂತ ಬಿಡತಿದ್ದರು. ಆದರ ಮೊನ್ನೀ ಇಲೆಕ್ಶನ್‌ದಾಗ ಸೋತಮ್ಯಾಲೆ ನಮ್ಮ ಕತ್ತೀ ಕಣ್ಣಿಗೆ ಬಿದ್ದಕೂಡ್ಲೇ ಬಂದೂಕ ತೊಗೋತಿದ್ದರು... ಯಾಕ ಅಂತ ಕೇಳ್ರಿ !'' ಎಂದ ಮಹಾವೀರ.

''ಏ ಮಹಾವೀರಾ, ಹುಚ್ಚರಾಂಗ ಮಾತಾಡಬ್ಯಾಡ ಕುಂದ್ರು. ಹೂಂ ಸೋಮಣ್ಣಾ ನಿನ್ನ ಮುಂದಿನ ಸಾಕ್ಷಿ ಯಾರು ?''

''ನೇತಾಜಿ ಅವರಾಂಗ ಎಲ್ಲಾರೂ ಹೀಂಗ ಬಣ್ಣಾ ಬದಲಾಯಿಸಿದರ ನಾನು ಯಾರನ್ನ ಕರಕೊಂಡ ಬಂದು ಸಾಕ್ಷಿ ಹೇಳಸ್ಲಿ? ಎಲ್ಲಾರ ತಲೀಮ್ಯಾಲಿರೂ ಆ ಸೂರ್ಯ ಅಂವಾ ಒಬ್ಬನs ನನ್ನ ಸಾಕ್ಷಿ... ಅವನಿಂದs ನನಗ ನ್ಯಾಯ ಸಿಗಬೇಕು...''

''ಸೋಮಣ್ಣಾ, ಏನ ಹುಚ್ಚದಿ ನೀನು ? ಮ್ಯಾಲ್ಲಿಂದ ಸೂರ್ಯ ಕೆಳಗಿಳದು ಬಂದು ಸಾಕ್ಷಿ ಹೇಳ್ತಾನೇನು ? ಪಂಚಾಯ್ತಿ ಇದನ್ನ ನಂಬೂದಿಲ್ಲ'' ಎಂದ ಇನ್ನೊಬ್ಬ ಪಂಚ.

''ನಂಬಲಿಕ್ಕಂದ್ರ ಬಿಡ್ರಿ... ಅಯ್ಯೊ ಶಿವನೆ, ವಿಶ್ವನಾಥನೇ... ನೀನೇ ನೋಡಿಕೋರಪಾ, ಸುಳ್ಳು ಹೇಳಿದವರ ವಂಶ ನಿರ್ವಂಶ ಮಾಡು... ಈ ಪಂಚಾಯ್ತಿಗೆ ದೊಡ್ಡ ನಮಸ್ಕಾರ,'' ಹೊರಟು ನಿಂತ ಸೋಮಣ್ಣನ ಮುಂಗೈ ಹಿಡಿದು ನಿಲ್ಲಿಸಿ ಹೇಳಿದ ಮಹಾವೀರ.

''ಅಪ್ಪಾ, ನೀ ಕಾಲಕಳಕೋಬ್ಯಾಡ ಕುಂದ್ರು. ನಾ ಒಂದು ಸಾಕ್ಷಿ ಕರಕೊಂಡು ಬರ್ತೀನಿ !''

''ಯಾವ ಲೋಕದೊಳಗದೀಯಲೆ ಮಾವೀರಾ, ಈ ಮಾಸ್ತರು, ನೇತಾಜಿ ಇವರಿಗೆ ವಿರುದ್ಧವಾಗಿ ನಿಂತು ನಮ್ಮ ಪರವಾಗಿ ಸಾಕ್ಷಿ ಹೇಳವರು ಯಾರು ಸಿಗ್ತಾರ ?''

''ನೀನು ಸುಮ್ಮನ ಕುಂದ್ರು... ನೋಡು ನಾ ಏನ್ ಮಾಡ್ತೀನಿ ಅಂತ... ಸರಪಂಚರ, ನನ್ನ ಸಾಕ್ಷೀನ ಇಲ್ಲಿಗೆ ಕರಸಾಕ ಅಪ್ಪಣೆ ಕೊಡ್ರಿ...''

''ಆಯ್ತು ಕರಸೋಣಂತ, ಮೊದಲ ನಿನ್ನ ಆ ಸಾಕ್ಷಿ ಹೆಸರೇನು ಹೇಳು.''

ನನ್ನ ಸಾಕ್ಷಿ ಹೆಸರು 'ಟ್ರಕ್ ಸಾಹೇಬ' ಅಂತ್ರಿ.

''ಟ್ರಕ್‌ಸಾಬನಾ ? ಅಂವಾ ಏನ ವಿಲಾಯತಿ ಮನಿಶಾ ಏನು ?''

''ಇಲ್ರಿ ನಮ್ಮೂರಾರವನು.''

''ಆಯ್ತು ಅಂವನ ಹೆಸರ ಬರಕೊಂತೀನಿ... ಹೂಂ, ಎಲ್ಲೆದಾನ ಅಂವಾ ?''

''ಅಲ್ಲೆ ಆ ತ್ವಾಟದಾಗದಾನ್ರಿ''

''ಎಲ್ಲಿ? ಕಾಣಸೂದಿಲ್ಲಲ್ಲ?''

''ನೀವು ಅಂವನ ಹೆಸರಹಿಡದು ಕೂಗೆರನೋಡ್ರಿ.''

'ಮಿಸ್ಟರ್ ಟ್ರಕ್‌ಸಾಹೇಬ' ಎಂದು ಮೂರು ಬಾರಿ ಕುಗಿದಾಗ ತೋಟದೊಳಗಿಂದ ಒಂದು ಕತ್ತೆ ಕಿರುಚತೊಡಗಿತು. ಎಲ್ಲರೂ ಘೊಳ್ಳನೇ ನಕ್ಕರು... ಸರಪಂಚನಿಗೆ ಗಲಿಬಿಲಿಯಾಯಿತು.

''ಇಂವನs ಏನು ನಿನ್ನ ಟ್ರಕ್‌ಸಾಬ ?''

''ಹೌದ್ರಿ... ಬೆನ್ನಮ್ಯಾಲ ಟ್ರಕ್‌ಲೋಡಿನಷ್ಟು ಬಟ್ಟೆ ಹೊರಿಸಿದರೂ ಕಾರು ಓಡಿದಾಂಗ ಓಡ್ತಾನ ಅಂವಾ. ಅದಕ್ಕಂತು ಅಂವಗ ಟ್ರಕ್‌ಸಾಬ್ ಅಂತ ಹೆಸರಿಟ್ಟೇನಿ !''

ವಿವರಿಸಿದ ಮಹಾವೀರ.

''ಓ ನೀರಕೊಟ್ಟ ನಜೀರಸಾಬಗ 'ನೀರಸಾಬ್' ಅಂತ ಹೆಸರಿಟ್ಟಾಂಗ'' ಎಂದ ಒಬ್ಬ ಪಂಚ.

ಆದರ ಅಂವನ ಭಾಷಾ ಯಾರಿಗಿ ಅರ್ಥ ಆಗಬೇಕು ?

''ಮಾಸ್ತರ ಸಾಹೇಬರ, ತಾವು ಇಡೀ ದಿವಸ ಕತ್ತೀ ಕಾಯ್ತೀನಿ ಅಂತ ಸಾಕ್ಷಿ ಹೇಳೀರೆಲ್ಲ, ನಿಮಗರ ಅರ್ಥಾಗ್ತಿರಬೇಕಲ್ಲ ಇಂವನ ಭಾಷಾ ?''

''ನೋಡ್ರಿ ಸರಪಂಚರ ಇಂವಾ ಹ್ಯಾಂಗ ನನ್ನ ತೇಜೋವಧೆ ಮಾಡ್ತಾನ ನೊಡ್ರಿ... ಹಿಂಗs ಏನ್ರಿ ಪಂಚಾಯ್ತಿ ನಡಸೂದು ? ಒಂದು ಕತ್ತೀನ ಸಾಕ್ಷಿ ಅಂತ ಕರಕೊಂಡ ಬಂದು ನನ್ನೊಬ್ಬಂದs ಅಲ್ಲಾ ಇಡೀ ಪಂಚಾಯ್ತೀದು ಮರ್ಯಾದಿ ಹರಾಜ್ ಹಾಕಾಕ ಹತ್ಯಾನ. ಇವನ್ನ... ಸುಮ್ಮನ ಬಿಡಬಾರದು...''

''ಮಾಸ್ತರ ಸಾಹೇಬ್ರ, ಸ್ವಲ್ಪ ಶಾಂತರಾಗ್ರಿ. ಮುಂದೇನಾಗ್ತದ ನೋಡೂಣಲ್ಲ... ಹೂಂ ಮಹಾವೀರ, ನಿನ್ನ ಸಾಕ್ಷೀನ ವಿಚಾರಣೆ ಮಾಡೂದು ಹ್ಯಾಂಗ ?''

''ಬಾಳಂದ್ರ ಬಾಳ ಸರಳದರಿ. ಇಗಾರ್ರಿ ನನ್ನ ಕೊಳ್ಳಾಗಿನ ಈ ಟಾವೆಲ್ಲದ ಅಲ್ಲಾ, ಇದರದು ಹಾರಾ ಮಾಡ್ತೀನಿ... ಇಗಾ ಈ ಹಾರಾ ಒಯ್ದು ಆ ಕತ್ತೀ ಕೊರಳಾಗ ಹಾಕಿ ಬರ್ಲಿ ನಮ್ಮ ಈರಪ್ಪ ಕಾಕಾ...''

''ವಾರೆವಾ ! ಸಲಹೆ ಬಾಳ ಒಳ್ಳೇದ್ದದ. ಹೂಂ ಈರಪ್ಪಾ, ನೀನು ಈ ಟಾವೆಲ್ಲಾರ ಒಯ್ದು ಆ ಕತ್ತಿ ಕೊರಳಾಗ ಹಾಕ್ತೀಯಾ ?''

''ಆಗ್ಲಿ ತರ್ರಿ ಹಾಕಿ ಬರ್ತೀನಿ.'' ಅಂಜುತ್ತಲೆ ಹೆಜ್ಜೆ ಹಾಕಿದ ಈರಪ್ಪ ಕತ್ತೆಯ ಸಮೀಪ ಸುಳಿದ. ಅದರ ಕೊರಳಲ್ಲಿ ಹಾಕಬೇಕೆನ್ನುವಷ್ಟರಲ್ಲೆ ಒಂದು ಸುತ್ತು ಹಾಕಿದ ಕತ್ತೆ ಜಾಡಿಸಿ ಒದೆಯುತ್ತದೆ.

''ಸತ್ನೊಯರಪ್ಪಾ, ಈ ಕತ್ತಿ ನನ್ನ ಕೊಲ್ತದರ್‍ಯೊಯಪ್ಪಾ ನನ್ನ ಮ್ಯಾಲಕ್ಕ ಎತ್ರೊ'' ಕೂಗತೊಡಗಿದ ಈರಪ್ಪ.

''ಯಾಕ, ಈರಪ್ಪ ಕಾಕಾ ಏನಾಯ್ತು ? ಓ ಇನ್ನೂ ಕಾಲಾ-ಕೈ ಗಟ್ಟಿ ಅದಾವ. ಮಂದೀ ಕತ್ತೀ ಕೊರಳಾಗ ಹಾರಾ ಹಾಕಾಕ ಹೋದರ ಅದು ಸುಮ್ಮನ ಇರತದೇನು ?''

''ಗೌಡ್ರ, ಆ ಈರಪ್ಪನ್ನ ಕರೀರಿ ಈ ಕಡೆ, ಅಂವಗೆ ಪೆಟ್ಟ ಬಾಳಾಗಿರಬೇಕು, ಔಷಧ ಹಚ್ಚರಿ... ಹೂಂ ಮಹಾವೀರ ನೀನು ನಿನ್ನ ಟ್ರಕ್‌ಸಾಬನ ಕೊರಳಾಗ ಆ ಹಾರಾ ಹಾಕ್ತೀಯೇನು ? ಹಾಕು ನೋಡೋಣ'' ಎಂದ ಸರಪಂಚ.

ಮಹಾವೀರ ತಡಮಾಡದೆ ಕತ್ತೆಯ ಕೊರಳಿಗೆ ಹಾರ ಹಾಕಿ ಅದರ ಮೇಲೆ ಕುಳಿತುಕೊಂಡೇ ಪಂಚಾಯತಿ ಕಟ್ಟೆ ಬಳಿ ಬಂದ. ಪಂಚರೆಲ್ಲ ಕಚ್ಚೆ ಕಳೆದುಕೊಂಡು ಓಡಾಡತೊಡಗಿದರು.

''ಏ ಏ ಮಹಾವೀರ. ನಿನ್ನ ಟ್ರಕ್‌ಸಾಬನ್ನ ಆ ಕಡೆ ಕರಕೊಂಡ ಹೋಗು ನಮಗೆಲ್ಲಾ ಅಂವನ ಬಗ್ಗೆ ಭಯಾ ಅದ... ಹಾಂ. ಈಗ ಪಂಚಾಯ್ತಿ ತನ್ನ ನಿರ್ಣಯ ಕೊಡ್ತದ ಕೇಳ್ರಿ...''

ಇತರ ಪಂಚರೊಂದಿಗೆ ಸಮಾಲೋಚಿಸಿ ಹೇಳಿದ ಸರಪಂಚ : ''ಈರಪ್ಪನ ಪರವಾಗಿ ಬಾಳಷ್ಟು ಸಾಕ್ಷಿ ಇದ್ದರೂ ಸೋಮಣ್ಣನ ಪರವಾಗಿ ಒಂದೇ ಒಂದು ಸಾಕ್ಷಿ ಇತ್ತು. ಈ ಎಲ್ಲಾ ಸಾಕ್ಷಿಗಳ ವಿಚಾರಣೆ ಮಾಡಿದಮ್ಯಾಲ ಪಂಚಾಯ್ತಿ ಏನ್ ತೀರ್ಮಾನ ಕೊಡ್ತದಂದ್ರ...''

ಸೂಜಿ ಬಿದ್ದರೂ ಸಪ್ಪಳಾಗಬೇಕು ಅಷ್ಟು ಶಾಂತಿಯಿತ್ತು... ಆಗ ಈ ನಿರ್ಣಯ ಹೊರಬಿತ್ತು.

ಈ ಕತ್ತೆ ಸೋಮಣ್ಣಂದು ಅಂತ... ಯಾಕಂದ್ರ ಸೋಮಣ್ಣನ ಸಾಕ್ಷಿ ಮಾತ್ರ ನಂಬಿಕೆಗೆ ಅರ್ಹವಾಗಿತ್ತು.

''ಇಲ್ಲಾ, ನನಗ ಇದು ಪಸಂದಿಲ್ಲ.... ಒಂದು ಕತ್ತೀ ಬೆಲೆ... ಅದರ ಮವಲ್ಯ ಮನುಷ್ಯನ ಮೌಲ್ಯಕ್ಕಿಂತ ದೊಡ್ಡದೇನು ?'' ಪ್ರತಿಭಟಿಸಿದರು ಮಾಸ್ತರು.

ಅದರೊಳಗ ಇನ್ನೂ ಸಂದೇಹ ಉಳದದೇನು ಮಾಸ್ತರ ?

ಹೌದು, ನಿಮ್ಮ ಈ ತರ್ಕಕ್ಕ ಆಧಾರ ಏನು ಅಂತ ?

ಬಾಳ ಸರಳದ ಈ ತರ್ಕ. ಒಬ್ಬ ಮನುಷ್ಯ ಸುಳ್ಳ ಹೇಳಬಹುದು ಆದರ ಒಂದು ಕತ್ತಿ ಸುಳ್ಳಹೇಳೂದಿಲ್ಲ, ಯಾಕಂದರ ಅದು ಮನುಷ್ಯ ಅಲ್ಲಲ್ಲ...

*(ಗೋವಿಂದ ಝಾ ಅವರ 'ಮನುಷ್ ಕ ಮೋಲ್' ಹಿಂದಿ ನಾಟಕದ ರೂಪಾಂತರ)*

ಬಿ. ಆರ್. ಪೋಲೀಸ್ ಪಾಟೀಲ
'ವಾತ್ಸಲ್ಯ', ಬನಹಟ್ಟಿ- ೫೮೭೩೧೧

ಸೀಯಾರ್ಕ್




# ಸ್ವತಂತ್ರ ಪ್ಯಾಲಸ್ತೈನ್ ರಾಷ್ಟ್ರದ ಪ್ರತೀಕ



# ಯಾಸರ್ ಅರಾಫತ್

ತನ್ನ ಜನತೆಗೆ ಸ್ವತಂತ್ರ ತಾಯ್ನಾಡನ್ನು ನಿರ್ಮಿಸಲು ಕೊನೆಯ ಉಸಿರು ಇರುವವರೆಗೆ ಹೋರಾಡಿದ ಪ್ಯಾಲಸ್ತೈನ್ ಜನತೆಯ ಅಪ್ರತಿಮ ನಾಯಕ ಯಾಸರ್ ಅರಾಫತ್, ಇಪ್ಪತ್ತನೇ ಶತಮಾನದ ಸ್ವಾತಂತ್ರ್ಯ ಹೋರಾಟಗಾರರ ಪಂಕ್ತಿಯಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿದ್ದಾನೆ. ವಸಾಹತುಶಾಹಿಯ ವಿರುದ್ಧವಾಗಿ ನಾಡಿನ ಜನತೆಯನ್ನು ಹುರಿದುಂಬಿಸಿ, ಅಹಿಂಸಾತ್ಮಕ ಹೋರಾಟಕ್ಕೋ, ಸಶಸ್ತ್ರ ಸಮರಕ್ಕೋ ನಾಯಕತ್ವ ನೀಡಿ ಸಫಲರಾದ ನಾಯಕರಿದ್ದಾರೆ. ಆದರೆ ಸಾಮ್ರಾಜ್ಯಶಾಹಿಗಳ ಚಿತಾವಣೆಯಿಂದ ತಮ್ಮ ನೆಲದಲ್ಲೇ ನಿರಾಶ್ರಿತರಾದ ಪ್ಯಾಲಸ್ತೈನ್ ಜನತೆಯನ್ನು ಒಂದುಗೂಡಿಸಿ, ಕೈಯಲ್ಲಿ ಬಂದೂಕು ಹಿಡಿದು ಹೋರಾಟ ನಡೆಸಿದ ಅಪರೂಪದ ವ್ಯಕ್ತಿ ಅರಾಫತ್, ಸುಮಾರು ಅರ್ಧಶತಮಾನ ಅವಿಶ್ರಾಂತವಾಗಿ ಹೋರಾಟದ ಬದುಕಿನಲ್ಲೇ ಸಾರ್ಥಕ್ಯ ಕಂಡ ಸ್ವಾತಂತ್ರ್ಯಯೋಧ. ಅವನ ಕಲ್ಪನೆಯ ಸ್ವತಂತ್ರ ಪ್ಯಾಲಸ್ತೈನ್ ನಾಡು ಪೂರ್ಣವಾಗಿ ಸಾಕಾರವಾಗದಿದ್ದರೂ, ಅದಕ್ಕೆ ಅಗತ್ಯವಾದ ಭೂಮಿಕೆಯನ್ನು ಸಿದ್ಧಗೊಳಿಸಿ ನವೆಂಬರ್ ೧೧ರಂದು ಬೆಳಗಿನ ಜಾವ ಕಣ್ಣು ಮುಚ್ಚಿದ ಸೇನಾನಿ. ಪ್ಯಾಲಸ್ತೈನ್ ರಾಜ್ಯಸ್ಥಾಪನೆಯ ಹೋರಾಟಕ್ಕೆ ನಾಯಕತ್ವ ನೀಡುತ್ತಿರು ವಾಗಲೇ, ಅರಬ್ ಜನತೆಯ ಮಧ್ಯೆ ರಾಷ್ಟ್ರೀಯ ಭಾವನೆ ಉಳಿಯುವುದಕ್ಕೆ ಅಗತ್ಯವಾದ ಸ್ಫೂರ್ತಿ ನೀಡಿದ. ಇಡೀ ಮಧ್ಯಪ್ರಾಚ್ಯದ ರಾಜಕೀಯ ಬೆಳವಣಿಗೆಗಳ ಮೇಲೆ ತನ್ನ ಛಾಪು ಮೂಡಿಸಿದ್ದ ಅರಾಫತ್ ಕೊನೆಯವರೆಗೂ ಸಾಮ್ರಾಜ್ಯಶಾಹಿಗಳಿಗೆ, ಮುಖ್ಯವಾಗಿ ಅಮೆರಿಕನ್ ಸಾಮ್ರಾಜ್ಯಶಾಹಿಗೆ ನುಂಗಲಾರದ ತುತ್ತಾಗಿದ್ದ. ಪ್ಯಾಲಸ್ತೈನ್ ಜನತೆಯ ಹಿತಕ್ಕೆ ಬಾಧಕವಾಗುವಂಥ ಯಾವುದೇ ಪ್ರಸ್ತಾಪವನ್ನು ಎಲ್ಲಿಂದ, ಎಷ್ಟೇ ಒತ್ತಾಯಗಳು ಬಂದಾಗ್ಯೂ ಮಣಿಯದೇ ಇದ್ದ ಧೀಮಂತ ನಾಯಕ. ಪ್ಯಾಲಸ್ತೈನ್ ಸ್ವತಂತ್ರ ರಾಷ್ಟ್ರದ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಪ್ಯಾಲಸ್ತೈನ್ ಪ್ರದೇಶದಲ್ಲಿ ಸ್ವಯಮಾಡಳಿತ ಸ್ಥಾಪಿಸುವ ಬಗ್ಗೆ ಆದ ಒಪ್ಪಂದವನ್ನು ಜಾರಿಗೊಳಿಸುವುದರಲ್ಲಿ ಇಸ್ರೇಲಿನ ಧೂರ್ತವರ್ತನೆಯನ್ನು ಬಲವಾಗಿ ವಿರೋಧಿಸಿದ ಅರಾಫತ್, ಅಮೆರಿಕದ ಪೂರ್ಣ ಬೆಂಬಲದಿಂದ ಇಸ್ರೇಲ್ ನಡೆಸಿದ ದಾಳಿಗಳಿಗಾಗಲಿ, ಹಾಕಿದ ಬೆದರಿಕೆಗಳಿಗಾಗಲಿ ಮಣಿಯಲಿಲ್ಲ. ಪ್ಯಾಲಸ್ತೈನ್ ಜನನಾಯಕನನ್ನು ಇತ್ತೀಚಿನ ದಿನಗಳಲ್ಲಿ ಇಸ್ರೇಲ್ ದಿಗ್ಬಂಧನದಲ್ಲಿರಿಸಿ, ಬಹಿರಂಗವಾಗಿ ಹತ್ಯೆಯ ಬೆದರಿಕೆ ಹಾಕಿದರೂ, ಯಾಸರ್ ಅರಾಫತ್ ತನ್ನ ಜನರಿಂದ ದೂರವಾಗಲಿಲ್ಲ. ಇಸ್ರೇಲಿನ ಎಲ್ಲ ಅಕ್ರಮಗಳಿಗೂ ಅಮೆರಿಕದ ಕುಮ್ಮಕ್ಕು ಇದ್ದದ್ದು ಸರ್ವವಿದಿತ. ಪ್ಯಾಲಸ್ತೈನ್ ಜನರ ಮೇಲೆ ಇಸ್ರೇಲಿಗೆ ಅನುಕೂಲವಾಗುವಂಥ ಒಪ್ಪಂದವನ್ನು ಹೇರಲು ಅಮೆರಿಕಾಗೆ ಕಂಟಕವಾಗಿದ್ದ ಅರಾಫತ್‌ರನ್ನು ಉರುಳಿಸಿ, ಮಧ್ಯಪ್ರಾಚ್ಯದಿಂದ ಹೊರಹಾಕಿ, ಕೈಗೊಂಬೆಯೊಂದನ್ನು ಅಧಿಕಾರಕ್ಕೆ ತರಲು ಅಧ್ಯಕ್ಷ ಜಾರ್ಜ್ ಬುಷ್ ನಡೆಸಿದ ಪ್ರಯತ್ನಗಳೇನು ಕಮ್ಮಿಯಲ್ಲ. ಇಂಥ ಎಲ್ಲ ಹಂಚಿಕೆಗಳನ್ನು ಕಡೆಗಣಿಸಿ ಹೋರಾಡಿದ ನಾಯಕ ಅರಾಫತ್ ಕಣ್ಮರೆಯಾದದ್ದು ನಿಜಕ್ಕೂ ತುಂಬಲಾರದ ನಷ್ಟ ಪ್ರತಿಯೊಬ್ಬ ಸಾಮ್ರಾಜ್ಯಶಾಹಿ ವಿರೋಧಿ, ಪ್ರಜಾಪ್ರಭುತ್ವವಾದೀ ಸ್ವಾತಂತ್ರ್ಯ ಪ್ರೇಮಿಯೂ ಅಗಲಿದ ನಾಯಕನಿಗೆ ಶ್ರದ್ಧಾಂಜಲಿ ಅರ್ಪಿಸುತ್ತ, ಪ್ಯಾಲಸ್ತೈನ್ ಜನತೆಯ ಭಾವೀ ಹೋರಾಟಕ್ಕೆ ಬೆಂಬಲ ನೀಡುತ್ತಾರೆ. ಸ್ವತಂತ್ರ ಪ್ಯಾಲಸ್ತೈನ್ ರಾಷ್ಟ್ರದ ಸ್ಥಾಪನೆಯೇ ಈ ನಾಯಕನಿಗೆ ಸಲ್ಲುವ ಗೌರವ, ಸ್ಮಾರಕ ಆಗಿರುತ್ತದೆ.

ಇಂಜಿನಿಯರ್ ಆಗಿ ನಿರ್ಮಾಣಕಾರ್ಯಗಳಲ್ಲಿ ತೊಡಗಿ ವ್ಯವಹಾರ ನಡೆಸಬೇಕಾಗಿದ್ದ ಯಾಸರ್ ಅರಾಫತ್ ಕೈಗೆತ್ತಿಕೊಂಡದ್ದು ಪ್ಯಾಲಸ್ತೈನ್ ಜನತೆಗೆ ಸ್ವತಂತ್ರ ತಾಯ್ನಾಡನ್ನು ನಿರ್ಮಿಸುವ ಕಾರ್ಯವನ್ನು. ೧೯೨೯ರಲ್ಲಿ ಕೈರೋದಲ್ಲಿ ಜನಿಸಿದ ಮೊಹಮದ್ ಅಬ್ದುಲ್ ರವುಫ್ ಅರಾಫತ್ ಅಲ್‌ಕುರಾ ಅಲ್ ಹುಸೇನೀ ಹೊರಗಿನ ಪ್ರಪಂಚಕ್ಕೆ ಅಧ್ಯಕ್ಷ ಯಾಸರ್ ಅರಾಫತ್, ಪ್ಯಾಲಸ್ತೈನ್ ಜನರಿಗೆ ಅಬು ಅಮರ್. ಎರಡನೇ ಮಹಾಯುದ್ಧಾನಂತರ ಯೆಹೂದ್ಯರಿಗಾಗಿ ಇಸ್ರೇಲ್ ರಾಜ್ಯವನ್ನು ಸ್ಥಾಪಿಸಿ, ಪ್ಯಾಲಸ್ತೈನ್ ಜನತೆಗೆ ಅನ್ಯಾಯವೆಸಗಿದ ಸಾಮ್ರಾಜ್ಯಶಾಹಿಗಳ ಧೋರಣೆಯಿಂದ ರೊಚ್ಚಿಗೆದ್ದ ಯುವಕ ಅರಾಫತ್, ಗೆಳೆಯರೊಂದಿಗೆ ಕೂಡಿಕೊಂಡು 'ನಮ್ಮ ಪ್ಯಾಲಸ್ತೈನ್' ಎಂಬ ನಿಯತಕಾಲಿಕೆ ಪ್ರಾರಂಭಿಸಿ, ಸ್ವಾತಂತ್ರ್ಯಕ್ಕಾಗಿ ಹೋರಾಡಲು ಪ್ಯಾಲಸ್ತೈನ್ ಜನತೆಗೆ ಕರೆ ನೀಡಿದ. ಕುವೈತ್‌ನಿಂದ ಪತ್ರಿಕೆ ಪ್ರಕಟಿಸುತ್ತಿದ್ದ ಅರಾಫತ್ ಫ್ರೆಂಚ್ ಸಾಮ್ರಾಜ್ಯಶಾಹಿಗಳ ವಿರುದ್ಧ ಸಶಸ್ತ್ರ ಹೋರಾಟ ನಡೆಸಿ ಸ್ವಾತಂತ್ರ್ಯ ಪಡೆದ ಆಲ್ಜೀರಿಯದ ಕ್ರಾಂತಿಯಿಂದ ಪ್ರೇರಿತನಾಗಿ, ಪ್ಯಾಲಸ್ತೈನ್ ವಿಮೋಚನೆಗಾಗಿ ಸಶಸ್ತ್ರ ಹೋರಾಟ ನಡೆಸಲು, ಇಸ್ರೇಲನ್ನು ನಿರ್ನಾಮಗೊಳಿಸಲು ನಿರ್ಧರಿಸಿದ. ಅರವತ್ತರ ದಶಕದ ಪ್ರಾರಂಭದಲ್ಲಿ ಆಪ್ತಮಿತ್ರ, ಕ್ರಾಂತಿಕಾರಿ ಅಬು ಜಹಾದ್ (೧೯೮೮ರಲ್ಲಿ ಇಸ್ರೇಲಿಗಳಿಂದ ಕೊಲೆಗೀಡಾದ) ಜೊತೆಗೂಡಿ, ಪ್ಯಾಲಸ್ತೈನ್ ಪ್ರದೇಶದಿಂದ ಹೊರಹಾಕಲ್ಪಟ್ಟಿದ್ದ ಕೆಲವೇ ಮಂದಿಯನ್ನು ಸೇರಿಸಿ 'ಫತಾ' ಎಂಬ ಮಿಲಿಟರಿ ಸಂಘಟನೆಯನ್ನು ರಹಸ್ಯವಾಗಿ ಸ್ಥಾಪಿಸಿದ. ೧೯೬೩ರಲ್ಲಿ ಆಲ್ಜೀರಿಯಾದಲ್ಲಿ ಈ 'ಫತಾ' ಸಂಸ್ಥೆಯ ಕಾರ್ಯಾಲಯ ತೆಗೆಯಲು, ಸ್ವಾತಂತ್ರ್ಯಯೋಧರಿಗೆ ಮಿಲಿಟರಿ ತರಬೇತಿ ನೀಡಲು ಅವಕಾಶ ಲಭಿಸಿತು. ಮರು ವರ್ಷವೇ ಕೈರೋದಲ್ಲಿ ಜರುಗಿದ ಅರಬ್ ನಾಯಕರ ಶೃಂಗ ಸಮಾವೇಶದ ಸಮಯದಲ್ಲಿ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ (ಪಿ.ಎಲ್.ಓ.) ಸ್ಥಾಪನೆಗೊಂಡು ಅರಬ್ ದೇಶಗಳಿಂದ ಮಾನ್ಯತೆ ಪಡೆಯಿತು. ಈ ಸಂಘಟನೆಯ ಮಿಲಿಟರಿ ವಿಭಾಗವಾಗಿ 'ಫತಾ' ಪ್ಯಾಲಸ್ತೈನ್ ವಿಮೋಚನಾ ಸೇನೆಯಾಗಿ ಮಾರ್ಪಟ್ಟಿತು. ಅರಾಫತ್ ಈ ಸಂಸ್ಥೆಯ ಅಧ್ಯಕ್ಷನಾದ. ಅಲ್ಲಿಂದ ಪ್ರಾರಂಭವಾದ್ದು ಸುದೀರ್ಘ ವಾದ ಹೋರಾಟ.

ಇಸ್ರೇಲ್ ವಿರುದ್ಧ ಸಮರ ಸಾರಿದ ಪಿಎಲ್‌ಓ ಸಂಸ್ಥೆ ಬಹುಬೇಗ ಪ್ಯಾಲಸ್ತೀನಿಯನ್ನರ ಪ್ರಾತಿನಿಧಿಕ ಸಂಸ್ಥೆಯಾಗಿ ಬೃಹತ್ ಸಂಘಟನೆಯಾಗಿ ಬೆಳೆಯಿತು. ಮಧ್ಯಪ್ರಾಚ್ಯದಲ್ಲಿ ಅಸ್ಥಿರತೆ, ಅಶಾಂತಿಗಳಿಗೆ ಎಡೆಕೊಟ್ಟ ಇಸ್ರೇಲಿನ ಸ್ಥಾಪನೆ ಹಾಗೂ ಇಸ್ರೇಲಿನ ವಿಸ್ತರಣಾ ನೀತಿಯಿಂದಾಗಿ, ಈ ಪ್ರದೇಶದಲ್ಲಿ ಅರಬ್ ರಾಷ್ಟ್ರಗಳು ಮತ್ತು ಇಸ್ರೇಲಿನ ಮಧ್ಯೆ ನಡೆದ ಎರಡು ಯುದ್ಧಗಳ ಪರಿಣಾಮವಾಗಿ ಪಿಎಲ್‌ಓ ಕಚೇರಿಯನ್ನು ಜೊರ್ಡಾನಿನಿಂದ ಬೇರೆಡೆಗೆ ಸ್ಥಳಾಂತರಿಸ ಬೇಕಾಗಿಬಂದಿತು. ಆಗೆಲ್ಲಾ ಎಷ್ಟೇ ತೊಂದರೆಗಳೂ, ಅಡಚಣೆಗಳೂ ಬಂದರೂ ಲೆಕ್ಕಿಸದೆ ಅರಾಫತ್ ನೇತೃತ್ವದಲ್ಲಿ ಹೋರಾಟ ಮುಂದುವರಿಯಿತು. ಭಾರತವೂ ಸೇರಿದಂತೆ ಹೆಚ್ಚು ಹೆಚ್ಚು ರಾಷ್ಟ್ರಗಳು ಅರಾಫತ್‌ಗೆ ಬೆಂಬಲ ನೀಡಿದುವು. ಆಗ ಪ್ರಬಲವಾಗಿದ್ದ ಅಲಿಪ್ತ ರಾಷ್ಟ್ರಗಳ ಚಳವಳಿ ಪಿಎಲ್‌ಓಗೆ ಪ್ಯಾಲಸ್ಟೈನ್ ಜನತೆಯ ಪ್ರಾತಿನಿಧಿಕ ಸಂಸ್ಥೆ ಎಂದು ಮಾನ್ಯಮಾಡಿ, ನಾಯಕ ಅರಾಫತ್‌ಗೆ ಸ್ವತಂತ್ರ ರಾಷ್ಟ್ರದ ಅಧಿಪತಿಗೆ ಸಲ್ಲುವ ಗೌರವ ನೀಡಿ, ಸದಸ್ಯತ್ವವನ್ನು ನೀಡಿತು. ಇದರ ಹಿಂದೆಯೇ ವಿಶ್ವಸಂಸ್ಥೆಯೂ ಕೂಡ ಪಿಎಲ್‌ಓಗೆ ಮಾನ್ಯತೆ ನೀಡಿತು. ರಾಷ್ಟ್ರಾಧಿಪತಿಗಳಿಗೆ ಮಾತ್ರ ಭಾಷಣ ಮಾಡಲು ಅವಕಾಶವಿರುವ ವಿಶ್ವಸಂಸ್ಥೆಯ ಮಹಾಸಭೆಯನ್ನು ಉದ್ದೇಶಿಸಿ ಮಾತನಾಡಲು ಅರಾಫತ್‌ಗೆ ಅವಕಾಶ ನೀಡಿತು (೧೯೭೪). ಮುಂದಿನ ದಿನಗಳಲ್ಲಿ ಸಾಕಷ್ಟು ತೊಂದರೆಗಳನ್ನು ಅನುಭವಿಸಬೇಕಾಗಿ ಬಂದರೂ ಅರಾಫತ್ ಹೋರಾಟ ಮುಂದುವರಿಸಿ ಪಿಎಲ್‌ಓ ಸಂಸ್ಥೆಯ ಕಚೇರಿಯನ್ನು ಟ್ಯೂನಿಸ್‌ಗೆ ವರ್ಗಾಯಿಸಿದ.

ಎಂಬತ್ತರ ದಶಕದಲ್ಲಿ ಒಂದಾದ ಮೇಲೊಂದು ಅರಬ್ ರಾಷ್ಟ್ರಗಳು ಅಮೆರಿಕದ ಒತ್ತಡಕ್ಕೆ ಮಣಿದು ಇಸ್ರೇಲಿನೊಂದಿಗೆ ಪ್ರತ್ಯೇಕ ಒಪ್ಪಂದಗಳನ್ನು ಮಾಡಿ ಕೊಂಡು, ಇಸ್ರೇಲಿಗೆ ಮಾನ್ಯತೆ ನೀಡಿದ್ದರಿಂದ, ಪರಿಸ್ಥಿತಿ ಪರಿಗಣಿಸಿ ಅರಾಫತ್ ಪಿಎಲ್‌ಓ ಕೂಡ ಇಸ್ರೇಲ್‌ನ ಅಸ್ತಿತ್ವವನ್ನು ಮಾನ್ಯಮಾಡಬೇಕಾಗಿ ಬಂದಿತು. ಪ್ಯಾಲಸ್ಟೈನ್ ರಾಷ್ಟ್ರದ ಅನಿರ್ಬಂಧಿತ ಸ್ಥಾಪನೆಗಾಗಿ ಹೋರಾಡುತ್ತಿರುವಾಗಲೇ ಇಸ್ರೇಲಿನೊಂದಿಗೆ ಸಂಧಾನ ನಡೆಸುವ ಕ್ಲಿಷ್ಟವಾದ ಹಾದಿಯನ್ನು ಕ್ರಮಿಸಬೇಕಾಗಿ ಬಂದಿತು. ೧೯೯೩ರಲ್ಲಿ ಸ್ವತಂತ್ರ ಪ್ಯಾಲಸ್ಟೈನ್ ರಾಜ್ಯದ ನಿರ್ಮಾಣ ಕುರಿತು ಇಸ್ರೇಲಿನೊಂದಿಗೆ ಒಪ್ಪಂದವೊಂದು ಆದರೂ, ಅದು ಇನ್ನೂ ಪ್ಯಾಲಸ್ಟೈನೀಯರ ಪಾಲಿಗೆ ಮರೀಚಿಕೆಯಾಗಿಯೇ ಉಳಿದಿದೆ. ಐತಿಹಾಸಿಕವೆಂದು ಕೊಂಡಾಡಿ ಈ ಒಪ್ಪಂದಕ್ಕೆ ಸಹಿ ಹಾಕಿದ ಅಂದಿನ ಇಸ್ರೇಲಿ ಪ್ರಧಾನಿ ಯಿಟ್ಸ್‌ಜಾಕ್ ರಾಬಿನ್ ಮತ್ತು ವಿದೇಶಾಂಗ ಸಚಿವ ಸಿಮೋನ್ ಪೆರೆಸ್ ಮತ್ತು ಪಿಎಲ್‌ಓ ಅಧ್ಯಕ್ಷ ಯಾಸೆರ್ ಅರಾಫತ್‌ಗೆ ೧೯೯೪ರ ನೊಬೆಲ್ ಶಾಂತಿ ಪಾರಿತೋಷಕವೂ ಲಭಿಸಿತು. ಈ ಒಪ್ಪಂದದ ಪ್ರಕಾರ ಪ್ಯಾಲಸ್ಟೈನ್‌ನ ಸ್ವಯಮಾಡಳಿತೆ ಮಾನ್ಯಮಾಡಿ ಪೂರ್ಣ ಸ್ವತಂತ್ರ ರಾಷ್ಟ್ರದ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಅಧ್ಯಕ್ಷ ಅರಾಫತ್ ನೇತೃತ್ವದಲ್ಲಿ ಸರಕಾರವೊಂದು ಸ್ಥಾಪನೆಯಾಯಿತು. ಆದರೆ ಇಸ್ರೇಲಿನ ಬಲಪಂಥೀಯ ಪ್ರತಿಗಾಮಿಗಳು ಈ ಒಪ್ಪಂದಕ್ಕೆ ತೀವ್ರ ವಿರೋಧವಿದ್ದು, ಇಸ್ರೇಲಿ ಪ್ರಧಾನಿ ರಾಬಿನ್‌ನ ಕೊಲೆಗೈದು ಶಾಂತಿ ಪ್ರಕ್ರಿಯೆಯನ್ನು ಭಂಗಗೊಳಿಸಿತು. ಅಲ್ಲಿಂದ ಪ್ರಾರಂಭವಾದ್ದು ಪ್ಯಾಲಸ್ಟೈನ್ ವಿಮೋಚನಾ ಸಮರದ ಎರಡನೆಯ ಹಂತ. ಇಸ್ರೇಲಿನ ಹಠಮಾರಿತನದ ಧೋರಣೆಯಿಂದಾಗಿ, ಅಮೆರಿಕದ ತಾರತಮ್ಯದ ಧೋರಣೆಯಿಂದಾಗಿ, ಪ್ಯಾಲಸ್ಟೈನ್ ಜನರ ಸ್ವಾತಂತ್ರ್ಯದ ಕನಸು ಇನ್ನೂ ನನಸಾಗದೆ ಇದೆ. ನಲವತ್ತೈದು ವರ್ಷಗಳ ಕಾಲ ಅವಿಶ್ರಾಂತವಾಗಿ ಪ್ಯಾಲಸ್ಟೈನ್ ವಿಮೋಚನಾ ಸಮರದ ಎಲ್ಲಾ ತಂಡಗಳನ್ನು ಒಂದುಗೂಡಿಸಿ ಹೋರಾಟ ನಡೆಸಿದ ನಾಯಕನ ಅಗಲಿಕೆಯಿಂದ ಹೊಸ ಪರಿಸ್ಥಿತಿ ಉದ್ಭವಿಸಿದೆ. ಈ ಪರ್ವ ಸಮಯದಲ್ಲಿ ಪ್ಯಾಲಸ್ಟೈನ್ ಜನತೆ ತಮ್ಮ ಹೋರಾಟದ ಪರಂಪರೆಯನ್ನು ಮುಂದುವರಿಸಿ ಕೊಂಡು, ಒಂದುಗೂಡಿ ಗುರಿ ಸಾಧಿಸುವುವೆಂದು ಆಶಿಸೋಣ.

**ಸೀಯಾರ್ಕೆ**
೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫



# ಧ್ವಜದ ಬಣ್ಣಗಳು

ಗಣರಾಜ್ಯ ದಿನದಂದು ಹಗ್ಗವನು ಎಳೆದಾಗ
ಹಸಿರು ಮೇಲಾಗಿ ಧ್ವಜ ಹಾರಿತಂತೆ
ಧ್ವಜ ಬಿಚ್ಚಿ ಎಳೆದವ ನಿರಪರಾಧಿಯೇ ಆದ
ಕಟ್ಟಿದ್ದವನ ಕೆಲಸ ಹೋಯಿತಂತೆ

ಎಂದೆಂದೂ ಕೇಸರಿಯೆ ಮೇಲಾಗಿ ಹಾರುವ ಧ್ವಜ
ಹೊಸ ಅರ್ಥವನೀಗ ಸಾರುತ್ತಿದೆ
ಧ್ವಜದ ಕೇಸರಿ ಬಣ್ಣ ತ್ಯಾಗಕ್ಕೆ ಸಂಕೇತ
ಮೇಷ್ಟ್ರು ಹೇಳಿದ ಮಾತು ನಾರುತ್ತಿದೆ

ಧ್ವಜದ ಹಸಿರು ಬಣ್ಣ ಸಮೃದ್ಧಿ ಸಂಕೇತ
ಎಂದು ಹೇಳಲು ಮನಸು ಒಪ್ಪುತ್ತಿಲ್ಲ
ಹಸಿರ ಬಸಿರೊಳಗಿಂದ ಆಗಾಗ ಮದ್ದುಗಳು
ಭುಗಿಲೆದ್ದು ಸಿಡಿಯುವುದು ತಪ್ಪುತ್ತಿಲ್ಲ

ಕೇಸರಿಯೇ ಯಾವಾಗಲು ಮೇಲೆ ಇರಬೇಕೆಂದು
ಹೇಳುವ ನಿಯಮದ ಅರ್ಥವೇನು ?
ಸತ್ಯ, ಶಾಂತಿ, ಸುಖ ಸಮೃದ್ಧಿಗಿಂತ
ಯುದ್ಧ ವೀರಗಳೆ ಮೇಲು ಎನ್ನಲೇನು ?

ಮೇಲಿನಿಂದ ತುಳಿವ ಕೇಸರಿ
ಕೆಳಗಿನಿಂದ ಬೆಳಿವ ಹಸಿರು
ನಟ್ಟನಡುವೆ ಸಿಕ್ಕು ನರಳುವ
ಬಿಳಿಯ ಬಣ್ಣವೆ ಹೇಳುತಿರುವುದು
ಬಣ್ಣವಿಲ್ಲದ ಜನರೆ ನೀವು ಇನ್ನು ಮುಂದೆ ಬದುಕಲಾರಿರಿ
ಬದುಕಬೇಕೇ ? ಹಾಗಿದ್ದರೆ ತಕ್ಷಣ
ಯಾವುದಾದರೂ ಒಂದು
ಬಣ್ಣ ಹಚ್ಚಿಕೊಳ್ಳಿ !
ಜೀವ ಉಳಿಸಿಕೊಳ್ಳಿ !!

ರಾಜೇಂದ್ರ ಬುರಡಿಕಟ್ಟಿ
ಪರ್ಣಕುಟಿ-ಸಾಲೇಕೊಪ್ಪ, ಸರು ಅಂಚೆ, ತೀರ್ಥಹಳ್ಳಿ ತಾ।।, ಶಿವಮೊಗ್ಗ ಜಿಲ್ಲೆ

# ಮೂಡಣದ ಚಿತ್ತಾರಗಳು



**ಮೋ**ಡ ಮುಸುಕಿದ ನಸುಕುಗಳಲ್ಲಿ ಚಂದ್ರನ ಕಣ್ಣುಮುಚ್ಚಾಲೆ ಆಟವನ್ನು ಕಾಣಲಾಗದಿದ್ದಾಗ, 'ಹೊಸತು' ಓದುಗರಿಂದ ದೂರವಾಣಿ ಕರೆಗಳು ಬಂದವು. ಮೈಸೂರು, ಚಿತ್ರದುರ್ಗ ಹಾಗೂ ಗುಲ್ಬರ್ಗ ಗಳಿಂದ ನವೆಂಬರ್ ೧೦ರ ಆಚ್ಛಾದನೆ ಸ್ಪಷ್ಟವಾಗಿ ಕಂಡಿತು. ಹಾಗೆ ಅತ್ತಿತ್ತ ಕಣ್ಣು ಹಾಯಿಸಿದ ವರಿಗೆ ಮೂಡಣ ಆಕಾಶದ ಇತರ ವೈವಿಧ್ಯಗಳು ಕಣ್ಣಿಗೆ ಬಿದ್ದವು. ಈ ತಿಂಗಳೂ ಇಂತಹ ಚಿತ್ತಾರಗಳ ದೃಶ್ಯ ನಿಮಗಾಗಿ ಕಾದಿದೆ.

ನವೆಂಬರ್ ೧೪ರಂದು ರಂಜಾನ್ ಚಂದ್ರನನ್ನು ಸವರಿ ಮೇಲೇರಿದ ಬುಧ ಡಿಸೆಂಬರ್‌ಗಾಗಲೇ ಬೆಳಗಿನಲ್ಲಿ ಹಾಜರಾಗುತ್ತದೆ. ಅದನ್ನು ಗುರುತಿಸಲು ಈ ಬಾರಿ ನೀವು ಶುಕ್ರದ ಸಹಾಯ ಪಡೆಯಬಹುದು. ತಿಂಗಳ ಮೊದಲಲ್ಲಿ ಶುಕ್ರವನ್ನು ಗಮನಿಸುತ್ತಿರಿ. ೫ರಂದು ಅದು ಮಂಗಳದ ಜೊತೆಗೂಡುತ್ತದೆ. ಆದರೆ ಮಂಗಳ ಈಗ ತುಂಬಾ ಮಂಕಾಗಿದೆ. ಅದನ್ನು ಹುಡುಕಲು ಕಷ್ಟಪಡಲೇಬೇಕಾಗುವುದು. ಶುಕ್ರದ ಪಕ್ಕ ಅಂತೂ ಅದು ತುಂಬಾ ಕ್ಷೀಣವಾಗಿಯೇ ಕಾಣುವುದು. ಹೀಗೆ ಒಮ್ಮೆ ಅದನ್ನು ಗುರುತಿಸಿ ಕೊಂಡ ನಂತರ ಆಸುಪಾಸನ್ನು ಗಮನಿಸಿ. ಇದರ ಪ್ರತಿಸ್ಪರ್ಧಿ ಜ್ಯೇಷ್ಠಾ (ಅಂಟಾರೆಸ್ - ಆರೆಸ್ ಎಂದರೆ ಮಂಗಳ) ದಿನದಿನಕ್ಕೆ ಮಂಗಳವನ್ನು ಸಮೀಪಿಸುತ್ತದೆ. ತಿಂಗಳ ಕೊನೆಗೆ ಮಂಗಳಕ್ಕೆ ಏಳು ಡಿಗ್ರಿ ದೂರದಲ್ಲಿರುತ್ತದೆ. ನಮ್ಮ ಮಾರ್ಗದರ್ಶಿ ಚಂದ್ರ ೧೦ರಂದು ಮಂಗಳದ ಪಕ್ಕ ಕಾಣುತ್ತದೆ. ಆದಿನ ಬೆಳಗಿನ ಜಾವ ಬಾಲಚಂದ್ರ, ಮಂಗಳ ಹಾಗೂ ಶುಕ್ರಗಳ ಪುಟ್ಟ ತ್ರಿಕೋಣ ಕಾಣುತ್ತದೆ. ೭ ಮತ್ತು ೮ರಂದು ಚಂದ್ರ ಗುರುಗ್ರಹದ ಪಕ್ಕ ಕಾಣುತ್ತದೆ. ೭ರ ಮಧ್ಯಾಹ್ನ ಗುರುಗ್ರಹದ ಆಚ್ಛಾದನೆ ಇದೆ. (ನಮಗೆ ಕಾಣುವುದಿಲ್ಲ)

೧೨ ತಾರೀಖಿನ ಅಮಾವಾಸ್ಯೆಯ ನಂತರ ಸಂಜೆ ಚಂದ್ರ ಪಶ್ಚಿಮ ಆಕಾಶದಲ್ಲಿ ಖಾಲಿ ಎನ್ನಿಸುವ ಭಾಗದಲ್ಲಿ ಚಲಿಸುತ್ತದೆ. ಅದರ ಉತ್ತರಕ್ಕೆ ಪೆಗಸಸ್ (ನಕುಲ) ಚೌಕ. ೧೮ರ ಸಂಜೆ ನೆತ್ತಿಯ ಮೇಲೆ ಕಾಣುವ ಅರ್ಧಚಂದ್ರ ೨೩ರಂದು ಕೃತ್ತಿಕಾ ಪುಂಜದ ಪಕ್ಕದಲ್ಲಿಯೇ ಕಾಣುತ್ತದೆ. ಕಳೆದ ತಿಂಗಳು ಹೀಗೆ ಅದು ಕೃತ್ತಿಕೆಯ ಪಕ್ಕದಲ್ಲಿದ್ದಾಗ ಹುಣ್ಣಿಮೆ ಆಗಿತ್ತು. ೨೩ರಂದು ಹುಣ್ಣಿಮೆ ಅಲ್ಲ. ಆದರೂ ಚಂದ್ರ ಸಾಕಷ್ಟು ಪ್ರಕಾಶಮಾನವಾಗಿರುತ್ತದೆ. ೨೬ರಂದು ಹುಣ್ಣಿಮೆ. ಅಂದು ಚಂದ್ರ ಒರೈಯನ್ (ಮಹಾವ್ಯಾಧ) ಪುಂಜದ ಉತ್ತರಕ್ಕಿರುತ್ತದೆ. ಮಹಾವ್ಯಾಧನ ತಲೆಯ ಭಾಗದಲ್ಲಿರುವ ಕ್ಷೀಣನಕ್ಷತ್ರವೇ ಮೃಗಶಿರಾ. ಆದ್ದರಿಂದ ಇದು ಮಾರ್ಗಶಿರ ಮಾಸ.







ಮುಂದೆ ತಡವಾಗಿ ಉದಯಿಸುವ ಚಂದ್ರ ೨೮ರಂದು ಶನಿಗ್ರಹದ ಪಕ್ಕ ಕಾಣುತ್ತದೆ. (ತಿಂಗಳ ಮೊದಲ ದಿನವೂ ಚಂದ್ರ ಇದೇ ಸ್ಥಾನದಲ್ಲಿತ್ತು.) ಈ ಮಧ್ಯೆ ಶುಕ್ರ ಮುಂದಕ್ಕೆ ಓಡಿರುತ್ತದೆ. ೧೦ರಂದು ಮಂಗಳದ ಪಕ್ಕ ಕಂಡು ಅದು ೨೯ರಂದು ಬುಧಗ್ರಹದ ಪಕ್ಕ ಕಾಣುತ್ತದೆ. ಅಂದು ನೀವು ಆಕಾಶದಲ್ಲಿ ಬುಧ, ಶುಕ್ರ, ಮಂಗಳ, ಗುರು, ಶನಿ ಇವೆಲ್ಲವನ್ನೂ ಕಾಣಬಹುದು.

ಹತ್ತರಿಂದ ಹದಿಮೂರರವರೆಗಿನ ಅವಧಿಯಲ್ಲಿ ಮೂಡಣದ ಆಕಾಶದಲ್ಲಿ ಗ್ರಹಗಳ ಜೋಡಣೆ ಅವುಗಳ ದೂರಕ್ಕೆ ಅನುಗುಣವಾಗಿರುತ್ತದೆ. ಅಂಚಿನಲ್ಲಿ ಬುಧ, ಸ್ವಲ್ಪ ಮೇಲೆ ಶುಕ್ರ, ಆನಂತರ ಮಂಗಳ, ಆಮೇಲೆ ಗುರು, ಶನಿ – ಹೀಗೆ. ಇದೇ ಲೆಕ್ಕವನ್ನು ಮುಂದುವರೆಸಿದರೆ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋಗಳೂ ಅದೇ ಕ್ರಮದಲ್ಲಿವೆ. ಆದರೆ ಸಂಜೆಯ ಆಕಾಶದಲ್ಲಿವೆ. ಇದು ಕೇವಲ ಕಾಕತಾಳೀಯ. ಸುಮಾರು ಇನ್ನೂರು ವರ್ಷಗಳಿಗೆ ಒಮ್ಮೆ ಹೀಗೆ ಜೋಡಣೆಯಾಗುತ್ತದೆ.

ತನ್ನ ಕಕ್ಷೆಯಲ್ಲಿನ ಮುಖ್ಯ ಹಂತವನ್ನು ಭೂಮಿ ೨೧ರ ಸಂಜೆ ೧೮:೧೨ಕ್ಕೆ ದಾಟಲಿದೆ. ಇದೇ ಉತ್ತರಾಯಣ. ಇಲ್ಲಿಗೆ ದಕ್ಷಿಣಯಾತ್ರೆ ಮುಗಿಸಿದ ಸೂರ್ಯ ಪುನಃ ಉತ್ತರಕ್ಕೆ ಹೊರಡಲಿದೆ. ಅಂದು ಅತಿ ದೀರ್ಘ ರಾತ್ರಿ. ಆ ಬಳಿಕ ರಾತ್ರಿಯ ಅವಧಿ ಕಡಿಮೆಯಾಗತೊಡಗುತ್ತದೆ.

೧೨-೧೩ರ ಅವಧಿಯಲ್ಲಿ ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿಯ ಚಟುವಟಿಕೆ ಕಂಡುಬರುತ್ತದೆ. ಗಂಟೆಗೆ ೬೦ ಉಲ್ಕೆಗಳು ಬೀಳುವುವು ಎಂಬುದು ಲೆಕ್ಕ. ಚಂದ್ರನ ಬೆಳಕೂ ಅಡ್ಡಿಪಡಿಸುವುದಿಲ್ಲ. ಮಧ್ಯರಾತ್ರಿಗೆ ಜೆಮಿನಿ ಎಂದರೆ ಮಿಥುನ ಮೇಲೇರಿದಾಗ ಕಾಣುವುದು.

ಮೆಕ್‌ಹೋಲ್ಟ್ಜ್ ಎಂಬ ಧೂಮಕೇತು ಬರಿಗಣ್ಣಿಗೆ ಕಾಣುವ ಪ್ರಕಾಶ ಪಡೆಯಬಹುದು ಎಂಬುದೊಂದು ನಿರೀಕ್ಷೆ ಇದೆ. ಒರೈಯನ್ ಮತ್ತು ವೃಷಭಗಳ ನಡುವೆ ಹಾದುಹೋಗುವ ಇದು ದುರ್ಬೀನುಗಳಿಗೆ ಕಾಣಬಹುದು.

### ಖಗೋಳ ದಿನಚರಿ

೧ ಶನಿಗ್ರಹ ಚಂದ್ರನ ಪಕ್ಕದಲ್ಲಿ
೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
  ಮಂಗಳ ಮತ್ತು ಶುಕ್ರದ ನಡುವೆ ಕನಿಷ್ಠಕೋನ
೭ ಗುರುಗ್ರಹದ ಆಚ್ಛಾದನೆ (ಅಮೆರಿಕದವರಿಗೆ ನೋಟ ಲಭ್ಯ)
೧೦ ಚಂದ್ರ-ಮಂಗಳದ ಪಕ್ಕ
  ಚಂದ್ರನ ಇನ್ನೊಂದು ಪಕ್ಕಕ್ಕೆ ಶುಕ್ರ
೧೨ ಅಮಾವಾಸ್ಯೆ
  ಚಂದ್ರನ ದೂರ ಭೂಮಿಯಿಂದ ಕನಿಷ್ಠ (ಉಬ್ಬರದ ಆರ್ಭಟ ಹೆಚ್ಚು)
೧೩ ಜೆಮಿನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೧೮ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೦ ಬುಧಗ್ರಹದ ಹಿನ್ನಡೆ ಮುಕ್ತಾಯ
೨೧ ಉತ್ತರಾಯಣ
೨೩ ಶುಕ್ರದ ಪಕ್ಕ ಜ್ಯೇಷ್ಠಾ ನಕ್ಷತ್ರ
೨೬ ಹುಣ್ಣಿಮೆ
೨೭ ಚಂದ್ರ-ಭೂಮಿ ದೂರ ಗರಿಷ್ಠ
೨೯ ಬುಧ-ಶುಕ್ರ ಎರಡೂ ಕನಿಷ್ಠ ಕೋನದಲ್ಲಿ ಬುಧವನ್ನು ಗುರುತಿಸಲು ಅತ್ಯುತ್ತಮ ಅವಕಾಶ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧



# ಅಂದಿನ ಸಿನಿಮಾ

ಸಿನಿಮಾ ಎಂದೊಡನೆ ನನಗೆ ನೆನಪಾಗುವುದು ನಾಲ್ಕೂವರೆ - ಐದು ದಶಕಗಳ ಹಿಂದಿನ 'ಕಪ್ಪು-ಬಿಳುಪು' ಚಲನಚಿತ್ರಗಳೇ. ನಾವಿದ್ದುದು ಮೈಸೂರಿನ ಪ್ರತಿಷ್ಠಿತ ಬಡಾವಣೆಗಳಲ್ಲೊಂದಾದ ಅಗ್ರಹಾರದಲ್ಲಿ. ನಾವು ಹುಡುಗರು ಐದಾಣೆ (ಇಂದಿನ ೩೦ ಪೈಸೆ!) ಹೇಗೋ ಕೂಡಿಸಿಟ್ಟುಕೊಂಡು ಟಾಕೀಸಿನೊಳಕ್ಕೆ ನುಸುಳಿಕೊಳ್ಳುತ್ತಿದ್ದೆವು. ಹಾಗೆ ಕಾಸು ಕೈಗೂಡದಿದ್ದರೆ ಟಾಕೀಸಿನ ಹಿಂಭಾಗದ ಜಗಲಿಯೇ ನಮಗೆ ಗತಿ. ಏಕೆಂದರೆ ಅಲ್ಲಿ ಕುಳಿತು ಗೋಡೆಗೆ ಕಿವಿಯಂಟಿಸಿದರೆ ಡಯಲಾಗನ್ನು ಆಲಿಸಬಹುದಿತ್ತು! ವಾಲ್‌ಪೋಸ್ಟ್ ಮುಂದೆ ತದೇಕಚಿತ್ತರಾಗಿ ನಿಂತು ನಿರಾಸೆಯನ್ನು ಸ್ವಲ್ಪಮಟ್ಟಿಗೆ ನಿವಾರಿಸಿಕೊಳ್ಳುತ್ತಿದ್ದುದು ಇನ್ನೊಂದು ಮಾರ್ಗ. ನಮ್ಮ ಮನೆಗೆ ಹತ್ತಿರವಿದ್ದುದು ಪ್ರಭುದೇವ ಟಾಕೀಸ್ (ಈಗಲೂ ಇದೆ). ತಮಾಷೆಯೆಂದರೆ ನಮಗೆ ಇಂತಹ ಭಾಷೆಯ ಚಿತ್ರವೇ ಆಗಬೇಕೆಂದೇನೂ ಇರಲಿಲ್ಲ. ಕನ್ನಡ, ತಮಿಳು, ತೆಲುಗು, ಹಿಂದಿ, ಇಂಗ್ಲಿಷ್ ಎಲ್ಲವೂ ಆದೀತು. ನಮಗೆ ಬೇಕಾಗಿದ್ದು ಮನರಂಜನೆಯಷ್ಟೆ. ಫೈಟಿಂಗ್ ಇಲ್ಲದ ಚಿತ್ರವನ್ನು ಅದರಷ್ಟು ಹೊಲಸು ಚಿತ್ರ ಇನ್ನೊಂದಿಲ್ಲವೆಂದೇ ಹೆಸರಿಸುತ್ತಿದ್ದೆವು. ಸಿನಿಮಾ ನೋಡುವ ಆ ಮೂರು ತಾಸು ಪ್ರಪಂಚವನ್ನೇ ಮರೆಯುತ್ತಿದ್ದೆವು. ಶಾಲಾ ಹುಡುಗರಾಗಿ ಸಿನಿಮಾ ನೋಡಬಾರದೆಂದು ಮನೆಯ ಹಿರಿಯರು ಕಟ್ಟುಪಾಡು ವಿಧಿಸಿದ್ದರು. ಸಿನಿಮಾ ವೀಕ್ಷಿಸಿ ಮನೆಗೆ ಬಂದ ಹುಡುಗರಿಗೆ ದೊಣ್ಣೆ ಏಟು ಸಿದ್ಧ. ಈ ನ್ಯೂನತೆಗೆ ಕೆಲವು ಚೂಟಿ ಹೈಕಳು ವಿಶಿಷ್ಟ ಪರಿಹಾರವೊಂದನ್ನು ಕಂಡುಕೊಂಡಿದ್ದರು. ವಿರಾಮ ಸಮಯದಲ್ಲಿ ಮನೆಗೆ ಓಡಿಬಂದು ಕೆಲ ನಿಮಿಷಗಳು ಕಳೆದು ಮತ್ತೆ ಟಾಕೀಸಿಗೆ ಧಾವಿಸಿ ಬರುತ್ತಿದ್ದರು. ಮನೆಯವರು ತಮ್ಮ ಮಕ್ಕಳಿಗೂ ಸಿನಿಮಾಕ್ಕೂ ಎತ್ತಿಂದೆತ್ತಣ ಸಂಬಂಧವಯ್ಯಾ ಎಂದೇ ಪರಿಭಾವಿಸುತ್ತಿದ್ದರು!

ಸಿನಿಮಾ ನೋಡುತ್ತಿರುವಾಗ ಪ್ರೇಕ್ಷಕರು ತಮ್ಮದೇ ಧಾಟಿಯಲ್ಲಿ ಪ್ರತಿಕ್ರಿಯಿಸುತ್ತಾ ಸಮಯಕ್ಕೆ ತಕ್ಕಂತೆ ನಗೆಯ ಅಲೆಗಳನ್ನು ಸೃಷ್ಟಿಸುತ್ತಿದ್ದುದನ್ನು ಮರೆಯುವಂತಿಲ್ಲ. ಸ್ತ್ರೀಯರಂತೂ ನಾಯಕಿ ದುಃಖದಲ್ಲಿದ್ದಾಗ ಆಕೆಯೊಂದಿಗೆ ತಾವೂ ಕಣ್ಣೀರು ತಂದುಕೊಳ್ಳುತ್ತಿದ್ದರು. ನನಗೆ ಈಗ ಅನ್ನಿಸುತ್ತಿದೆ: ಯಾರಾದರೂ ಕರವಸ್ತ್ರದ ವ್ಯಾಪಾರಿ ಟಾಕೀಸಿನ ಬಳಿ ನಿಂತಿದ್ದಿದ್ದರೆ ಧಾರಾಳವಾಗಿ ಆತ ಲಾಭ ಮಾಡಿಕೊಳ್ಳಬಹುದಿತ್ತು ಎಂದು!

ಸಿನಿಮಾ ನೋಡುತ್ತಿರುವಾಗ ಪ್ರೇಕ್ಷಕರ 'ಹಿಮ್ಮೇಳ' ವೈವಿಧ್ಯಮಯವಾಗಿರುತ್ತಿತ್ತು. 'ಮಾಯಾಬಜಾರ್' ಚಿತ್ರ ವೀಕ್ಷಿಸುತ್ತಿರುವಾಗ ಒಂದು ಮಗು 'ನಂಗೆ ಲಾಡು, ನಂಗೆ ಲಾಡು' ಎಂದು ಮೊಂಡಾಟ ಮಾಡಿತ್ತು. ಆ ಚಿತ್ರದಲ್ಲಿ ವಿವಾಹ ಸಮಾರಂಭದ ದೃಶ್ಯದಲ್ಲಿ ವಧು-ವರರ ಮುಂದೆ ದೊಡ್ಡ ದೊಡ್ಡ ತಟ್ಟೆಗಳಲ್ಲಿ ಭಕ್ಷ್ಯಗಳನ್ನು ಪೇರಿಸಿಟ್ಟಿರುವುದನ್ನು ಆ ಮಗು ಗಮನಿಸಿದುದರ ಫಲಶ್ರುತಿಯಿದು! ನನಗೆ ಚೆನ್ನಾಗಿ ನೆನಪಿದೆ. ಒಮ್ಮೆ ಪೌರಾಣಿಕ ಚಿತ್ರವೊಂದಕ್ಕೆ ಹೋಗಿದ್ದಾಗ ನನ್ನ ಹಿಂಬದಿ ಸೀಟಿನಲ್ಲಿ ಕುಳಿತಿದ್ದವನೊಬ್ಬ "ಬುಟ್ಟಿ... ಆ ಹನುಮಂತ ನೆಗೆದ್ನಲ್ಲ ಈಗ.... ಮತ್ತೆ ಪರ್ದೆ ರವಷ್ಟನ್ನು ಅಳ್ಳಾಡ್ಲೇ ಇಲ್ವಲ್ಲ, ಇದ್ದೆಂಗೆ ದೇವ್ರು ?" ಎಂದು ನನ್ನನ್ನು ಎರಡೆರಡು ಬಾರಿ ತಿವಿದು ವಿಚಾರಿಸಿದ್ದ! ನಿಜ ಹೇಳಬೇಕೆಂದರೆ ಸಿನಿಮಾ ವೀಕ್ಷಕರ ಅಂತಹ ಹಿಮ್ಮೇಳಗಳೇ ಹೆಚ್ಚು ಮನರಂಜನೀಯವಾಗಿರುತ್ತಿತ್ತು. ಸಮರದ ದೃಶ್ಯಗಳಲ್ಲಿ ಜನ ಎಷ್ಟು ಉತ್ಸಾಹ, ಉದ್ವೇಗಗೊಳ್ಳುತ್ತಿದ್ದರೆಂದರೆ ಅವರೇ ಶತ್ರು ಸಂಹಾರಕ್ಕೆ ಪಣತೊಟ್ಟವರಷ್ಟು ಹಾ... ಊ... ಮುಂತಾದ ಹಾರಾಟ, ಚೀರಾಟಗಳು ಸೂರು ಹಾರಿಹೋಗುವಂತೆ ಮಾರ್ದನಿಸುತ್ತಿದ್ದವು. "ಹಾಕು ಅವನಿಗೆ... ಹೂಂ... ಹೂಂ... ಹಾಗೆ... ಹಾಗೆ... ಬಿಡ್ಬೇಡ... ಶಹಬಾಸ್..." ಮುಂತಾಗಿ ಹೀರೋನನ್ನು ಹುರಿದುಂಬಿಸುತ್ತಿದ್ದುದು ಮಾಮೂಲು. ಹುಲಿಯೋ ಸಿಂಹವೋ ಅಥವಾ ಹೆಬ್ಬಾವೋ ನಾಯಕಿಯನ್ನು ಅಟ್ಟಿಸಿಕೊಂಡುಬರುವಾಗ ಅಕ್ಷರಶಃ ನಾಯಕನಿಗಿಂತ ಪ್ರೇಕ್ಷಕರೇ ಹೆಚ್ಚು ಕಾಳಜಿಪಡುತ್ತಿದ್ದರು. ನಾಯಕಿಯೇನಾದರೂ ಒಂಟಿಯಾಗಿ ಅರಣ್ಯದಲ್ಲಿ ಅಸಹಾಯಕಳಾಗಿ ಅಡ್ಡಾಡುವ ದೃಶ್ಯಕ್ಕೆ ಪ್ರತಿಕ್ರಿಯೆಯಾಗಿ ಪ್ರೇಕ್ಷಕರು "ಬೇಡ ಕಣೆ, ಆ ಬಂಡೆ ಕಡೆ ಹೋಗ್ಬೇಡ ಮಾರಾಯ್ತಿ, ಅಲ್ಲೇ ಅವಿತಿರೋದು ರಾಕ್ಷಸ" ಎಂದು ಕಿರುಚಾಡಿ ಸೂಚನೆ ನೀಡುವರು.

ನಿಜ ಹೇಳಬೇಕೆಂದರೆ ಸಿನಿಮಾಗೆ ಕ್ಯೂ ನಿಂತವರು ಚಿತ್ರವಿಚಿತ್ರ ವೇದನೆಗೊಳಗಾಗುತ್ತಿದ್ದರು. ಹೊಸ ಚಿತ್ರ ಬಿಡುಗಡೆಯಾದ ದಿನವಂತೂ ಕೇಳುವಂತೆಯೇ ಇಲ್ಲ. ಪ್ರತಿಯೊಬ್ಬರೂ ತಮ್ಮ ಮುಂದೆ ನಿಂತವರನ್ನು "ಏನ್ರೀ ಇಲ್ಲಿತನಕ ಟಿಕೆಟ್ ಸಿಗುತ್ತೆ? ಬ್ಲಾಕಲ್ಲಿ ಯಾರಾದ್ರು ಮಾರ್‍ತಿದ್ರೆ ನೋಡಿ ದಯವಿಟ್ಟು" ಎಂದು ವಿಚಾರಿಸುತ್ತಿದ್ದುದುಂಟು. ಪರಸ್ಪರ, "ಓ ಏನೂ ಪರ್ವಾಗಿಲ್ಲ ಬಿಡ್ರಿ, ಬೇಜಾನ್ ಕೊಡ್ತಾನೆ... ಸೀಟು ಮಸ್ತಾಗಿದೆ" ಎಂಬ ಸಮಾಧಾನ ಇದ್ದದ್ದೇ. ಅದಿರಲಿ, ಕ್ಯೂ ನಿಂತವರು ಆಗಷ್ಟೇ ಪ್ರದರ್ಶನದಿಂದ ಹೊರಬರುತ್ತಿರುವವರನ್ನು ಚಿತ್ರ ಕುರಿತು ಸಂದರ್ಶನವನ್ನೇ ನಡೆಸಿಬಿಡುತ್ತಿದ್ದರು. "ಪಿಕ್ಚರ್ ಪರ್ವಾಗಿಲ್ವ? ಎಷ್ಟು ಫೈಟಿಂಗ್ ಇದೆ ಒಟ್ಟು? ಲವ್ ಸೀನ್ ಬಹಳ ಉಂಟಾ ? ಕಾಮಿಡಿ ಇದೆಯಾ ? ಎಷ್ಟು ರೀಲು? ಸೀನ್ಸ್‌ಗೋಳು ಹೆಂಗವೆ?..." ಮುಂತಾಗಿ ಪ್ರಶ್ನೆಗಳೋ ಪ್ರಶ್ನೆಗಳು. ಸಂದರ್ಶನದಿಂದ ತಪ್ಪಿಸಿಕೊಂಡು ಓಡಬೇಕೆನ್ನುವಷ್ಟು ಮುಜುಗರಕ್ಕೆ ನಾನೇ ಒಮ್ಮೆ ಒಳಗಾಗಿದ್ದೇನೆ.

ಇನ್ನೊಂದು ವಿಷಯ ಕೇಳಿ. ಒಬ್ಬರು ಒಂದಕ್ಕಿಂತ ಹೆಚ್ಚು ಬಾರಿ ಒಂದೇ ಚಿತ್ರ ನೋಡುವುದು ಆಗ ಅಷ್ಟೇ ಸಹಜವೆನಿಸುತ್ತಿತ್ತು. ಅಂಥ ಚಿತ್ರರಸಿಕರು ಥಿಯೇಟರ್‌ನಲ್ಲಿ ಕೂತು ಅಕ್ಕಪಕ್ಕದವರಿಗೆ ಮುಂದೆ ಆಗುವುದನ್ನು ವಿವರಿಸುತ್ತಾ ಉಳಿದವರ ಬಾಯಿಂದ ಸಹಸ್ರನಾಮಕ್ಕೊಳಗಾಗುತ್ತಿದ್ದರೆನ್ನಿ. ಒಟ್ಟಾರೆ ಅಂದಿನ ಬ್ಲ್ಯಾಕ್ ಆ್ಯಂಡ್ ವೈಟ್ ಚಿತ್ರ ನೆನಪಿನ ಬುತ್ತಿಯಿಂದ ಒಮ್ಮೊಮ್ಮೆ ಹೊರಬಂದು ರಂಜಿಸುತ್ತಲೇ ಇರುತ್ತದೆ. ನೆನಪು ಕಹಿಯಲ್ಲ.

ಬಂಡಿಗನವಿಲೆ ಭಗವಾನ್
ಪ್ರಾಧ್ಯಾಪಕರು, ಕೊಂಗಾಡಿಯಪ್ಪ ಪಿ.ಯು. ಕಾಲೇಜು.
ದೊಡ್ಡಬಳ್ಳಾಪುರ, ಬೆಂಗಳೂರು (ಗ್ರಾ) ಜಿಲ್ಲೆ - [illegible]



**ಯುಗದಕವಿ ಜಗದಕವಿ** (ಲೇ.ಸಂಗ್ರಹ)

ಸಂ.: ಆರ್. ಜಿ. ಹಳ್ಳಿ ನಾಗರಾಜ್

**ಪುಟ : ೯೫** **ಬೆಲೆ : ರೂ. ೧೨೫**

**ಅನ್ವೇಷಣೆ ಪ್ರಕಾಶನ,** ನಂ. ೩೭/೨ಎ, "ನಿಸರ್ಗ" ನಾಗರಬಾವಿ ರಸ್ತೆ, ಬೆಂಗಳೂರು - ೫೬೦ ೦೪೦

೨೦೦೪ ರಾಷ್ಟ್ರಕವಿ ಕುವೆಂಪು ಅವರ ಜನ್ಮಶತಮಾನೋತ್ಸವ ವರ್ಷ. ಕನ್ನಡದ ಕವಿಯಾಗಿ ವಿಚಾರಕ್ರಾಂತಿಯನ್ನು ಸಾಹಿತ್ಯದ ಮೂಲಕ ಜನರ ಬಳಿಗೊಯ್ದು ಮನುಜ ಮತ - ವಿಶ್ವಪಥ ಗಳೆಂಬ ಹಿರಿಯ ಆದರ್ಶಗಳನ್ನು ತೋರಿ ಜಗದಗಲ ವಿಶಾಲ ಮನೋಭಾವನೆ ಬೆಳೆಸಲು ಕರೆ ನೀಡಿದ ಕವಿಶ್ರೇಷ್ಠ ಶ್ರೀ ಕುವೆಂಪು. ಜಾತಿ ಮತಗಳಲ್ಲಿ ನಂಬಿಕೆಯಿಲ್ಲದ ಅವರು ತಮ್ಮ ಕವಿತೆಗಳಲ್ಲಿ ವಿಶ್ವಮಾನವ ಸಂದೇಶ ನೀಡುತ್ತ, ತಾನು ತನ್ನದೆಂಬ ಅಹಂಕಾರದಿಂದ ಮುಕ್ತನಾಗಿ ಬಾಳುವ ಸಂಕೇತವಾದ 'ಓ ನನ್ನ ಚೇತನ, ಆಗು ನೀ ಅನಿಕೇತನ' ಎಂಬ ಹಾಡಿನ ಮೂಲಕ ವಿಶ್ವವ್ಯಾಪಿ ಚೈತನ್ಯದ ಸುಂದರ ಕಲ್ಪನೆಯನ್ನು ಮುಂದಿಟ್ಟಿದ್ದಾರೆ. ಮಹಾ ಕಾವ್ಯಗಳಲ್ಲಿ ದನಿಯಿಲ್ಲದೆ ಸೊರಗಿದ ನಿರ್ಲಕ್ಷಿತ ಪಾತ್ರಗಳಿಗೆ ಮಾನವೀಯ ಸ್ಪರ್ಶದ ಮರುಹುಟ್ಟು ನೀಡಿದ ಅವರ ಸಾಹಿತ್ಯದಲ್ಲಿ 'ಶ್ರೀ ರಾಮಾಯಣ ದರ್ಶನಂ' ಕೃತಿಗೆ ಎತ್ತರದ ಜ್ಞಾನಪೀಠ ಪ್ರಶಸ್ತಿ ಲಭ್ಯ. ಕುವೆಂಪು ಮತ್ತು ಅವರ ಸಾಹಿತ್ಯವನ್ನಿಲ್ಲಿ ವಿಶ್ಲೇಷಿಸಲಾಗಿದೆ.

**ಪ್ರಾಚೀನ ಭಾರತದಲ್ಲಿ ಶೂದ್ರರು** (ಸಂಶೋಧನೆ)

ಆರ್. ಎಸ್. ಶರ್ಮ ಅನು : ವಿವಿಧ ಅನುವಾದಕರು

**ಪುಟ : ೧೮೪** **ಬೆಲೆ : ರೂ. ೯೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಬ್ರಾಹ್ಮಣೋऽಸ್ಯ ಮುಖಮಾಸೀದ್... ಪದ್ಭ್ಯಾಂ ಶೂದ್ರೋ ಅಜಾಯತ॥ ಇದು ವೇದಕಾಲೀನ ಪ್ರಕೃತಿಯ ವಿರಾಟ್ ಪುರುಷನ ಅಗಾಧತೆಯನ್ನು ಋಷಿಗಳು ವರ್ಣಿಸುವ ಪುರುಷ ಸೂಕ್ತದಲ್ಲಿನ ಒಂದು ಮಂತ್ರ. ಅಂದು ಯಾವ ಅರ್ಥದಲ್ಲಿ ಅದ್ಭುತವೊಂದನ್ನು ಅವರು ಹಾಗೆ ಸ್ತುತಿಸಿದರೋ ಅಂತೂ ಭಾರತೀಯ ಸಮಾಜದಲ್ಲಿ ಭಗವದ್ಗೀತೆಯ ರಚನೆಯ ಕಾಲಕ್ಕೆ ಚಾತುರ್ವರ್ಣ್ಯ ವ್ಯವಸ್ಥೆಯನ್ನು ಗಟ್ಟಿಗೊಳಿಸಲು ಸಮರ್ಥವಾಗಿ ಬಳಸಿಕೊಳ್ಳಲಾಯಿತು. ಜನಾಂಗೀಯ ಅಸಮಾನತೆ ಪ್ರಾಚೀನ ಭಾರತದಲ್ಲಿ ಯಾವುದೋ ಒಂದು ಕಾಲಘಟ್ಟದಲ್ಲಿ ಉದ್ಭವಿಸಿ ಮೇಲ್ವರ್ಗದ ಮೂರೂ ವರ್ಣಗಳ ಸೇವೆ ಮಾಡಲು ಶೂದ್ರರನ್ನು ದೈವಿಕ ಕಾರಣ ನೀಡಿ ಉಪಯೋಗಿಸಿಕೊಳ್ಳಲಾಯಿತು. ಪ್ರಾಚೀನ ಭಾರತದ ಇತಿಹಾಸದ ಅನೇಕ ಸತ್ಯನಿಷ್ಠುರಗಳನ್ನು ನಮಗೆ ಎತ್ತಿ ತೋರಿಸಿದ ಪ್ರೊ॥ ಶರ್ಮ ಅವರು ಶೂದ್ರ ಸಮುದಾಯ ನಾಲ್ಕನೇ ದರ್ಜೆ ಪ್ರಜೆಯಾಗಿ ಇತಿಹಾಸದ ಕುಲುಮೆಯಲ್ಲಿ ಬೆಂದು ಹಾಯ್ದು ಬಂದ ಮೌನ ಸಂಘರ್ಷವೊಂದನ್ನು ತಿಳಿಸುತ್ತಾರೆ.



**ಮಗು ಮಲಗಿದೆ ಎದೆಯ ಮೇಲೆ** (ಕವನಗಳು)

ಎಂ. ಡಿ. ಒಕ್ಕುಂದ

**ಪುಟ : ೭೬** **ಬೆಲೆ : ರೂ. ೩೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ',. ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಯುದ್ಧಗಳಿಂದಾಗುವ ತಲ್ಲಣ ತಳಮಳ ಮತ್ತು ಅನಾಹುತ ಗಳನ್ನು ಅಕ್ಷರಗಳಲ್ಲಿ ಕಡೆದಿಡಲಾಗಿದೆ. ಇಂದು ಸಿಡಿಮದ್ದುಗಳ ಬಾಂಬುಗಳ ಆರ್ಭಟದಿಂದಾಗಿ ಮಳೆಯ ಮೋಡಗಳ ಗುಡುಗು ಸಿಡಿಲು ಕಿವಿಗೆ ಕೇಳಿಸದಂತಾಗಿದೆ. ಮಳೆಯಿಂದ ಇಳೆ ತೋಯ್ದುದಕ್ಕಿಂತ ಹೆಚ್ಚಾಗಿ ಮಾನವ ರಕ್ತದಿಂದ ನೆಲ ತೊಯ್ದಿದೆ. ಯಾಕೆ ಹೀಗೆ ? ಈ ಮಾನವನಿಗೇಕೆ ಸಹ ಮಾನವನ ರಕ್ತದ ದಾಹ ? ನಾವಿಂದು ಧರ್ಮವನ್ನೂ ಯುದ್ಧವನ್ನೂ ದೇಶಪ್ರೇಮದ ಸೋಗಿನಲ್ಲಿ ವೈಭವೀಕರಿಸುತ್ತ ಗಡಿಗಳನ್ನು ಹೆತ್ತ ಮಕ್ಕಳಿಗಿಂತ ಹೆಚ್ಚು ಪ್ರೀತಿಸುತ್ತಿರುವುದರಿಂದ ರಕ್ತದಲ್ಲೇ ಓಕುಳಿಯಾಡಿ ಕಣ್ಣೀರಿನಿಂದ ಅದನ್ನು ತೊಳೆಯುತ್ತಿದ್ದೇವೆ. ಕವಿಯ ಮನಸ್ಸು ಇಲ್ಲಿ ಎಷ್ಟು ನೊಂದಿದೆಯೆಂದರೆ ಅವರಿಗೆ ಜಾಗತಿಕ ನಕ್ಷೆಯಲ್ಲಿ ಗಡಿರೇಖೆಗಳು ರಕ್ತದ ಕಾಲುವೆಯಂತೆ ಕಂಡಿವೆ. ಒಂದು ಪದ್ಯದ ಸಾಲು ಇಲ್ಲಿದೆ: "ಧರ್ಮದ ವಿವರ ಕೇಳದ, ಯುದ್ಧದ ಪಾಠ ಹೇಳದ ಶಾಲೆ ತೆರೆಯಬೇಕು....."



**ಬೆಳಗಿನ ಬೆರಗು** (ಲೇಖನಗಳ ಸಂಗ್ರಹ)

ಜಿ. ಎನ್. ಮಲ್ಲಿಕಾರ್ಜುನ

**ಪುಟ : ೧೭೬** **ಬೆಲೆ : ರೂ. ೭೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩



ಇಂದಿನ ಜಾಗತಿಕ ವಿದ್ಯಮಾನಗಳನ್ನು ಅವಲೋಕಿಸಿ ಚರ್ಚಿಸುವ ಗಂಭೀರ ಲೇಖನಗಳು. ಆರ್ಥಿಕ ಸುಧಾರಣೆ ಮತ್ತು ಸಮಾಜವಾದದ ಬಗ್ಗೆ ವಿಶೇಷ ಭರವಸೆ ಯನ್ನಿಟ್ಟುಕೊಂಡು ರೂಪಿತವಾದ ಇವು ಪ್ರಸಕ್ತ ಜಾಗತೀಕರಣದ ಸೋಲು ಗೆಲವುಗಳ ಹಿನ್ನೆಲೆಯಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಒಂದು ರಾಷ್ಟ್ರದ ಅಭಿವೃದ್ಧಿಯು ಸರಕಾರಗಳು ಕೈಗೆತ್ತಿಕೊಳ್ಳುವ ಮುಂದಾಲೋಚನೆಯ ಕಾರ್ಯಚಟುವಟಿಕೆಗಳನ್ನು ಅವಲಂಬಿಸಿರುವುದರಲ್ಲಿ ಎರಡು ಮಾತಿಲ್ಲ. ಅಭಿವೃದ್ಧಿಯ ದಾರಿಗೆ ಒಂದೇ ಒಂದು ಹೆಬ್ಬಾಗಿಲು ಎಂದು ಪ್ರಚಾರ ಗಿಟ್ಟಿಸಿಕೊಂಡ ಜಾಗತೀಕರಣ ಪ್ರಕ್ರಿಯೆ ನಮ್ಮ ದೇಶದ ಸಂದರ್ಭದಲ್ಲಿ ಕೆಲವೇ ಮಂದಿ ಉದ್ಧಾರವಾಗಿ ಕೆಳಸ್ತರದ ಬಡವರ ಪಾಲಿಗೆ ಅಸಹನೀಯ ಬದುಕನ್ನು ನೀಡಿದ್ದು ಹೇಗೆಂಬ ಶೋಧನೆಯ ಪ್ರಯತ್ನ ಮಾಡಲಾಗಿದೆ. ಜಗತ್ತಿನಾದ್ಯಂತ ನಡೆಯುತ್ತಿರುವ ಘಟನೆಗಳನ್ನಾಧರಿಸಿ ಬರೆಯಲಾಗಿದೆ.

**ಸಂಶೋಧನೆಯ ಹಾದಿ**

ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅನು: ಜಿ. ಕುಮಾರಪ್ಪ

**ಪುಟ : ೯೬** **ಬೆಲೆ : ರೂ. ೪೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಜ್ಞಾನ ಸಂಪಾದನೆ – ವಿಜ್ಞಾನದ ಸಂಶೋಧನೆಗಳೆಂಬ ಎರಡು ದಾರಿಗಳನ್ನು ವಿಸ್ಮಯಕರವಾಗಿ ಕ್ರಮಿಸುತ್ತ ಬಂದ ಮಾನವನ ಸಾಮಾಜಿಕ ವ್ಯವಸ್ಥೆ ಸಾಕಷ್ಟು ಪರಿವರ್ತನೆಗಳನ್ನೂ ಕಂಡಿದೆ. ಅಂದಿನ ಮಾನವ ಪ್ರಕೃತಿಯನ್ನು ಅರ್ಥೈಸುವಲ್ಲಿ ಕೆಲವೊಂದು ತಪ್ಪು ತಿಳುವಳಿಕೆಗಳಿದ್ದು ಕ್ರಮೇಣ ಸಮಾಜದಲ್ಲಿ ಅವು ಧಾರ್ಮಿಕ ಮುಸುಕಿನಡಿ ಬಲವಾಗಿ ಬೇರೂರ ತೊಡಗಿದವು. ಹೀಗೆ ಅಂದಿನ ಅರ್ಥಹೀನ ಅವೈಜ್ಞಾನಿಕ ನಂಬಿಕೆಗಳನ್ನು ಅಲುಗಾಡಿಸಲು ಪ್ರಯತ್ನಿಸುತ್ತಿದ್ದ ಪ್ರಯೋಗಶೀಲ ವೈಜ್ಞಾನಿಕ ಸಂಶೋಧನೆಗಳು ಪ್ರಾರಂಭದಲ್ಲಿ ಭಾರೀ ಪ್ರತಿರೋಧವನ್ನು ಎದುರಿಸಬೇಕಾಯಿತು. ನಮ್ಮ ಕಾಲದ ಶ್ರೇಷ್ಠ ಚಿಂತಕ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಇಲ್ಲಿನ ಬರವಣಿಗೆಯಲ್ಲಿ ಮಾನವನ ಏಳಿಗೆಯನ್ನು ಹಂತಹಂತವಾಗಿ ಗುರುತಿಸಿದ್ದಾರೆ. ಕೊನೆಗೆ ವಿಜ್ಞಾನದ ಹಾದಿಯಲ್ಲಿ ಆತ ಕೇವಲ ಸುಖವನ್ನು ಮಾತ್ರ ಅರಸುತ್ತ ವಿಜ್ಞಾನವನ್ನು ಉಳ್ಳವರ ಜೀತದಾಳಿನಂತೆ ದುಡಿಸುವ ಹಂತ ತಲುಪಿದ್ದನ್ನು ಒಂದು ಚರಿತ್ರೆಯನ್ನಾಗಿ ತಿಳಿಸಿದ್ದಾರೆ.

**ಕಂಡದ್ದು ಕಂಡಹಾಗೆ** (ಲೇಖನಗಳು)

ಪಿ. ಲಂಕೇಶ್

**ಪುಟ : ೧೨೮** **ಬೆಲೆ : ರೂ. ೧೨೫**

**ಪತ್ರಿಕೆ ಪ್ರಕಾಶನ,** ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪



ಒಬ್ಬ ಪತ್ರಕರ್ತ, ನಾಟಕಕಾರ ಮತ್ತು ನಿರ್ಭಿಡೆಯ ಬರಹಗಾರರೂ ಆಗಿದ್ದ ಮಾನ್ಯ ಪಿ. ಲಂಕೇಶ್ ಕನ್ನಡಿಗ ರೆಲ್ಲರಿಗೂ ಪರಿಚಯವಿರುವ ವ್ಯಕ್ತಿ. ಸಾಮಾಜಿಕವಾಗಿ ಸಾಹಿತ್ಯಿಕವಾಗಿ ಅವರು ಅಪೇಕ್ಷಿಸಿದ್ದ ನಿಲುವುಗಳು ಹಾಗೂ ಪ್ರತಿಪಾದಿಸಿದ ಗಟ್ಟಿ ವಿಚಾರಗಳು ಸಾಮಾನ್ಯರಿಗೆ ಅರ್ಥವಾಗದೇ ಹೋದದ್ದೊಂದು ದುರಂತವೆನ್ನಬಹುದು. ದಿಟ್ಟತನ ಅವರ ಆಸ್ತಿ ಆಗಿರುವಂತೆಯೇ ಅನೇಕ ವಿರೋಧಿ ಗಳನ್ನೂ ಅದು ಸೃಷ್ಟಿಸಿಕೊಟ್ಟಿತು. ಹಾಗಾಗಿ ನಮ್ಮಲ್ಲಿ ಗಾದೆಯೇ ಇರುವಂತೆ ಕಂಡದ್ದು ಕಂಡಂತೆ ಬರೆದಾಗ ಸಂಬಂಧಿಸಿದವರಿಗೆ ಕೆಂಡದಂಥ ಕೋಪ ಬಂದಿದ್ದೂ ಅಷ್ಟೇ ಸಹಜವಾಗಿತ್ತು. ಅವರ ಲೇಖನಗಳು ಟೀಕೆ ಮತ್ತು ಟಿಪ್ಪಣಿಗಳಾಗಿದ್ದವು. ಇಲ್ಲಿ ಅಂತಹ ವಿವಿಧ ಸಂದರ್ಭಗಳಲ್ಲಿನ ಲೇಖನಗಳು, ಮುನ್ನುಡಿಗಳು, ಭಾಷಣಗಳನ್ನೊಳಗೊಂಡ ಲಂಕೇಶ್ ಅಭಿಪ್ರಾಯಗಳನ್ನು ಕಲೆಹಾಕಲಾಗಿದೆ.

- ಇಂದಿರಾಕುಮಾರಿ



# ರಾಜೇಂದ್ರ ಚೆನ್ನಿಯವರ 'ಅಮೂರ್ತತೆ ಮತ್ತು ಪರಿಸರ'

ಕನ್ನಡ ವಿಮರ್ಶೆಯು ಖಾಲಿಯಾಗಿದೆ, ಒಂದು ದೊಡ್ಡ ಅವಕಾಶವು ಹಾಗೆಯೇ ಉಳಿದಿದೆ ಎನ್ನುವ ಮಾತುಗಳನ್ನು ಹೇಳುವವರು ಡಿ. ಆರ್. ನಾಗರಾಜರನ್ನು ನೆನಪಿಸಿಕೊಳ್ಳುತ್ತಾರೆ. ಈ ಮಾತನ್ನು ಯಾಕೆ ಹೇಳಬೇಕಾಯಿತೆಂದರೆ, ಕನ್ನಡ ವಿಮರ್ಶೆಯಲ್ಲಿ ಒಂದು ಶೂನ್ಯ ಆವರಿಸಿಕೊಂಡಿದೆಯೆಂದು ಅನೇಕರು ಭಾವಿಸಿಕೊಂಡಿದ್ದಾರೆ. ಆದರೆ ಒಂದು ಮಾತಂತೂ ನಿಜ. ಈಗ ವಿಮರ್ಶೆಯನ್ನು ಬರೆಯುವವರು ಕೆಲವು ಸಮಸ್ಯೆಗಳನ್ನು ಎದುರಿಸಲೇಬೇಕಾಗಿದೆ. ಕನ್ನಡದಲ್ಲಿ ಚಾಲ್ತಿಯಾಗಿರುವ ಅನೇಕ ಪರಿಕಲ್ಪನೆಗಳನ್ನು ಇಟ್ಟುಕೊಂಡು ಗುದ್ದಾಡಬೇಕಾಗಿದೆ. ಕೆಲವು ಸಂದರ್ಭಗಳಲ್ಲಿ ಸಮಸ್ಯೆಗಳಿಲ್ಲ - ಸಮಸ್ಯೆಗಳಿವೆಯೆಂದು ಕಲ್ಪಿಸಿಕೊಂಡು ಅದರ ವಿರುದ್ಧ ವ್ಯೂಹ ರಚಿಸಿಕೊಂಡು ಬರೆಯಬೇಕಾಗಿದೆ. ಕನ್ನಡ ವಿಮರ್ಶೆಯಲ್ಲಿ ಸಂಸ್ಕೃತಿ ಚರ್ಚೆ, ವಸಾಹತೋತ್ತರ ಸಂದರ್ಭ ಮತ್ತು ಕನ್ನಡ ಸಾಹಿತ್ಯ, ಬರಹಗಳಲ್ಲಿ ಬ್ರಾಹ್ಮಣ V/s ಶೂದ್ರ, ಸಾಹಿತ್ಯದಲ್ಲಿ 'ತಾಯಿಕರುಳು' – ಇಂಥ ಎಷ್ಟೊಂದು ಮಾತುಗಳು ಜಾರಿಯಲ್ಲಿವೆಯೆಂದರೆ ಯಾರಾದರೂ ಹೊಸಬರು ಬರೆಯಲು ತೊಡಗಿದರೆ ಈ ಮಾತುಗಳ ದೆಸೆಯಿಂದ ದಿಕ್ಕಾಪಾಲಾಗಿ ಓಡಿ ಹೋಗುವ ಸಂದರ್ಭ ಸೃಷ್ಟಿಯಾಗಿದೆ. ಆದರೆ ಇರುವ ಸಂಗತಿಯೇನು ? ಇದರ ಬಗ್ಗೆ ಯಾರೂ ಅಷ್ಟಾಗಿ ಚರ್ಚೆ ಮಾಡ್ತಾ ಇಲ್ಲ. 'ಜಾಗತೀಕರಣ', 'ಕೋಮುವಾದ', 'ರೈತರ ಆತ್ಮಹತ್ಯೆ' ಇವುಗಳಿಗೆ ತಾಯಿಕರುಳು, ತಂದೆಕರುಳು ಅಂತಾ ಇಲ್ಲ. ಇಡೀ ದೇಶದಲ್ಲಿ ಬೇಕೂಂತಲೇ ಸದ್ದು ಮಾಡಲು – ಹತ್ಯಾರಗಳನ್ನು ಹಿಡಿದುಕೊಂಡಿರುವ ವರ್ಗವಿದೆ. ಸುಳ್ಳು ಸುದ್ದಿಗಳ ಮೇಲೆಯೇ ನಡೆದುಹೋಗುವ ಅಸಂಖ್ಯಾತ ಸಂಗತಿಗಳಿವೆ. ಒಬ್ಬ ಲೇಖಕ – ಈ ಸಂಗತಿಗಳನ್ನು ಎದುರುಹಾಕಿಕೊಂಡು ಬರೆಯುವುದು ಮತ್ತು ಈ ಥರ ಸಮಸ್ಯೆಗಳನ್ನು ಗಮನಿಸಿಕೊಂಡೇ ಸಾಹಿತ್ಯಕ್ಕೆ ಕೈಹಾಕುವುದು ನಿಜವಾಗಿಯೂ ಈ ಕಾಲಕ್ಕೆ ಸಲ್ಲಬೇಕಾದ ಸಂಗತಿ. ಸಾಹಿತ್ಯವೆಂದರೆ ಪರಮ ಪವಿತ್ರವಾದುದು. ಅದನ್ನು ಪವಿತ್ರ ಗ್ರಂಥಗಳಂತೆ ಓದಬೇಕು. ಸಾಹಿತ್ಯದ ಚರ್ಚೆಯಲ್ಲಿ ಬೇರೆ ಯಾವುದೂ ಬರಲೇಬಾರದು ಎನ್ನುವ ''ಕಟ್ಟಾ ಸಂಪ್ರದಾಯವಾದಿ'' ಪಂಡಿತ ಮಂಡಲಿಯವರ ವಾದವನ್ನು ಮೆಲ್ಲಗೆ ಮತ್ತು ಯಾವುದೇ ಕಟುಮಾತುಗಳಿಲ್ಲದೆ ತಿರಸ್ಕರಿಸುತ್ತಾ, ದಿನದಿನದ ವರ್ತಮಾನದ ಮುಖೇನ ಸಾಹಿತ್ಯದ ಚರ್ಚೆಯನ್ನು ಮಂಡಿಸುವ ಕೃತಿ 'ಅಮೂರ್ತತೆ ಮತ್ತು ಪರಿಸರ'. ರಾಜೇಂದ್ರ ಚೆನ್ನಿಯವರ ಈ ವಿಮರ್ಶಾ ಸಂಕಲನವನ್ನು ಓದಿದರೆ ಮೊದಲ ಓದಿಗೆ ಅನಿಸುವುದು ಇದು : ನಾವು ಯಾವುದು ಶುದ್ಧ ವಿಮರ್ಶೆಯೆಂದು ಕರೆಯುತ್ತಾ ಬಂದು ಸಾಹಿತ್ಯ ಲೋಕದಲ್ಲಿ ಕೆಲವು ಮೂರ್ತಿಗಳನ್ನು ನಿಲ್ಲಿಸಿದ್ದೇವೆಯೊ ಆ ತರಹದ ಮೂರ್ತಿಗಳನ್ನು ಇಲ್ಲಿಯ ಬರವಣಿಗೆಗಳು ನಿರಾಕರಿಸುತ್ತವೆ. ಸಾಹಿತ್ಯ ವಿಮರ್ಶಕನೆಂದರೆ – ಅವನು ಸಾಹಿತ್ಯ ಕೃತಿಗಳನ್ನು ಮತ್ತು ಬೇಕೆಂದರೆ ಒಂಚೂರು ಸಂಸ್ಕೃತಿಯೆಂಬ ಪದವನ್ನು ಸೇರಿಸಿಕೊಂಡು ಮಾತಾಡಿದರೆ ಸಾಕು ಎನ್ನುವಂಥ ಸ್ಥಿತಿಯಲ್ಲಿ ಅದು ಮಾತ್ರವೇ ಸಾಹಿತ್ಯ ವಿಮರ್ಶೆಯಲ್ಲ ಎನ್ನುವುದನ್ನು ವ್ಯಕ್ತಪಡಿಸುತ್ತದೆ. ಈ ಕೃತಿಯ ಲೇಖನಗಳೇ ಹಾಗಿವೆ. ಬೇರೆ ಬೇರೆ ಸಂಗತಿಗಳನ್ನು ಒಳಗೊಂಡಿವೆ. 'ಅಮೂರ್ತತೆ ಮತ್ತು ಪರಿಸರ', 'ದಂತಗೋಪುರ ಮಾರುಕಟ್ಟೆ ಮತ್ತು ರಾಜಕೀಯ', 'ಓದುವುದು ಅಂದರೆ'ಯಂಥ ಲೇಖನಗಳ ಜೊತೆಗೆ 'ಕನ್ನಡ ಕಾವ್ಯಸಂದರ್ಭ ಮತ್ತು ಎಲಿಯೆಟ್ ಕಾವ್ಯ' – ಹೀಗೆ ಬೇರೆ ಬೇರೆ ಲೇಖನಗಳು ಒಂದು ಸಂಕಲನ ರೂಪದಲ್ಲಿ ಬಂದಿವೆ. ಈ ಕಾರಣಕ್ಕಾಗಿ ಬಿಡಿ ಬಿಡಿಯಾದ ಲೇಖನಗಳನ್ನು ಒಂದೆಡೆಗೆ ಪೋಣಿಸಲಾಗಿದೆ. ೧೯೮೩ ರಿಂದ ೧೯೯೯ ರವರೆಗಿನ ಲೇಖನಗಳು ಇಲ್ಲಿವೆ. ಅಂದರೆ ೧೯೮೩ ರಿಂದ ೧೯೯೯ ರವರೆಗೆ ಚೆನ್ನಿಯವರ ಓದಿನ ಪಯಣವು ಸಾಗಿದ್ದರ ಸೂಚನೆಗಳಿವೆ.

ಒಂದು ಮಾತನ್ನು ಹೇಳಿ ಈ ಸಂಕಲನದ ಕುರಿತು ಬರೆಯುವುದನ್ನು ಮುಂದುವರಿಸಬೇಕು. ಇದು ಬಹುತೇಕ ಲೇಖಕರ ಕಷ್ಟ. ಸೆಮಿನಾರಿಗಾಗಿ, ಯಾವುದೋ ಅಭಿನಂದನಾ ಗ್ರಂಥಕ್ಕಾಗಿ ಅಥವಾ ಯಾರದೋ ಒತ್ತಾಯಕ್ಕಾಗಿ ಲೇಖನ ಬರೆಯುವುದು, ಪದೇ ಪದೇ ಒತ್ತಡ ತಂದ ಮೇಲೆ ಬರೆಯುವುದು ಅಗತ್ಯವಾದಾಗ ಲೇಖಕರು ಬರೆಯುತ್ತಾರೆ. ಈ ತರಹದ ವಿಚಾರಸಂಕಿರಣಗಳಲ್ಲಿ, ಅಥವಾ ಉಪನ್ಯಾಸದಲ್ಲಿ 'ಕಟ್ಟುನಿಟ್ಟಾಗಿ' ಒಂದೇ ವಿಷಯವನ್ನು ಬಿಗಿಹಿಡಿದು ಮಾತಾಡಬೇಕಾಗಿಲ್ಲ. ಅದು ಸಾಧ್ಯವೂ ಇಲ್ಲ. ಏಕಕಾಲಕ್ಕೆ ಅನೇಕ ವಿಷಯಗಳಿಗೆ ಪ್ರತಿಕ್ರಿಯಿಸುವುದು ಅಗತ್ಯವಾಗಿ ಬಿಡುತ್ತದೆ. ಎರಡನೆಯದು – ಅಧ್ಯಾಪಕರು ಎದುರಿಸುವ ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಓದು ಮತ್ತು ಮಂಡನೆ ಉಪನ್ಯಾಸಕರಿಗಂತೂ ಅನಿವಾರ್ಯ. ಈ ಎರಡು ಕಷ್ಟಗಳ ದೆಸೆಯಿಂದ ಬರೆಯುವುದೆಂದರೆ ಅದು ತಾರ್ಕಿಕವಾದ ಬೆಳವಣಿಗೆಯಾಗಬೇಕಿಲ್ಲ. ಅದು ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಪ್ರತಿಕ್ರಿಯೆಗಳು. 'ಅಮೂರ್ತತೆ ಮತ್ತು ಪರಿಸರ' ಸಂಕಲನದಲ್ಲಿಯೂ ಅಷ್ಟೆ: ಬೇರೆ ಬೇರೆ ದೃಷ್ಟಿಕೋನದ ಲೇಖಕರ ಬಗ್ಗೆ, ಅವರ ಸಾಹಿತ್ಯಕೃತಿಗಳ ಬಗ್ಗೆ ಚೆನ್ನಿಯವರು ಪ್ರತಿಕ್ರಿಯಿಸಿದ್ದಾರೆ. ಕಣವಿ, ರಾಮಚಂದ್ರಶರ್ಮ, ಜಿ.ಎಸ್.ಎಸ್., ಕುಂ.ವೀ., ಡಿ. ಆರ್. ನಾಗರಾಜ್ ಇವರ ಬಗ್ಗೆ ಇರುವ ಹಾಗೆಯೇ ಸಾಹಿತ್ಯ ತತ್ವಗಳನ್ನೇ ಕೇಂದ್ರವಾಗಿರಿಸಿಕೊಂಡ 'ಓದುವುದು ಅಂದರೆ', 'ಕುಸುಮ ಬಾಲೆ', 'ನಿರಚನವಾದಿ ಓದು' ಈ ತರಹದ ಲೇಖನಗಳೂ ಇವೆ. ಚೆನ್ನಿಯವರ ಬರವಣಿಗೆಯ ಕ್ರಮವೆಂದರೆ – ಎಲ್ಲವನ್ನೂ ನಿರ್ನಾಮ ಮಾಡುವುದಲ್ಲ. ಆಪ್ತವಾದ ಓದಿನ ಮೂಲಕ ಪುನರ್‌ಕಟ್ಟುವಿಕೆ ಅವರ ಆಸಕ್ತಿ. 'ರಾಮಚಂದ್ರಶರ್ಮರ ಕಾವ್ಯ'ದ ಕೊನೆಯಲ್ಲಿ ಚೆನ್ನಿಯವರು ಹೇಳುತ್ತಾರೆ : ''ಅಧ್ಯಾತ್ಮದ ಬಗ್ಗೆ, ಮೀರುವುದರ ಬಗ್ಗೆ ಹೆಚ್ಚು ಕಡಿಮೆ ಹುಟ್ಟಿನಿಂದಲೇ ನಮಗೆ ಶರ್ಮರ ಈ ಅಪರಿಪೂರ್ಣ, ಅಶುದ್ಧ ಜಗತ್ತು ಆಪ್ಯಾಯಮಾನವಾಗಿ ಕಾಣುತ್ತದೆ'' (ಪು. ೧೬೩).



ಪುಟ : ೨೬೪ ರೂ. ೧೮೦/-

ಅಭಿನವ ಪ್ರಕಾಶನ

'ಕಣವಿಯವರ ಸುನೀತಗಳು' ಲೇಖನದಲ್ಲಿ ''ಈ ವಯಸ್ಸಿನಲ್ಲೂ ಕಣವಿಯವರಿಗೆ ಅಧ್ಯಾತ್ಮದ ನಿರ್ಗುಣ ಆಕಾಶದ ಬದಲಾಗಿ ಸುನೀತದ ಬಂಧ-ಸ್ವಚ್ಛಂದಗಳೇ ಆಪ್ತವಾಗಿರುವುದು ಕನ್ನಡ ಭಾಷೆಯ ಸೌಭಾಗ್ಯ'' (ಪು.೧೨೬). 'ಜಿ.ಎಸ್.ಎಸ್.- ಪರಿವರ್ತನೆಗಳ ಸಂಧಿ ಭೂಮಿ' ಲೇಖನವು ಹೀಗೆ ಪ್ರಾರಂಭವಾಗುತ್ತದೆ : ''ಜಿ.ಎಸ್.ಎಸ್. ವ್ಯಕ್ತಿತ್ವದ ಒಂದು ಆಕರ್ಷಕ ಗುಣವೆಂದರೆ ಯಾವುದೇ ಕ್ರಿಯೆಯಾಗಲೀ ಅದೊಂದು ರಿಚುವಲ್, ಕರ್ಮಠ ಸಂಪ್ರದಾಯವಾಗಬಾರದು ಎನ್ನುವುದು. ಏನನ್ನು ಮಾಡಿದರೂ ತುಂಬಾ ಅರ್ಥಪೂರ್ಣವಾಗಿರಬೇಕೆಂಬ ಆಶಯದಿಂದಲೇ ಎಲ್ಲ ಕೆಲಸಗಳನ್ನು ಮಾಡಿಕೊಂಡು ಬಂದವರು.'' (ಪು.೧೪೭) ಇದು ರಾಜೇಂದ್ರ ಚೆನ್ನಿಯವರ ಬರಹದ ಕ್ರಮ. ಎಲ್ಲೂ ನಿಷ್ಠುರವಾಗದಂತೆ ಕವಿತೆಗಳನ್ನು ಓದುವುದು ಮತ್ತು ಗ್ರಹಿಸುವುದು ಸಾಧ್ಯವಾಗಿದೆ. ಟೀಕಿಸಲೇಬೇಕೆಂಬ ಹಟದಿಂದಾಗಲೀ, ಹೊಸ ಪುಸ್ತಕವೊಂದನ್ನು ವಿಮರ್ಶಿಸುವಾಗ ಕಡ್ಡಾಯವಾಗಿ ಎತ್ತಿ ತೋರಿಸಿ ಒಂದು ritual ಮುಗಿಸಬೇಕೆಂದೂ ಹೇಳುತ್ತಿಲ್ಲ: ಎಲ್ಲರ ಕೃತಿಗಳನ್ನು ಸಮಾನವಾಗಿ ನೋಡುವ ಈ ಕ್ರಮದಿಂದ ಒಂದು ವೈಚಾರಿಕ ಸಂಘರ್ಷವೇ ಕಾಣೆಯಾದಂತೆ ಭಾಸವಾಗುತ್ತದೆ. ಸಾಹಿತ್ಯ ಕೃತಿಗಳನ್ನು ವಿಮರ್ಶಿಸುವುದೆಂದರೆ ಬರಿಯ ರಸಾನುಭವದ ಪಯಣವಲ್ಲ. ಸ್ವಲ್ಪ ತಪ್ಪಿದರೂ ಈ ರೀತಿಯ ಬರಹಗಳು ಉದಾರವಾದಿ ಧೋರಣೆಯಾಗಿಬಿಡಬಹುದು. ರಾಜೇಂದ್ರ ಚೆನ್ನಿಯವರದ್ದು ಆ ಥರ ಆಗಿಲ್ಲ ನಿಜ. ಈ ತರಹದ ಲೇಖನಗಳಿಗೂ ಇದೇ ಸಂಕಲನದ 'ಅಮೂರ್ತತೆ ಮತ್ತು ಪರಿಸರ'ದಂತಹ ಲೇಖನಗಳಿಗೂ ವ್ಯತ್ಯಾಸವಿದೆ. ಈ ವ್ಯತ್ಯಾಸವಿರುವುದು ಧೋರಣೆಯಲ್ಲಿ. ಈ ಲೇಖನ ಕುತೂಹಲದಾಯಕವಾದುದು. ತುಂಬಾ ಒಳನೋಟ

ಡಾ|| ಕೇಶವ ಶರ್ಮ ಕೆ.

ಇರುವಂಥದ್ದು. ಹಾಗೆಯೇ ಈ ಲೇಖನದಲ್ಲಿ ಮುಖಾಮುಖಿ ಸಾಧ್ಯವಾಗಿದೆ. ಒಂದಂಶವೆಂದರೆ – ಈ ಲೇಖನವನ್ನು ಚೆನ್ನಿಯವರು ಬರೆದದ್ದು ೧೯೮೩ರಲ್ಲಿ, ರಾಮಚಂದ್ರಶರ್ಮರ ಬಗ್ಗೆ ಬರೆದದ್ದು ೨೦೦೨ರಲ್ಲಿ. ರಾಜೇಂದ್ರ ಚೆನ್ನಿಯವರು ಲೇಖಕರ ಸಾಹಿತ್ಯಕೃತಿಗಳನ್ನು ನೋಡುವಾಗ ಬಳಸಿಕೊಳ್ಳುವ ಪರಿಸರಕ್ಕೂ ಸಾಹಿತ್ಯ ತತ್ವ, ಮಾರುಕಟ್ಟೆ ಇತ್ಯಾದಿಗಳ ಬಗ್ಗೆ ಬರೆಯುವ ಕ್ರಮಕ್ಕೂ ವ್ಯತ್ಯಾಸವಿದೆ. ಅನಂತಮೂರ್ತಿಯವರ ಬಗ್ಗೆ ಬರೆಯುತ್ತಾ ರಾಜೇಂದ್ರ ಚೆನ್ನಿಯವರು ಹೀಗೆ ಹೇಳುತ್ತಾರೆ: ''ಅನಂತಮೂರ್ತಿಯವರಲ್ಲಿ ನವ್ಯ ಸಂವೇದನೆಯ ಸಮರ್ಥ ಅಭಿವ್ಯಕ್ತಿಯನ್ನು ಅದರ ಕೊರತೆಯ ಜತೆ ಕಾಣಬಹುದು. ನವ್ಯ ಸಂವೇದನೆ ಬೆಳೆಸಿದ ತೀವ್ರ ವ್ಯಕ್ತಿನಿಷ್ಠತೆಯಿಂದಾಗಿ ಪರಿಸರವೂ ಕೂಡ ವ್ಯಕ್ತಿಯ ಪ್ರಜ್ಞೆಯ ಅಂಶವಾಗಿ ಅಭಿವ್ಯಕ್ತಿಯಾಗುವ ನಿಷ್ಠೆಯ ಬದಲಾವಣೆ ಅವರ ಹೊತ್ತಿಗೆ ಆಗಿಬಿಟ್ಟಿತ್ತು. ಆದರೆ ಅವರು ಕೂಡ ಬ್ರಾಹ್ಮಣ ಸನ್ನಿವೇಶವನ್ನೇ ತಮ್ಮ ಸೃಷ್ಟಿಯ ಪರಿಸರವಾಗಿ ಬಳಸಿಕೊಳ್ಳುವುದು ಸ್ಪಷ್ಟವಾಗಿ'' (ಪು. ೭). ಅನಂತಮೂರ್ತಿಯವರ ಬರಹಗಳ ಜೊತೆಗೆ ಹೇಗೆ ಭಿನ್ನಾಭಿಪ್ರಾಯ ಸಾಧ್ಯವೆಂದು ಚೆನ್ನಿಯವರು ಖಚಿತವಾಗಿ ಹೇಳುತ್ತಾರೆ.

'ಸ್ವಾತಂತ್ರ್ಯಪೂರ್ವ ಕನ್ನಡ ಸಾಹಿತ್ಯ ಮತ್ತು ರಾಷ್ಟ್ರೀಯತೆ', 'ದಂತಗೋಪುರ ಮಾರುಕಟ್ಟೆ ಮತ್ತು ರಾಜಕೀಯ' – ಈ ಸಂಕಲನದ ಒಳ್ಳೆಯ ಲೇಖನಗಳು. ಸಾಮಾನ್ಯವಾಗಿ ಸಾಹಿತ್ಯ ವಿಮರ್ಶಕರು ಅಂತ ಪ್ರತ್ಯೇಕವಾಗಿ ಗುರುತಿಸಿಕೊಂಡು ಬರೆಯುವವರಿಗಿಂತ ಭಿನ್ನವಾದ ಪ್ರಶ್ನೆಗಳನ್ನು ಚೆನ್ನಿಯವರು ಎತ್ತಿಕೊಂಡಿದ್ದಾರೆ. ಈ ಲೇಖನ ತುಂಬಾ ಮಡಿ – ಮೈಲಿಗೆಯೆಂಬುದನ್ನು ಇಟ್ಟುಕೊಳ್ಳದಿರುವ ಲೇಖನ. ಇಂಥ ಲೇಖನಗಳು ಕನ್ನಡದಲ್ಲಿ ಬರುವುದು ತುಂಬಾ ಅಪರೂಪವೆಂದೇ ಹೇಳಬೇಕು. ರಾಜೇಂದ್ರ ಚೆನ್ನಿಯವರ ರಾಜಕೀಯ-ಸಾಮಾಜಿಕ ಬದ್ಧತೆಯನ್ನು ತೋರಿಸಿಕೊಡುವ ಲೇಖನವಿದು. ಇದು ಎಷ್ಟು ಚೆನ್ನಾಗಿದೆಯೆಂದರೆ – ಇದರ ವಿರುದ್ಧ ಮಾತಾಡುವುದು ಸಾಧ್ಯವೇ ಇಲ್ಲ.

ರಾಜೇಂದ್ರ ಚೆನ್ನಿಯವರ 'ಅಮೂರ್ತತೆ ಮತ್ತು ಪರಿಸರ' ಕೃತಿಯ ಎಲ್ಲಾ ಲೇಖನಗಳನ್ನು ಚರ್ಚಿಸುವುದು ಇಲ್ಲಿ ಸೂಕ್ತವಲ್ಲ, ಆ ಉದ್ದೇಶವೂ ಇಲ್ಲ. ಬಹಳ ವರ್ಷಗಳ ನಂತರ ಚೆನ್ನಿಯವರ ವಿಮರ್ಶಾ ಸಂಕಲನ ಬಂದಿದೆ. ಈ ಕೃತಿಯಲ್ಲಿ ಚರ್ಚೆಯಾಗಬೇಕಾದ ಸುಮಾರು ಅಂಶಗಳಿವೆ. ಈ ಕೃತಿಯನ್ನು ಒಪ್ಪಿಕೊಳ್ಳಲೇಬೇಕೆಂಬ ಹಟವಾಗಲೀ, ಒಪ್ಪಿಕೊಳ್ಳಬಾರದು ಎಂಬ ಹಟವಾಗಲೀ – ಇಟ್ಟುಕೊಳ್ಳದೇ ಹೋದರೆ ಇದರೊಂದಿಗೆ ವಾಗ್ವಾದ ಸಾಧ್ಯ. ಈಚೆಗೆ ಬೆಳೆಯುತ್ತಿರುವ ಒಂದು ಸಂಗತಿಯೆಂದರೆ - ನಿರ್ಲಕ್ಷ್ಯ, ಇನ್ನೊಬ್ಬ ವಿಮರ್ಶಕನನ್ನು ಓದಬಾರದು ಎಂಬ ಹಟ. ಇಲ್ಲಿ ಕೇಳುವುದು ಇಷ್ಟು, ಚರ್ಚೆಯಿಲ್ಲದೆ ಮುಂದೆ ಹೋಗುವುದಾದರೂ ಹೇಗೆ ? ರಾಜಕೀಯ – ಸಾಮಾಜಿಕ ಬದ್ಧತೆ ಇಟ್ಟುಕೊಂಡಿರುವ ರಾಜೇಂದ್ರ ಚೆನ್ನಿಯವರ ಬರಹಗಳು ಓದಲು ಅವಕಾಶ ಕಲ್ಪಿಸುತ್ತವೆ.

ಇಷ್ಟು ಹೇಳಿದರೆ 'ಅಮೂರ್ತತೆ ಮತ್ತು ಪರಿಸರ'ದ ಬಗೆಗೆ ಒಂದಿಷ್ಟು ಹೇಳಿದ ಹಾಗಾಯಿತು. ಇದರ ಮುಖಾಂತರ ಮತ್ತೆ ಕೆಲವು ವಿಷಯಗಳನ್ನು ಹೇಳಬಹುದು : ಈ ವಿಮರ್ಶಾ ಸಂಕಲನದಲ್ಲಿ ನಮ್ಮ ಚಿಂತನೆಯ ಕ್ರಮಗಳು ಎದುರಿಸುವ ಪ್ರಮುಖ ರೂಪಗಳಿವೆ. ಬೌದ್ಧಿಕ ಆತಂಕಗಳಿವೆ. ಅದು ರಾಷ್ಟ್ರೀಯತೆಯಿರಬಹುದು, ಕೋಮುವಾದವಿರಬಹುದು, ಜಾಗತೀಕರಣವಿರಬಹುದು. ಈ ವಿಷಯಗಳು ಬರಿಯ ತಾಟಸ್ಥ್ಯ ಧೋರಣೆಯನ್ನು ಅನುಸರಿಸದ ಹಾಗೆ ಮಾಡುತ್ತವೆ. ನಾವು ಕೇಳಿಕೊಳ್ಳಬೇಕಾದ ಅನೇಕ ಪ್ರಶ್ನೆಗಳನ್ನು ಚೆನ್ನಿ ಕೇಳುತ್ತಾರೆ. ಅದು ಮುಖ್ಯ.

**ಡಾ॥ ಕೇಶವ ಶರ್ಮ ಕೆ.**
ಉಪನ್ಯಾಸಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ
ಶಿವಮೊಗ್ಗ ಜಿಲ್ಲೆ

## ಬೇಟೆ

ಭರಭರನೆ
ಭೋರ್ಗರೆವ ವಾರಿಧಿಯ
ನಡುವಲೆಲ್ಲೊ
ಗಿರಗಿರನೆ ಸುರುಳಿ
ಸುತ್ತುತ್ತಾ ಸುತ್ತುತ್ತಿರುವ
ಹದ್ದು
ಏನನ್ನೋ ಕಂಡು
ನೀರಿನ ಮೇಲೆರಗಿ,
ಎರಗಿದಂತೆ ಕ್ಷಣದಿ
ಹಿಮ್ಮರಳಿ ಆಗಸವೇರಿ
ಕೆರಳಿರಲು –
ಮೊದಲಿಗಿಂತ ಎತ್ತರೆತ್ತರಕೆ
ಹಾರಿ, ಮೂರು–ಮೂರು–ನಾಲ್ಕಾರು
ಸುತ್ತಾಕಿ ಅಲುಗಿಸದೆ
ರೆಕ್ಕೆಗಳ ನಿಶ್ಚಲವಾಗಿ ದೇನಿಸುತ
ಎರಗಿದುದು ಥಟ್ಟನೆ ಮತ್ತೊಮ್ಮೆ –
ಪ್ರಹಾರಕೆ ಕಕ್ಕಾಬಿಕ್ಕಿಯಾಗಿ
ಎಗರಿ, ಮಿನುಗಿ, ಕಾಣೆಯಾದ
ಹಾರುವ ಮೀನುಗಳು !

ನಿರಂತರ ಸೋಲು
ಗೆಲುವಿನ ಮೆಟ್ಟಿಲಷ್ಟೆ!



ಒರೆಯಾದ ರೆಕ್ಕೆಗಳ
ತೇಲಿಸಿ
ಎರಗಿತು ಮತ್ತೊಮ್ಮೆ ಹಕ್ಕಿ
ಪುನಃ ಪುನಃ ಎಗರಿ ಎಗರಿ
ಹಾರುವ ಮೀನುಗಳು,
ಪುನಃ ಪುನಃ ವ್ಯರ್ಥ ಪ್ರಯತ್ನ
ಎಷ್ಟು ಸಹಜ ಬದುಕಿಗಾಗಿ ಹೋರಾಟ !

ಕ್ಷಣಕ್ಷಣವೂ ತರಂಗತರಂಗವಾಗಿ
ಪುಟಿದೇಳುವ ಸಮುದ್ರ,
ಪುಟ್ಟ ಪುಟ್ಟ ಜೀವರಾಶಿಗಳು
ತಣಕ್ಕನೆ, ಪಣಕ್ಕನೆ, ಮಿಣಕ್ಕನೆ
ತೇಲಿ ತೇಲಿ ತರಂಗವಾಗೆ ;
ದೃಢ ನಿಶ್ಚಯಕಿಂತ ಬೇರೆ ಶಕ್ತಿಯಿಹುದೆ ?
ಎಂಬಂತೆ ಗಿರಗಿಟ್ಟಲೆ ಹೊಡೆಯುತ
ಧ್ಯಾನಾಸಕ್ತ ಹದ್ದು
ರೊಯ್ಯನೆ ತೇಲಿ
ನೀರ ಮೇಲೆ
ಹಾರಿ ಕ್ಷಣದಿ
ಲೀನವಾದಂತೆ ನೀಲಾಂಬರದಿ
ಹಾರುವ ಮೀನಿನ
ಒದರಾಟ, ಹಾರಾಟ
ಐಕ್ಯವಾಯಿತು ಲೀನದೊಳಗೆ

ಜ.ನಾ. ತೇಜಶ್ರೀ
೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩೨೦೧

# ಪ್ಲಾಸ್ಟಿಕ್ : ಆಕರ್ಷಣೆ ಜೊತೆಗೆ ಅಪಾಯ

**ಸುನಂದಾ ಸೋರಗಾಂವಿ**

ಇಡೀ ವಿಶ್ವವೇ ಸಕಲ ಜೀವ ಸಂಕುಲಕ್ಕೆ ಪ್ರಕೃತಿ ನೀಡಿದ ಕೊಡುಗೆಯಾಗಿದೆ. ಪರಿಸರವಿಲ್ಲದೆ ಮಾನವ ಬದುಕುವುದು ಕಷ್ಟ. ಮಾನವನ ಜೀವನ ಮತ್ತು ಚಟುವಟಿಕೆಗಳ ಮೇಲೆ ಪರಿಸರವೂ ಗಾಢ ಪ್ರಭಾವ ಬೀರುತ್ತದೆ.

ಆಧುನಿಕತೆ ಮತ್ತು ತಾಂತ್ರಿಕತೆ ಬೆಳೆದಂತೆಲ್ಲಾ ಇಂದು ಪರಿಸರ ಮಾಲಿನ್ಯವೂ ಹೆಚ್ಚುತ್ತಿದೆ. ಮಾನವ ತಾನು 'ಪರಿಸರದ ಕೂಸು' ಎಂಬ ಕಟುಸತ್ಯವನ್ನು ಮರೆತು ಪರಿಸರದೊಡನೆ ಚೆಲ್ಲಾಟವಾಡುತ್ತಿದ್ದಾನೆ. ಪರಿಸರ ವಿಜ್ಞಾನಿ ಡೊನಾಲ್ಡ್ ರಾಯ್ ಹೇಳಿದ ''ಮಾನವ ಪರಿಸರದ ಪರಮ ನೀಚ ಶತ್ರು'' ಎಂಬ ಮಾತು ಮನುಷ್ಯನ ನಡವಳಿಕೆಯಿಂದ ಸಾಬೀತಾಗಿದೆ. ಆ ಮೂಲಕ ಅವನು ಹಲವಾರು ರೋಗಗಳ ರೂಪಗಳಲ್ಲಿ ಮೃತ್ಯುವಿಗೆ ಆಹ್ವಾನ ನೀಡುತ್ತಿದ್ದಾನೆ. ಜನರ ಆರೋಗ್ಯದ ಮೇಲೆ ಪರಿಸರ ಮಾಲಿನ್ಯವು ಹಲವಾರು ರೂಪಗಳಲ್ಲಿ ದುಷ್ಪರಿಣಾಮವನ್ನುಂಟುಮಾಡುತ್ತಲಿದ್ದು, ಅದರ ಒಂದು ರೂಪವಾದ ಪ್ಲಾಸ್ಟಿಕ್ ಮಾಲಿನ್ಯ ಕುರಿತಾಗಿ ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

**ಪ್ಲಾಸ್ಟಿಕ್ ಆವಿಷ್ಕಾರ**

ಪ್ಲಾಸ್ಟಿಕ್ ಆಧುನಿಕ ತಂತ್ರಜ್ಞಾನದ ವಿನೂತನ ಆವಿಷ್ಕಾರ. 'ಪ್ಲಾಸ್ಟಿಕ್' ನಮ್ಮ ಬದುಕಿನ ಬಗೆಯನ್ನೇ ಬದಲಾಯಿಸಿದ ಉಪಯುಕ್ತ ಸಾಧನ, ಇಂದು ಲಕ್ಷಾಂತರ ಜನರು ಬಳಸುತ್ತಿರುವ ಜನಪ್ರಿಯ ಸರಕು. ಅಗ್ಗದ ಬೆಲೆ, ಸುಲಭ ಸಾಗಾಣಿಕೆಯಿಂದ ಪ್ಲಾಸ್ಟಿಕ್ ಉತ್ಪನ್ನಗಳು ಜನಪ್ರಿಯವಾಗಿವೆ. ಇಂದು ಪ್ಲಾಸ್ಟಿಕ್ ಚೀಲಗಳಲ್ಲಿ ವಸ್ತುಗಳನ್ನು ತುಂಬಿಸಿಕೊಂಡು ಬರುವುದು ಒಂದು ಫ್ಯಾಶನ್. ಜನರಿಗೆ ಆಕರ್ಷಣೆ ಎನಿಸಿದ್ದನ್ನು ವ್ಯಾಪಾರಸ್ಥರೂ ಅವರಿಗೆ ಅನುಕೂಲವಾಗುವ ರೀತಿಯಲ್ಲಿ ಸಂಗ್ರಹಿಸಿಡುತ್ತಾರೆ. ಮಾರಾಟವಾಗುವ ಬೆಲೆಗಳು ಸಹ ಕೆಳಮಟ್ಟದಲ್ಲಿ ಇರುತ್ತವೆ. ಉದ್ದಿಮೆಗಳು ಸಹ ತಮ್ಮ ವಸ್ತುಗಳಿಗೆ ವಿಶಾಲ ಮಾರುಕಟ್ಟೆ ಸಾಧ್ಯವಾಗಬೇಕೆಂದು ಪ್ಲಾಸ್ಟಿಕ್ ವಸ್ತುಗಳ ಹೊಸ ವಿನ್ಯಾಸ ಮತ್ತು ಆಕರ್ಷಕ ಬಣ್ಣಗಳನ್ನು ತುಂಬಿ ಜನಮನವನ್ನು ಸೆಳೆಯುತ್ತಾರೆ. ದ್ರವ ತುಂಬುವ ಬಾಟಲಿಗಳು, ಊಟದ ಡಬ್ಬಿಗಳು, ವೈದ್ಯಕೀಯ ಬಳಕೆಯ ಸಾಮಗ್ರಿಗಳು, ಪಾಲಿಥಿನ್ ಬ್ಯಾಗುಗಳು, ಉಪಯೋಗಿಸಿ ಬಿಸಾಕುವ ವಸ್ತುಗಳು, ಪ್ಯಾಕ್ ಮಾಡಲು ಬಳಸುವ ಪ್ಲಾಸ್ಟಿಕ್ ಹಾಳೆ ಹೀಗೆ ಅನೇಕ ವಸ್ತುಗಳು ಪ್ಲಾಸ್ಟಿಕ್ ಪದಾರ್ಥಗಳಾಗಿವೆ.

ಇಂಥ ಪ್ಲಾಸ್ಟಿಕ್ ನಿರ್ಮಿತ ವಸ್ತುಗಳ ಅನುಕೂಲತೆಗಳು ಅನೇಕವಿದ್ದರೂ ಅವುಗಳ ಕರಾಳ ಮುಖವೂ ಇವೆ. ನಮ್ಮ ಬದುಕನ್ನೇ ಬರಿದಾಗಿಸುವ ಮಾಲಿನ್ಯಕಾರಕಗಳನ್ನು ಇವು ಒಳಗೊಂಡಿವೆ.

ಪ್ಲಾಸ್ಟಿಕ್ ನಿರ್ಮಿತ ವಸ್ತುಗಳ ಅನುಕೂಲತೆಗಳು ಅನೇಕವಿದ್ದರೂ ಅವುಗಳ ಕರಾಳ ಮುಖವೂ ಇದೆ. ನಮ್ಮ ಬದುಕನ್ನೇ ಬರಿದಾಗಿಸುವ ಮಾಲಿನ್ಯಕಾರಕಗಳನ್ನು ಇವು ಒಳಗೊಂಡಿವೆ.

**ಪ್ಲಾಸ್ಟಿಕ್ ಮಾಲಿನ್ಯ**

ಅತಿಯಾದ ಪ್ಲಾಸ್ಟಿಕ್ ವಸ್ತುಗಳ ಬಳಕೆಯಿಂದ ಮಾಲಿನ್ಯವು ಹೆಚ್ಚಾಗುತ್ತದೆ. ಅದರಿಂದ ತಯಾರಾದ ವಸ್ತುಗಳನ್ನು ಬಳಸಿ ಬಿಸಾಡಿದ ಮೇಲೆ ಅವು ಕೊಳೆಯದೇ ಇರುವುದು ಪರಿಸರ ಮಾಲಿನ್ಯಕ್ಕೆ ಕಾರಣವಾಗುತ್ತದೆ. ಪ್ಲಾಸ್ಟಿಕ್ ವಸ್ತುಗಳನ್ನು ಉತ್ಪಾದಿಸುವ ಕಾರ್ಖಾನೆಗಳು ಪರಿಸರಕ್ಕೆ ಅಪಾರವಾದ ಮಲಿನ ಪದಾರ್ಥಗಳನ್ನು ಹೊರಹಾಕಿ ಅನಾಹುತಗಳ ಸರಮಾಲೆಯನ್ನೇ ಸೃಷ್ಟಿಸುತ್ತಿವೆ.



ಪ್ಲಾಸ್ಟಿಕ್ ಬಳಕೆಯಿಂದಾಗುವ ದುರಂತಗಳು ಅನೇಕ. ಅದರ ದುಷ್ಪರಿಣಾಮಗಳು ಒಮ್ಮೆಲೇ ಕಾಣಿಸಿಕೊಳ್ಳದೇ ನಿಧಾನವಾಗಿ ಕಾಲದ ಗತಿಯಲ್ಲಿ ಸದ್ದಿಲ್ಲದೇ ಜೀವಕ್ಕೆ ಕುತ್ತು ತರುತ್ತವೆ. ಪ್ಲಾಸ್ಟಿಕ್ ವಸ್ತುಗಳ ಉಪಯೋಗವು ವಿವಿಧ ಬಗೆಯ ಮಾಲಿನ್ಯಕ್ಕೆ ಕಾರಣವಾಗುತ್ತದೆ.

ಪ್ಲಾಸ್ಟಿಕ್ ವಸ್ತುಗಳನ್ನು ಒಂದೆಡೆ ರಾಶಿ ಹಾಕಿ ಸುಡುವುದರಿಂದ ವಿಷಪೂರಿತ ಅನಿಲಗಳು ಹೊರಹೊಮ್ಮಿ ವಾತಾವರಣವನ್ನು ಸೇರಿ ವಾಯುಮಾಲಿನ್ಯಕ್ಕೆ ಕಾರಣವಾಗುತ್ತವೆ. ಬಹಳ ಕಾಲದವರೆಗೆ ಪ್ಲಾಸ್ಟಿಕ್ ಪದಾರ್ಥಗಳನ್ನು ಒಂದೇ ಕಡೆ ಗುಡ್ಡೆ ಹಾಕುವುದರಿಂದ ಅವುಗಳಲ್ಲಿ ಇರುವ ರಾಸಾಯನಿಕಗಳು ಭೂಮಿಯಲ್ಲಿ ಸೇರಿ ಆ ಪ್ರದೇಶವು ವಿಷಯುಕ್ತವಾಗಿ ಅಲ್ಲಿನ ಮಣ್ಣು ಮಲಿನವಾಗುತ್ತದೆ. ಪ್ಲಾಸ್ಟಿಕ್ ಕಾರ್ಖಾನೆಗಳಿಂದ ಹರಿದುಬರುವ ದೋಷಯುಕ್ತ ನೀರು ಸಮೀಪದ ಜಲಮೂಲಗಳನ್ನು ಸೇರಿ ಜಲಮಾಲಿನ್ಯ ಹೆಚ್ಚುತ್ತದೆ. ಕೆಲವೆಡೆ ತಗ್ಗು ತೋಡಿ ಕಾಲುವೆ ನಿರ್ಮಿಸಿ ಅದಕ್ಕೆ ಕಾರ್ಖಾನೆಗಳ ಹೊಲಸು ನೀರನ್ನು ಬಿಡಲಾಗುತ್ತಿದೆ. ಇದು ಅಂತರ್ಜಲವನ್ನೇ ಕಲುಷಿತಗೊಳಿಸುತ್ತದೆ.

ಇನ್ನು ಪಾಲಿಥಿನ್ ಚೀಲಗಳಲ್ಲಿ ಹಾಕಿದ ತಿಂಡಿ ತಿನಸುಗಳನ್ನು ಸತತವಾಗಿ ಬಹಳ ಕಾಲದವರೆಗೆ ಸೇವಿಸುವುದರಿಂದ ಮನುಷ್ಯನಿಗೆ ಹಲವು ಪ್ರಕಾರದ ಕ್ಯಾನ್ಸರ್ ರೋಗವೂ ಬರುವ ಸಾಧ್ಯತೆಗಳಿವೆ. ಪಾಲಿಥಿನ್ ನಿರ್ಮಿತ ವಸ್ತುಗಳಲ್ಲಿ ಸಂಗ್ರಹಿಸಿದ ತಿನಿಸುಗಳನ್ನು ಬಹುಕಾಲದವರೆಗೆ ಸೇವಿಸುತ್ತಾ ಬಂದರೆ ಪುರುಷರಲ್ಲಿ ನಪುಂಸಕತೆ ಉಂಟಾಗುವ ಅಪಾಯವನ್ನು ಇತ್ತೀಚಿನ ವೈದ್ಯಕೀಯ ಸಂಶೋಧನೆಗಳು ವ್ಯಕ್ತಪಡಿಸಿವೆ. ಅನಾರೋಗ್ಯವಾದಾಗ ನಾವು ತೆಗೆದುಕೊಳ್ಳುವ ಕ್ಯಾಪ್ಸೂಲುಗಳು ಸತತವಾಗಿ ಬಹಳ ದಿವಸಗಳವರೆಗೆ ತೆಗೆದುಕೊಳ್ಳುವುದರಿಂದ ಅವುಗಳ ಪ್ಲಾಸ್ಟಿಕ್ ಆವರಣ ನಮ್ಮ ಹೊಟ್ಟೆಯಲ್ಲಿ ಶೇಖರಣೆಗೊಳ್ಳುವುದು ಬಹಳ ಅಪಾಯಕಾರಿಯಾಗಿದೆ.

ದನಕರುಗಳು ಆಕಸ್ಮಿಕವಾಗಿ ಪ್ಲಾಸ್ಟಿಕ್ ಪದಾರ್ಥಗಳನ್ನು ಸೇವಿಸಿದರೆ, ಅವು ಜೀರ್ಣವಾಗದೆ ಹಾಗೆಯೇ ಉಳಿದು ಜೀವಕ್ಕೆ ಸಂಚಕಾರ ತರುತ್ತವೆ. ಬೆಂಗಳೂರಿನಲ್ಲಿ ಒಂದು ಆಕಳ ಹೊಟ್ಟೆಯಲ್ಲಿ ಕೆಜಿಗಟ್ಟಲೆ ಪ್ಲಾಸ್ಟಿಕ್ ಚೀಲಗಳು ಸಿಕ್ಕಿದ್ದು ವರದಿಯಾಗಿದೆ. ಪಾರ್ಕ್‌ಗಳಿಗೆ ಹಾಗೂ ನದಿ ಸಮುದ್ರಗಳು ಮುಂತಾದ ಸೌಂದರ್ಯ ತಾಣಗಳಿಗೆ ಹೋಗುವ ಜನರು ತಮ್ಮೊಂದಿಗೆ ಪಾನೀಯ ಬಾಟಲಿಗಳನ್ನು ಅಲ್ಲಿಯೇ ಬಿಸಾಕಿ ಬರುತ್ತಾರೆ. ಹಕ್ಕಿ ಪಕ್ಷಿಗಳು ಅದರಲ್ಲಿರುವ ತಿಂಡಿ ತಿನಿಸುಗಳ ಆಸೆಯಿಂದ ತಮ್ಮ ಚೊಂಚುಗಳನ್ನು ಅಥವಾ ಕೊರಳನ್ನೂ ಅದರಲ್ಲಿ ಸಿಕ್ಕಿಸಿಕೊಂಡು ಅವುಗಳನ್ನು ಬಿಡಿಸಿಕೊಳ್ಳುವ ವಿಫಲಯತ್ನ ಮಾಡಿ ತಮ್ಮ ಪ್ರಾಣ ಕಳೆದುಕೊಳ್ಳುತ್ತವೆ.

ಪ್ಲಾಸ್ಟಿಕ್‌ನಿಂದ ತಯಾರಿಸಲ್ಪಟ್ಟ ಆಟಿಕೆ ಸಾಮಾನುಗಳು ಸಹ ಮೇಲ್ನೋಟಕ್ಕೆ ಅನಪಾಯಕಾರಿ ಎಂದು ಕಂಡರೂ ಅವು ಮಕ್ಕಳ ಮೇಲೆ ಭೀಕರ ಪರಿಣಾಮವನ್ನು ಬೀರುತ್ತವೆ. ಸಣ್ಣಪುಟ್ಟ ಆಟಿಕೆ ಸಾಮಾನುಗಳನ್ನು ಬಾಯಲ್ಲಿ ಇಟ್ಟುಕೊಂಡು ಚೀಪುವುದೆಂದರೆ ಚಿಕ್ಕ ಮಕ್ಕಳಿಗೆ ಬಹಳ ಸಂತೋಷ. ಆದರೆ ಇಂತಹ ಆಟಿಕೆಗಳಲ್ಲಿ 'ಥ್ಯಾಲೇಟ' ಎಂಬ ರಾಸಾಯನಿಕ ಅಂಶ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಮಕ್ಕಳ ಮಾನಸಿಕ ಹಾಗೂ ಶಾರೀರಿಕ ಬೆಳವಣಿಗೆ ಕುಂಠಿತಗೊಳ್ಳುತ್ತದೆ.

**ಪ್ಲಾಸ್ಟಿಕ್ ಮಾಲಿನ್ಯ ನಿವಾರಣೆ**

ಮೇಲ್ನೋಟಕ್ಕೆ ಮೃದುವಾಗಿ ಅಂದವಾಗಿ ಕಾಣುವ ಪ್ಲಾಸ್ಟಿಕ್ ನಿರ್ಮಿತ ವಸ್ತುಗಳು ನಮ್ಮ ಜೀವಕ್ಕೆ ಸದ್ದಿಲ್ಲದೆ ಸಂಚಕಾರ ತರುತ್ತವೆ. ಅವುಗಳ ಬಳಕೆಯನ್ನು ನಿಷೇಧಿಸಬೇಕು. ಈಗಾಗಲೆ ಹಲವಾರು ದೇಶಗಳಲ್ಲಿ ಪ್ಲಾಸ್ಟಿಕ್ ವಸ್ತುಗಳನ್ನು ಬಳಸದಂತೆ ಅಲ್ಲಿಯ ಸರ್ಕಾರಗಳು ಕಠಿಣ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡಿವೆ. ರಾಜಕೀಯ ರ್‍ಯಾಲಿಗಳಲ್ಲೂ ಸಾವಿರಾರು ಪ್ಲಾಸ್ಟಿಕ್ ಧ್ವಜ ಹಂಚುವ ಭಾರತೀಯರು ಈ ದೇಶಗಳಿಂದ ಕಲಿಯಬೇಕಾದ್ದು ಸಾಕಷ್ಟಿದೆ.

ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಧ್ವಜಗಳ ಮಾರಾಟ ಹೆಚ್ಚಾಗಿದ್ದು ಧ್ವಜದ ಬಗ್ಗೆ ಇರುವ ಗೌರವ ಕೂಡ ಕಡಿಮೆಯಾಗುತ್ತಿದೆ. ಬಳಕೆ ಮಾಡಿದ ನಂತರ ಈ ಪ್ಲಾಸ್ಟಿಕ್ ಧ್ವಜಗಳು ರಸ್ತೆಯ ಮೇಲೆ ಬಿದ್ದಿರುತ್ತವೆ. ಆದ್ದರಿಂದ ಮುಂಜಾಗ್ರತೆ ವಹಿಸಿ ಧ್ವಜ ಮಾರಾಟ ನಿಷೇಧಿಸಬೇಕು.

ಮುಂದಿನ ಪುಟಕ್ಕೆ

# ಎಲೆಲೆ! ಎಲೆ !!




ಗಿಡ-ಮರ-ಬಳ್ಳಿಗಳ ಬಹುಮುಖ್ಯ ಭಾಗವೇ ಎಲೆಗಳು. ಬಹುಶಃ ಎಲೆಗಳಿಲ್ಲದ ಗಿಡ-ಮರ-ಬಳ್ಳಿಗಳು ಯಾರ ಕಣ್ಣಿಗೂ ಬೀಳುವುದಿಲ್ಲ, ಹಸು-ಕುರಿಗಳ ಬಾಯಿಗೂ ಸಿಕ್ಕುವುದಿಲ್ಲ. ಎಲೆಗಳಿಲ್ಲದ ಬೋಳುಮರ ಯಾರ ಕಣ್ಣಿಗೆ ತಾನೇ ಸೊಗಸೀತು? ಗಿಡ-ಮರಗಳ ಸೌಂದರ್ಯವಿರುವದೇ ಅದರ ಎಲೆಗಳಲ್ಲಿ, ಅದರ ಹಸಿರಿನಲ್ಲಿ!

ಎಲೆಗಳನ್ನು ಗಮನಿಸಿ ನೋಡಿ. ಎಷ್ಟೊಂದು ವೈವಿಧ್ಯಮಯ ಎಲೆಗಳು! ಸಾಸಿವೆ ಕಾಳಿನಷ್ಟು ಪುಟ್ಟದಾದ ಎಲೆಗಳಿರುವಂತೆ, ನಮಗಿಂತಲೂ ಉದ್ದವಾದ, ಅಗಲವಾದ ಎಲೆಗಳಿರುತ್ತವೆ. ಎಲೆಗಳ ಆಕಾರವೂ ಎಷ್ಟೊಂದು ಬಗೆಯದು! ಗೋಲಾಕಾರದ ಎಲೆಗಳು, ಕಡ್ಡಿಯಂತೆ ಎಲೆಗಳು, ಗೆರೆಯಂತೆ ಕೆಲವು, ಹೂವಿನಾಕಾರದ, ಗೆಡ್ಡೆಯಾಕಾರದ ಎಲೆಗಳು ಹಲವು. ಹೃದಯದಾಕಾರದ ಎಲೆಗಳೂ ಇವೆ, ಬೇಕೆ? ಸುಂದರವಾದ ಕಮಲದ ಎಲೆಗಳನ್ನು ನಿಮ್ಮ ಪ್ರೇಮಿಗೆ ಪತ್ರ ಬರೆಯಲು ಉಪಯೋಗಿಸಬಹುದು. ಎಲೆಗೆ 'ಪತ್ರ'ವೆಂದೇ ಹೇಳುತ್ತಾರೆ, ಗೊತ್ತೇ? ತಾಳೆಗರಿಯ ಎಲೆಗಳಲ್ಲಿ ಜ್ಞಾನಸಮುದ್ರವನ್ನೇ ನಮ್ಮ ಹಿರಿಯರು ಹಿಡಿದಿಟ್ಟದ್ದರು.

ಎಲೆಗಳ ಉಪಯೋಗ ಎಷ್ಟೊಂದು ವಿಧದಲ್ಲಿ! ಕಾಡು ಮನುಷ್ಯನಿಗೆ ಎಲೆಗಳೇ ಉಡುಗೆ-ತೊಡುಗೆ ಆಗಿದ್ದವು. ಋಷಿಗಳು ವಾಸಿಸುತ್ತಿದ್ದುದು ಪರ್ಣಕುಟಿಗಳಲ್ಲಿ. ನಾಗರಿಕ ಮನುಷ್ಯನಾದರೂ ಎಲೆಗಳನ್ನು ಅವಲಂಬಿಸಿಯೇ ಬದುಕಬೇಕಾಗುತ್ತದೆ. ಸೊಪ್ಪಿನ ರೂಪದಲ್ಲಿ ಬಸಳೆ, ಮೆಂತೆ, ಹರಿವೆ, ಕೆಸವು, ಪಾಲಕ... ಮುಂತಾದ ಎಲೆಗಳನ್ನು ಉಪಯೋಗಿಸುತ್ತೇವೆ. ಕರಿಬೇವಿನ ಎಲೆಗಳಿಲ್ಲದೆ ನಮ್ಮ ಸಾರು ರುಚಿಯಾಗುವುದಿಲ್ಲ, ಕೊತ್ತಂಬರಿ ಸೊಪ್ಪಿಲ್ಲದ ಚಟ್ನಿ ಚಪ್ಪೆ!

ವೀಳ್ಯದೆಲೆ, ಮಾವಿನ ಎಲೆ, ಬಾಳೆ ಎಲೆಗಳಿಲ್ಲದೆ ನಮ್ಮ ಮಂಗಳ ಕಾರ್ಯಗಳು ನಡೆಯುವುದಿಲ್ಲ. ಮನೆಗೆ ಬಂದ ಮುತ್ತೈದೆಗೆ ವೀಳ್ಯದೆಲೆ ಇಲ್ಲದೆ ಹಾಗೇ ಕಳಿಸುವುದು ಸಂಪ್ರದಾಯಸ್ಥರಿಗೆ ಸೇರುವುದಿಲ್ಲ. ಭಟ್ಟರ ದಕ್ಷಿಣೆಗೆ ಗೌರವವಿರುವದು, ವೀಳ್ಯದೆಲೆಯಲ್ಲಿ ಅದನ್ನು ಕೊಟ್ಟಾಗಲೇ! ಮಾವಿನ ಎಲೆ ತೋರಣವಿಲ್ಲದೆ, ನಮ್ಮ ಹಬ್ಬ, ಮದುವೆ - ಮುಂಜಿ ಚೆಂದ ಕಾಣುವುದಿಲ್ಲ. ಬಾಳೆಎಲೆಯ ಊಟದ ಸೊಗಸು, ಸ್ಟೀಲ್ ಪ್ಲೇಟಿಗೆಲ್ಲಿ?

ಬಾಳೆ ಎಲೆಯ ದೊನ್ನೆ ಮದುವೆ ಮನೆಗೂ ಬೇಕು, ಸಾವಿನ ಮನೆಗೂ ಬೇಕು. ಮುತ್ತುಗದ ಹೂವನ್ನು ನಮ್ಮ ಸುಭಾಷಿತಕಾರರು 'ಗುಣವಿಲ್ಲದ ಹೆಣ್ಣಿನ' ಜೊತೆ ಗಂಟು ಹಾಕಿದ್ದರೂ, ಮುತ್ತುಗದ ಎಲೆಗಳ 'ಪತ್ರಾವಳಿ' ಅನೇಕರ ಹೊಟ್ಟೆಗೆ ಹಿಟ್ಟನ್ನು ಒದಗಿಸಿದೆ. ಉಗುರಿನ ಬಣ್ಣಕ್ಕೆ ಮೆಹಂದಿ, ರುಚಿಕರ ಪಾನೀಯಕ್ಕೆ ಚಹಾದೆಲೆಗಳು ಬೇಕು.

ಮರ-ಗಿಡ-ಬಳ್ಳಿಗಳ ಎಲೆಗಳು ಪ್ರತ್ಯಕ್ಷವಾಗಿ ಮಾಡುವ ಉಪಕಾರಗಳು ಎಲ್ಲರಿಗೂ ತಿಳಿದಿರುತ್ತದೆ. ಆದರೆ ವಿಜ್ಞಾನದ ಕಣ್ಣಿನಿಂದ ನೋಡಿದಾಗ ಎಲೆಗಳೆಂಬ ಸ್ವಯಂ ಆಹಾರ ತಯಾರಿಸುವ ಪರಿಪೂರ್ಣ ಕಾರ್ಖಾನೆಗಳಾಗಿ ಕಾರ್ಯ ನಿರ್ವಹಿಸುತ್ತವೆ. ತನ್ನಲ್ಲಿರುವ ಹರಿತ್ ಮೂಲಕ, ಅಂಗಾರಾಮ್ಲವನ್ನು ಬಳಸಿ, ಬೆಳಕಿನಲ್ಲಿ ಆಹಾರ ತಯಾರಿಸಿ, ನಿಸರ್ಗಕ್ಕೆ ಪ್ರಾಣವಾಯುವನ್ನು ಸೇರಿಸುವ ಎಲೆಗಳಿಲ್ಲದಿದ್ದರೆ ನಮ್ಮ ಬದುಕೇನಾಗುತ್ತಿತ್ತೋ! ನಿಜಕ್ಕೂ ಮರಳುಗಾಡಲ್ಲವೆ?



ಹಣ್ಣೆಲೆ ಉದುರುವಾಗ ಹಸಿರೆಲೆಗಳು ನಗುತ್ತವಂತೆ! ಎಲೆಗಳನ್ನು ಅದೊಂದು ರೂಪಕವಾಗಿ ಬಳಸಿ ಮಾನವ ಸ್ವಭಾವಕ್ಕೆ ಅನ್ವಯಿಸುವ ಗಾದೆ. ಆದರೆ ಹಣ್ಣೆಲೆ ಉದುರಿ, ಗೊಬ್ಬರವಾಗಿ ಮತ್ತೆ ಭೂಮಿಯನ್ನು ಫಲವತ್ತಾಗಿ ಮಾಡುತ್ತದೆ.

ಪಾರ್ವತಿ, ಪರಮೇಶ್ವರನಿಗಾಗಿ ತಪಸ್ಸು ಮಾಡುವಾಗ, ಮೊದಲು ಗಿಡದಿಂದ ಉದುರಿದ ಎಲೆಗಳನ್ನು ಮಾತ್ರ ತಿನ್ನುತ್ತಿದ್ದಳಂತೆ. ಆದ್ದರಿಂದ ಆಕೆ 'ಸುಪರ್ಣಾ' ಎನಿಸಿದಳು. ನಂತರ ಅದನ್ನೂ ತಿನ್ನುವುದನ್ನು ಬಿಟ್ಟದ್ದರಿಂದ 'ಅಪರ್ಣಾ' ಆದಳು. ನಾವೆಲ್ಲರೂ ಜಗನ್ಮಾತೆಯಂತೆ ಅಪರ್ಣರಾಗುವುದು ಸಾಧ್ಯವಿಲ್ಲ, ಅಲ್ಲದೆ, ಆಕೆಗಾದರೂ ತನ್ನನ್ನು ೨೧ ರೀತಿಯ ಎಲೆಗಳಿಂದ ಅರ್ಚಿಸಿದರೆ ಸುಪ್ರೀತಳಾಗುವುದಾಗಿ ಗೌರೀವ್ರತ ಹೇಳುತ್ತದೆಯಲ್ಲವೆ?

ಶ್ರೀಕೃಷ್ಣನಾದರೂ ತನ್ನನ್ನು "ಪತ್ರಂ, ಪುಷ್ಪಂ, ಫಲಂ, ತೋಯಂ" ಯಾವುದರಿಂದಲಾದರೂ ಭಕ್ತಿಯಿಂದ ಅರ್ಚಿಸಿದರೆ ಸಾಕೆಂದು ಎಲೆಗಳನ್ನು ಹೂ-ಹಣ್ಣುಗಳ ಸ್ಥಾನಕ್ಕೇ ಸೇರಿಸಿಲ್ಲವೆ? ತುಲಸೀದಳವೇ ಶ್ರೀಕೃಷ್ಣನ ತೂಕಕ್ಕೆ ಸರಿ ಎಂದ ಮೇಲೆ ಕೇಳುವುದೇನು?

ಆಹಾರಕ್ಕಾಗಿ, ಅಲಂಕಾರಕ್ಕಾಗಿ, ಔಷಧಿಗಾಗಿ, ಮನೆಯ ಮಾಡಿಗಾಗಿ, ಗೊಬ್ಬರವಾಗಿ, ಪೂಜೆಗಾಗಿ, ಪ್ರಾಣವಾಯುವಿನ ದಾನಿಯಾಗಿ ಹಲವು ವಿಧಗಳಲ್ಲಿ ಸಾರ್ಥಕವಾಗುವ ಎಲೆಗಳನ್ನು ನೋಡಿ ಹೀಗನ್ನಬಹುದೆ? "ಎಲೆಲೆ! ಎಲೆ!! ನಿನ್ನಯ ಸಮಾನರಾರಿಹರು?"

**ವಿಜಯಾ ಶ್ರೀಧರ್**
೧ನೇ ಮುಖ್ಯರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ - ೫೭೭೨೦೪

---

*ಹಿಂದಿನ ಪುಟದಿಂದ*

ಪಾಲಿಥಿನ್ ಬ್ಯಾಗ್‌ಗಳ ಬಳಕೆಯ ಮೇಲೆ ಸರ್ಕಾರ ನಿರ್ಬಂಧ ಹೇರಬೇಕು. ಪ್ಲಾಸ್ಟಿಕ್ ಚೀಲಗಳಿಗೆ ಪರ್ಯಾಯವಾಗಿ ಬಟ್ಟೆ, ಸೆಣಬು ನಿರ್ಮಿತ ಚೀಲಗಳನ್ನು ಸಾರ್ವತ್ರಿಕವಾಗಿ ಬಳಸಬೇಕು. ಆಧುನಿಕತೆಯ ಸೋಗಿನಲ್ಲಿ ಉಪಯೋಗಿಸುತ್ತಿರುವ 'ಬಳಸಿ ಬಿಸಾಕುವ' ಪದಾರ್ಥಗಳಿಗೆ ಕಡಿವಾಣ ಹಾಕಬೇಕು.

ಪ್ಲಾಸ್ಟಿಕ್ ರದ್ದಿಯನ್ನು ಮಣ್ಣಿನಲ್ಲಿ ಹೂತರೂ ಕಷ್ಟ; ಸುಟ್ಟರೂ ಅಪಾಯ. ಮರು ಬಳಕೆಗೆಂದು ಕರಗಿಸಿ ಮತ್ತೆ ಮೋಲ್ಡ್ ಮಾಡಿದರೂ ಅಷ್ಟೆ. ಶನಿ ತೊಲಗಲೆಂದು ಸುಟ್ಟರೆ ಕಮಟು ವಾಸನೆಯಿಂದ ಮತ್ತಷ್ಟು ಕಾಯಿಲೆಗಳು, ಮತ್ತಷ್ಟು ಸಮಸ್ಯೆಗಳು. ಇದಕ್ಕೆ ಪರಿಹಾರವೊಂದನ್ನು ಬೆಂಗಳೂರಿನ ಅಹಮದ್ ಖಾನ್ ಅವರು ಕಂಡುಹಿಡಿದಿದ್ದಾರೆ. ಅದೆಂದರೆ ದೇಶದಲ್ಲೇ ಮೊಟ್ಟಮೊದಲ ಬಾರಿಗೆ ಪ್ಲಾಸ್ಟಿಕ್ ತ್ಯಾಜ್ಯ ವಸ್ತುಗಳಿಂದ ತಯಾರಾದ ಟಾರ್ ರಸ್ತೆಗಳು. ಇಂತಹ ರಸ್ತೆಗಳು ಬೆಂಗಳೂರಿನಲ್ಲಿ ನಿರ್ಮಿತವಾಗುತ್ತಿವೆ. ಇದರಿಂದಾಗಿ ರಸ್ತೆಯ ಗುಣಮಟ್ಟವೂ ಹೆಚ್ಚಿದೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ಲಾಸ್ಟಿಕ್ ತ್ಯಾಜ್ಯ ವಸ್ತುಗಳ ಸಮಸ್ಯೆಗೆ ಒಂದು ಗಟ್ಟಿ ಪರಿಹಾರ ಸಿಕ್ಕಿದೆ. ಪರಿಸರ ಪ್ರಿಯರಿಗೆ ಇದೊಂದು ಸಿಹಿಸುದ್ದಿ! ವಾರ್ವಿಕ್‌ನ್ ಸಂಶೋಧಕ ತಂಡವು ಜೈವಿಕವಾಗಿ ಬೆರೆಯಬಲ್ಲ ಹೊಸ ಬಗೆಯ ಪ್ಲಾಸ್ಟಿಕ್ಕನ್ನು ಕಂಡುಹಿಡಿದಿದೆ. ಇದು ವಾಹನಗಳಿಗಾಗಿ ಬಳಸಲಾಗುವ ವಿಶಿಷ್ಟ ಹೊಸ ರೀತಿಯದು. ನೈರುತ್ಯ ಏಷ್ಯಾದಲ್ಲಿ ಬೆಳೆಯಲಾಗುವ ದೈತ್ಯ ಹುಲ್ಲು 'ಎಲಿಫೆಂಟ್ ಗ್ರಾಸ್'ನಿಂದ ಇದು ತಯಾರಿಸಲ್ಪಟ್ಟಿದೆ. ಡ್ಯಾಶ್ ಬೋರ್ಡ್‌ನಂತಹ ಅಗಲದ ವಸ್ತುಗಳನ್ನು ಕೂಡ ಮಾಡಬಹುದಾದ ಸಾಮರ್ಥ್ಯ ಹೊಂದಿರುವ ಬಿದಿರಿನಂತಹ ಈ ಹುಲ್ಲಿನಿಂದ ಒಂದು ವಿಶಿಷ್ಟ ಮಿಶ್ರಣವಸ್ತುವನ್ನು ತಯಾರಿಸಲಾಗುತ್ತದೆ. ಪರಿಸರ ಪ್ರಿಯ ಕಾರುಗಳನ್ನು ತಯಾರಿಸುವ ಸಂಸ್ಥೆಗಳು ಈ ಪ್ಲಾಸ್ಟಿಕ್‌ನಿಂದ ಮಾಡಿದ ವಾಹನಗಳ ಸಲಕರಣೆಯನ್ನು ಬಳಸಿಕೊಳ್ಳುವುದು ಸೂಕ್ತ. ಇದರಿಂದ ಪ್ಲಾಸ್ಟಿಕ್ ಪದಾರ್ಥಗಳ ಕಾರಣ ತುಕ್ಕುಹಿಡಿದ ವಾಹನಗಳ ಸಮಸ್ಯೆಯು ನಿವಾರಣೆಯಾಗುತ್ತದೆ.

ಜೀವನಶೈಲಿಯನ್ನು ನಿರ್ಧರಿಸುವಾಗ, ಆಕರ್ಷಕವಾದದ್ದನ್ನು ಆಯ್ಕೆ ಮಾಡಿಕೊಳ್ಳುವಾಗ ನಾವು ಮಾಡಿಕೊಳ್ಳಲಿರುವ ಬದಲಾವಣೆ ಇತರ ಜೀವಸಂಕುಲದ ಮೇಲೆ ಬೀರುವ ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳುವುದು ಅಗತ್ಯ. ಅದರಿಂದಾಗಿ ಅನೇಕ ಜೀವರಾಶಿಗಳು ಸಾಯುತ್ತವೆ. ಒಟ್ಟಾರೆ ಪ್ಲಾಸ್ಟಿಕ್ ಮಾಲಿನ್ಯದ ಬಗ್ಗೆ ಮಾನವ ಜನಾಂಗ ಬೇಗ ಎಚ್ಚೆತ್ತುಕೊಳ್ಳಬೇಕಾಗಿದೆ. ಪರಿಸರ ಸಂರಕ್ಷಣೆ ಕೇವಲ ಕೆಲವೇ ಜನರು ಮಾಡುವ ಕೆಲಸವಲ್ಲ, ಇದರಲ್ಲಿ ಸರ್ಕಾರದ ಮತ್ತು ಜನಸಮೂಹದ ಸಂಪೂರ್ಣ ಭಾಗವಹಿಸುವಿಕೆ ಇರಬೇಕಾಗುತ್ತದೆ.

**ಸುನಂದಾ ಸೋರಗಾಂವಿ**
ಅರ್ಥಶಾಸ್ತ್ರ ಉಪನ್ಯಾಸಕರು, ಎಸ್.ಸಿ.ಪಿ. ಪದವಿ ಮಹಾವಿದ್ಯಾಲಯ, ಮಹಾಲಿಂಗಪುರ, ಬಾಗಲಕೋಟೆ ಜಿಲ್ಲೆ

